॥ ಶ್ರೀಹರಿಃ ॥

1625▲

# ಮಹಿಳೆಯರಿಗೆ ಮಾರ್ಗದರ್ಶನ

नारी-शिक्षा-महिळेयरिगे मार्गदर्शन ( कन्नड )




ಹನುಮಾನ್ ಪ್ರಸಾದ್ ಪೋದ್ದಾರ್

॥ ಶ್ರೀ ಹರಿಃ ॥ 1625

# ಮಹಿಳೆಯರಿಗೆ ಮಾರ್ಗದರ್ಶನ

## नारीशिक्षा–महिळेयरिगे मार्गदर्शन (कन्नड़)

ತ್ವಮೇವ ಮಾತಾ ಚ ಪಿತಾ ತ್ವಮೇವ
ತ್ವಮೇವ ಬಂಧುಶ್ಚ ಸಖಾ ತ್ವಮೇವ ।
ತ್ವಮೇವ ವಿದ್ಯಾ ದ್ರವಿಣಂ ತ್ವಮೇವ
ತ್ವಮೇವ ಸರ್ವಂ ಮಮ ದೇವದೇವ ॥

ಹಿಂದೀ ಮೂಲ ಲೇಖಕರು :
**ಹನುಮಾನ್ ಪ್ರಸಾದ್ ಪೋದ್ದಾರ್**

ಅನುವಾದಕರು :
**ಯಡತೊರೆ ಎಸ್. ಅನಂತಮೂರ್ತಿರಾವ್**

ಪರಿಷ್ಕರಣೆ :
**ಕೀರ್ತನಾಚಾರ್ಯ ಲಕ್ಷ್ಮಣದಾಸ್ ವೇಲಣಕರ್**

*Books are also available at—*

Gita Press, Gorakhpur Ki Pustak-Dukan

1. 7/3, 2nd Cross, Lalbag Road,
   Bengaluru © (080) 65636566, 22955190
2. Dukan No. 41, 4-4-1, Dilshada Plaza,
   Sultan Bazar, Hyderabad © (040) 24758311,
   66758311
3. Bengaluru, Railway Station, Platform No.1
4. Secunderabad, Railway Station, Platform No. 1

**ಅನುವಾದಕರು :-**

**ಯಡತೊರೆ ಎಸ್. ಅನಂತಮೂರ್ತಿರಾವ್**

Twelfth Reprint 2018 2,000

Total 42,000

❖ **Price : ₹ 15**

**( Fifteen Rupees only )**

Printed & Published by :

**Gita Press, Gorakhpur—273005 (INDIA)**

(a unit of Gobind Bhavan-Karyalaya, Kolkata)

Phone : (0551) 2334721, 2331250, 2331251

web : **gitapress.org** e-mail : **booksales@gitapress.org**

**Visit gitapressbookshop.in for online purchase of Gitapress publications.**

॥ ಶ್ರೀ ಹರಿಃ ॥

# ವಿಷಯಾನುಕ್ರಮಣಿಕೆ

॥ ಶ್ರೀ ಹರಿಃ ॥

# ಮಹಿಳೆಯರಿಗೆ ಮಾರ್ಗದರ್ಶನ

## ೧. ಪತಿವ್ರತೆಯ ಆದರ್ಶ

### ಶಂಕರ - ಉಮಾ - ಸಂವಾದ

ಒಂದುಬಾರಿ ಶ್ರೀಮಹಾದೇವನು ಭಗವತಿ ಉಮೆಯನ್ನು ಶ್ರೇಷ್ಠ ಪತಿವ್ರತಾ ಸ್ತ್ರೀಯರ ಧರ್ಮವನ್ನು ವರ್ಣನೆಮಾಡೆಂದು ಹೇಳಿದನು. ಆ ಸಮಯದಲ್ಲಿ ಗಂಗೆ ಮೊದಲಾದ ಪವಿತ್ರ ನದೀರೂಪಿಣಿಯಾದ ದೇವಿಯರೂ ಉಪಸ್ಥಿತರಾಗಿದ್ದರು. ಆಗ ಉಮೆಯು ಯಾವ ಸ್ತ್ರೀಧರ್ಮಗಳನ್ನು ನಾನು ಅರಿತಿರುವೆನೋ ಅವುಗಳನ್ನು ತಿಳಿಸುತ್ತೇನೆ, ನೀವು ಸಾವಧಾನರಾಗಿ ಕೇಳಿರಿ ಎಂದಳು -

ವಿವಾಹದಲ್ಲಿ ಕನ್ಯೆಯ ಮನೆಯವರು ಅವಳಿಗೆ ಸ್ತ್ರೀಧರ್ಮದ ಉಪದೇಶವನ್ನು ಮೊದಲಿನಿಂದಲೇ ಕೊಡುತ್ತಾರೆ ಮತ್ತು ಸ್ತ್ರೀಯು ಅಗ್ನಿ-ಸಾಕ್ಷಿಯಾಗಿ ಪತಿಯ ಸಹಧರ್ಮಚಾರಿಣಿಯಾಗಿ ಬಿಡುತ್ತಾಳೆ. ಸ್ತ್ರೀಯು ಸುಂದರ-ಸ್ವಭಾವದವಳೂ, ವಿನಯ ಯುಕ್ತಳೂ, ಮಧುರಳೂ, ಹಿತಕರ ವಚನವನ್ನು ಹೇಳುವವಳೂ, ಸುಂದರ ದರ್ಶನಳೂ, ಪತಿಯಲ್ಲಿ ಅನನ್ಯ ಚಿತ್ತವಿಡುವವಳೂ, ಪ್ರಸನ್ನಮುಖಿಯೂ ಮತ್ತು ಪತ್ನಿಯೊಡನೆ ಅವನ ಧರ್ಮದ ಆಚರಣೆಯನ್ನು ಮಾಡುವವಳೂ ಆಗಬೇಕು. ಯಾವ ಸಾಧ್ವೀಸ್ತ್ರೀಯು ತನ್ನ ಪತಿಯನ್ನು ಸದಾ ದೇವತೆಯಂತೆ ನೋಡುತ್ತಾಳೋ ಅವಳು ಧರ್ಮಪರಾಯಣಳಾಗುತ್ತಾಳೆ ಮತ್ತವಳು ಧರ್ಮದ ಭಾಗಿಯಾಗುತ್ತಾಳೆ. ಯಾವ ಸ್ತ್ರೀಯು ತನ್ನ ಪತಿಯನ್ನು ದೇವತೆಯೆಂದು ತಿಳಿದು ಅವನ ಸೇವಾ-ಶುಶ್ರೂಷೆಯನ್ನು ಮಾಡುತ್ತಾಳೋ, ಪತಿಯನ್ನುಳಿದು ಬೇರೆಯಾರಲ್ಲಿಯೂ ಪತಿಭಾವವನ್ನು ಇಡುವುದಿಲ್ಲವೋ, ಎಲ್ಲ ಪರಿಸ್ಥಿತಿಯಲ್ಲಿಯೂ ಸುಂದರವಾದ ಆಚರಣೆಯನ್ನು ಕೈಬಿಡದೆ ನಡೆಸುತ್ತಾಳೋ, ಯಾರನ್ನು ನೋಡಿದ ಮಾತ್ರದಿಂದ ಪತಿಗೆ ಸುಖ ಲಭಿಸುತ್ತದೆಯೋ, ಯಾರು ಸದಾ ಸ್ವಾಮಿಯ ಮುಖವನ್ನೇ ನೋಡುವಂತಹಳಾಗಿರುತ್ತಾಳೋ ಮತ್ತು ನಿಯಮಿತವಾದ ಭೋಜನವನ್ನು ಮಾಡುತ್ತಾಳೋ ಅವಳು ಧರ್ಮಚಾರಿಣಿಯಾಗುತ್ತಾಳೆ. ಪತಿ-ಪತ್ನಿಯರಿಬ್ಬರೂ ಒಟ್ಟಿಗಿದ್ದುಕೊಂಡು ಉತ್ತಮವಾದ ಧರ್ಮವನ್ನು ಪಾಲಿಸಬೇಕು - ಎಂಬ ದಾಂಪತ್ಯ ಧರ್ಮವನ್ನು ಕೇಳಿ ಅದರಲ್ಲಿ ತೊಡಗಿರುತ್ತಾಳೋ ಆ ಸ್ತ್ರೀಯನ್ನು ಪತಿಯಂತೆ ಸಮಾನ ವ್ರತವುಳ್ಳವಳೆಂದು ತಿಳಿಯಬೇಕು. ಪತಿಯನ್ನು ಸದಾ ಈಶ್ವರನಿಗೆ ಸಮಾನನೆಂದು ಭಾವಿಸುವ ಸ್ತ್ರೀಯನ್ನು

ಸಹಧರ್ಮಿಣಿಯೆಂದು ತಿಳಿಯಬೇಕು. ಯಾವ ಸ್ತ್ರೀಯು ತನ್ನ ಪತಿಯನ್ನು ದೇವತೆಗೆ ಸಮಾನವೆಂದು ತಿಳಿದು ಸೇವಿಸುತ್ತಾಳೋ ಅವಳು ಯಾವ ವಶೀಕರಣದ ಸಹಾಯವಿಲ್ಲದೆ ತನ್ನ ಪತಿಯನ್ನು ವಶಪಡಿಸಿಕೊಳ್ಳುತ್ತಾಳೆ. ಇಂತಹ ಪ್ರಸನ್ನ ಮನಸ್ಸಿನವಳೂ, ಸುಂದರ ಪಾತಿವ್ರತ್ಯವನ್ನುಳ್ಳವಳೂ, ಸುಖದರ್ಶನಳೂ, ಪತಿಯಲ್ಲಿ ಅನನ್ಯಚಿತ್ತವುಳ್ಳವಳೂ ಮತ್ತು ಹಸನ್ಮುಖಿಯಾದ ಸ್ತ್ರೀಯನ್ನು ಧರ್ಮಚಾರಿಣಿಯೆಂದು ತಿಳಿಯಬೇಕು. ಪತಿಯು ಕಠೋರ ವಚನವನ್ನು ಆಡಿದಾಗ ಅಥವಾ ಕ್ರೂರ ದೃಷ್ಟಿಯಿಂದ ನೋಡಿದಾಗಲೂ ಯಾವ ಸ್ತ್ರೀಯು ಪ್ರಸನ್ನ ಮುಖಿಯಾಗಿರುತ್ತಾಳೆಯೋ ಅವಳೇ ಪತಿವ್ರತೆಯು. ಯಾವ ಸ್ತ್ರೀಯು ತನ್ನ ಪತಿಯನ್ನುಳಿದು ಪುಲ್ಲಿಂಗವಾಚಕ ಚಂದ್ರಮ, ಸೂರ್ಯ ಮತ್ತು ವೃಕ್ಷವನ್ನೂ ಸಹ ನೋಡಲಿಚ್ಛಿಸುವುದಿಲ್ಲವೋ ಆ ಸುಂದರಿಯಾದ ಸ್ತ್ರೀಯನ್ನು ಧರ್ಮಚಾರಿಣಿಯೆಂದು ತಿಳಿಯಬೇಕು. ಯಾವ ಸ್ತ್ರೀಯು ಧನಹೀನ, ರೋಗಿ, ದೀನ, ಮಾರ್ಗದಲ್ಲಿ ಬಳಲಿದ ತನ್ನ ಸ್ವಾಮಿಯ ಸೇವೆಯನ್ನು, ಪುತ್ರನಲ್ಲಿರುವ ಸ್ನೇಹಕ್ಕೆ ಸಮಾನವಾದ ಸ್ನೇಹದಿಂದ ಕೂಡಿದವಳಾಗಿ ಮಾಡುವಳೋ ಅವಳೇ ಧರ್ಮಚಾರಿಣಿಯು, ಯಾವ ಸ್ತ್ರೀಯು ಸಂಯಮದಿಂದಿರುತ್ತಾಳೋ, ದಕ್ಷಳಾಗಿದ್ದಾಳೋ, ಪತಿಯಿಂದಲೇ ಪುತ್ರೋತ್ಪತ್ತಿಯನ್ನು ಪಡೆಯುವಳೋ, ಪತಿಗೆ ಪ್ರಿಯಳಾಗಿರುವಳೋ ಮತ್ತು ತನ್ನ ಪತಿಯನ್ನು ಪ್ರಾಣಕ್ಕೆ ಸಮಾನವೆಂದು ತಿಳಿಯುವಳೋ ಆ ಸ್ತ್ರೀಯೇ ಧರ್ಮಚಾರಿಣಿಯಾಗಿದ್ದಾಳೆ.

ಯಾವ ಸ್ತ್ರೀಯು ಪತಿಯ ಸೇವೆಯನ್ನು ಪ್ರಸನ್ನ ಮನಸ್ಸಿನಿಂದ ಮಾಡುತ್ತಾಳೋ, ಬೇಸರಿಸುವುದಾಗಲೀ, ಭಾರವೆಂದಾಗಲೀ ಎಣಿಸುವುದಿಲ್ಲವೋ, ಪತಿಯಲ್ಲಿ ವಿಶ್ವಾಸವುಳ್ಳವಳಾಗಿ ಸದಾ ವಿನಯಪೂರ್ವಕ ವ್ಯವಹಾರವನ್ನು ಮಾಡುವಳೋ, ಅವಳನ್ನು ಧರ್ಮಚಾರಿಣಿಯೆಂದು ತಿಳಿಯಬೇಕು. ಯಾವ ಸ್ತ್ರೀಯು ಪತಿಯ ಇಚ್ಛೆಯನ್ನೇ ತನ್ನದಾಗಿಸಿಕೊಳ್ಳುವಳೋ, ಅವನಿಚ್ಛೆಗಿಂತ ಬೇರೆ ಯಾವುದೇ ಇಚ್ಛೆ ಇಲ್ಲವೋ, ಯಾವ ವಿಷಯದಲ್ಲಿಯೇ ಆಗಲಿ ಭೋಗದಲ್ಲಿ ಮತ್ತು ಸುಖದಲ್ಲಿ ಪತಿಗೆ ಅನನ್ಯಳಾಗಿರುವಳೋ ಅವಳನ್ನು ಧರ್ಮಚಾರಿಣಿಯೆಂದು ತಿಳಿಯಬೇಕು. ಯಾವ ಸ್ತ್ರೀಯು ಪ್ರಾತಃಕಾಲ ಏಳುವುದರಲ್ಲಿ ಪ್ರೀತಿಯುಳ್ಳವಳಾಗಿರುವಳೋ, ಮನೆಗೆಲಸದಲ್ಲಿ ದತ್ತಚಿತ್ತಳಾಗಿರುತ್ತಾಳೋ, ಮನೆಯನ್ನು ಸ್ವಚ್ಛವಾಗಿಡುವುದರ ಜತೆಗೆ ಗಾರ್ಹಸ್ಥ್ಯವನ್ನು ವ್ಯವಸ್ಥಿತವಾಗಿಡುತ್ತಾಳೋ, ಪತಿಯೊಡನಿದ್ದು ಸದಾ ಯಜ್ಞವನ್ನು ಮಾಡುತ್ತಾಳೋ, ಪುಷ್ಪಾದಿಗಳಿಂದ ದೇವತೆಗಳ ಪೂಜೆ ಮಾಡುತ್ತಾಳೋ, ಪತಿಯ ಜೊತೆಗೆ ದೇವತೆ, ಅತಿಥಿ, ನೌಕರ ಮತ್ತು ಅವಶ್ಯವಾಗಿ ಪಾಲಿಸಬೇಕಾದ ಅತ್ತೆ-ಮಾವ ಮುಂತಾದವರನ್ನು ಭೋಜನಾದಿಗಳಿಂದ ಚೆನ್ನಾಗಿ ಎಲ್ಲ ರೀತಿಯಿಂದಲೂ ತೃಪ್ತಿಪಡಿಸಿ ಉಳಿದಿರುವ ಅನ್ನವನ್ನು ಭುಂಜಿಸುತ್ತಾಳೋ ಆ ಸ್ತ್ರೀಯು ಧರ್ಮಚಾರಿಣಿಯೂ ಗುಣವತಿಯೂ ಆದ ಸ್ತ್ರೀಯು

ತನ್ನ ಅತ್ತೆ-ಮಾವಂದಿರ ಚರಣಗಳನ್ನು ಸದಾ ಸೇವಿಸುತ್ತಾಳೋ, ತವರು ಮನೆಯಲ್ಲಿ ತಂದೆ-ತಾಯಿಯರಿಗೆ ಸುಖವನ್ನುಂಟು ಮಾಡುತ್ತಾಳೋ ಅವಳು ತಪೋಧನಳೆಂದೆನಿಸಿಕೊಳ್ಳುತ್ತಾಳೆ. ಯಾವ ಸ್ತ್ರೀಯು ಬ್ರಾಹ್ಮಣ, ದುರ್ಬಲರು, ದೀನರು, ಅನಾಥರು, ಅಂಧರು ಮತ್ತು ಕುಂಟ-ಹೆಳವರಿಗೆ ಅನ್ನಾದಿಗಳನ್ನು ನೀಡಿ ಅವರುಗಳನ್ನು ಪೋಷಿಸುತ್ತಾಳೋ ಅವಳು ಪತಿವ್ರತ ಧರ್ಮದವಳೆಂದೆನಿಸಿಕೊಳ್ಳುತ್ತಾಳೆ. ಯಾವ ಸ್ತ್ರೀಯು ಕಠಿಣವಾದ ನಿಯಮಗಳನ್ನು ಪಾಲಿಸುತ್ತಾಳೋ, ಚಿತ್ತವನ್ನು ತನ್ನ ವಶದಲ್ಲಿ ಇಟ್ಟುಕೊಳ್ಳುತ್ತಾಳೋ, ಸುಖ-ಲೋಲುಪತೆಯ ಹಿಡಿತಕ್ಕೆ ಸಿಕ್ಕಿಹಾಕಿಕೊಳ್ಳುವುದಿಲ್ಲವೋ, ಪತಿಪರಾಯಣೆಯಾಗಿರುತ್ತಾಳೆಯೋ ಆ ಸತಿಯು ಪತಿವ್ರತೆಯಾಗಿದ್ದಾಳೆ. ಸ್ತ್ರೀಯರಿಗೆ ಪತಿಯೇ ದೇವರು, ಪತಿಯೇ ಮಿತ್ರ, ಪತಿಯೇ ಗತಿ. ಪತಿಗೆ ಸಮಾನವಾಗಿ ಬೇರಾವ ಗತಿಯೂ ಸ್ತ್ರೀಯಾದವಳಿಗೆ ಇರುವುದಿಲ್ಲ. ಪತಿಯ ಪ್ರಸನ್ನತೆಗೆ ವಿರೋಧವಾಗಿ ಸ್ತ್ರೀಯು ಸ್ವರ್ಗವನ್ನೂ ಬಯಸಬಾರದು. ಪತಿಯು ದರಿದ್ರನೇ ಆಗಿರಲಿ, ವ್ಯಾಧಿಗ್ರಸ್ತನಾಗಿರಲಿ, ಶಾಪದಿಂದ ಪೀಡಿತನಾಗಿರಲಿ, ಯಾವುದೇ ಸ್ಥಿತಿಯಲ್ಲಿರಲಿ ಪತಿಯು ಏನನ್ನು ಮಾಡಲು ಹೇಳುತ್ತಾನೋ ಅದನ್ನು ಸ್ತ್ರೀಯು ನಿಃಸ್ಸಂಕೋಚಳಾಗಿ ಮಾಡಬೇಕು.

(ಮಹಾಭಾರತ ಅನುಶಾಸನಪರ್ವದಿಂದ.)



## ೨. ಲಕ್ಷ್ಮೀ-ರುಕ್ಮಿಣೀ-ಸಂವಾದ

ಒಂದು ದಿನ ರುಕ್ಮಿಣೀದೇವಿಯು ಶ್ರೀಲಕ್ಷ್ಮೀದೇವಿಯನ್ನು ನೋಡಲು ವೈಕುಂಠಕ್ಕೆ ಹೋದಳು. ಪರಸ್ಪರ ಅನೇಕ ವಿಷಯಗಳ ಚರ್ಚೆ ನಡೆಯಿತು. ಹೀಗೆ ಚರ್ಚೆ ನಡೆಯುತ್ತಿರುವಾಗ ಇದ್ದಕ್ಕಿದ್ದಂತೆ ರುಕ್ಮಿಣಿಯು - ದೇವಿ ! ನೀನು ಎಂತಹ ಸ್ತ್ರೀಯರ ಹತ್ತಿರ ಸದಾ ಇರುತ್ತೀಯೆ, ನಿನಗೆ ಎಂತಹ ಸ್ತ್ರೀಯರು ಪ್ರೀತಿಪಾತ್ರರು; ಯಾವ ಉಪಾಯಗಳಿಂದ ಸ್ತ್ರೀಯರು ನಿನ್ನ ಪ್ರೀತಿಪಾತ್ರರಾಗಬಲ್ಲರು? - ಎಂದು ಲಕ್ಷ್ಮೀದೇವಿಯನ್ನು ಕೇಳಲಾಗಿ ಅವಳು ನಕ್ಕು ಹೇಳತೊಡಗಿದಳು - ಯಾವ ಸ್ತ್ರೀಗೆ ತನ್ನ ಸ್ವಾಮಿಯಲ್ಲಿ ಅಚಲವಾದ ಭಕ್ತಿಯಿದೆಯೋ ಅವಳು ನನಗೆ ಎಲ್ಲರಿಗಿಂತ ಹೆಚ್ಚು ಪ್ರೀತಿಪಾತ್ರಳು. ನಾನು ಅವಳನ್ನು ಕ್ಷಣಮಾತ್ರವೂ ನನ್ನಿಂದ ಬೇರ್ಪಡಿಸಲಾರೆನು. ಇಂತಹ ಸ್ತ್ರೀಯರ ಸಹವಾಸದಿಂದ ನನಗೆ ಹರ್ಷವಾಗುತ್ತದೆ. ನಾನು ಅವರ ಸತ್ಸಂಗವನ್ನು ಬಯಸುವುದೇ ಅಲ್ಲದೆ, ಸದಾ ಅವರ ಜೊತೆಯಲ್ಲಿ ಇರುತ್ತೇನೆ. ಮತ್ತೂ ಎಲ್ಲ

ಗುಣಗಳಿದ್ದು ಯಾವ ಸ್ತ್ರೀಗೆ ತನ್ನ ಪತಿಯಲ್ಲಿ ಶ್ರದ್ಧೆಯಿಲ್ಲವೋ ಅವಳನ್ನು ನಾನು ಧಿಕ್ಕರಿಸುತ್ತೇನೆ ಮತ್ತವರನ್ನು ನನ್ನ ಬಳಿಬರಲು ಬಿಡುವುದಿಲ್ಲ. ಯಾವ ಸ್ತ್ರೀ ಕ್ಷಮಾಶೀಲಳಾಗಿದ್ದಾಳೆಯೋ ಅಂದರೆ ಅಪರಾಧ ಮಾಡುವವರನ್ನು ಕೂಡ ಕ್ಷಮಿಸಿಬಿಡುತ್ತಾಳೋ ಅವಳ ಮನೆಯಲ್ಲಿ ನಾನು ಇರುತ್ತೇನೆ. ಸದಾ ಸತ್ಯವನ್ನು ಹೇಳುವ ಸ್ತ್ರೀಯೊಡನೆ ನನಗೆ ವಿಶೇಷ ಪ್ರೀತಿ ಮತ್ತು ಸರಳ ಸ್ವಭಾವದಿಂದ ಕೂಡಿದ ಸ್ತ್ರೀಯೇ ನನ್ನನ್ನು ಪಡೆಯ-ಬಲ್ಲಳು. ಕಪಟ, ವಂಚನೆ ಮತ್ತು ಚಾತುರ್ಯದಿಂದ ಇತರರನ್ನು ವಂಚಿಸುವ ಮತ್ತು ಸುಳ್ಳುಹೇಳುವವಳನ್ನು ನಾನು ಧಿಕ್ಕರಿಸುತ್ತೇನೆ. ಇಷ್ಟೇ ಅಲ್ಲ, ನಾನು ಅಂತಹವಳಿಗೆ ಎಂದೂ ದರ್ಶನವನ್ನು ಕೊಡುವುದಿಲ್ಲ. ಪವಿತ್ರರಾಗಿರುವ, ಶುದ್ಧವಾದ ಆಚರಣೆಯನ್ನು ಹೊಂದಿರುವ, ದೇವರು ಮತ್ತು ಬ್ರಾಹ್ಮಣರಲ್ಲಿ ಭಕ್ತಿಯುಳ್ಳ, ಪಾತಿವ್ರತ್ಯಧರ್ಮದ ಪಾಲನೆಯನ್ನು ಮಾಡುವವಳು, ಎಲ್ಲಕ್ಕಿಂತ ಮಿಗಿಲಾಗಿ ಅತಿಥಿ ಸೇವೆಯನ್ನು ಮಾಡಲು ಸದಾ ಕಾಲ ಸಿದ್ಧರಾಗಿರುವ ಸ್ತ್ರೀಯರು ನನ್ನನ್ನು ಬೇಗ ಪಡೆಯುತ್ತಾರೆ.

ಯಾರು ಇಂದ್ರಿಯಗಳನ್ನು ಗೆದ್ದಿದ್ದಾರೆಯೋ, ಯಾರಿಗೆ ತನ್ನ ಪತಿಯನ್ನುಳಿದು ಬೇರೆ ಪುರುಷರ ಮುಖದರ್ಶನವೂ ಶೋಭಿಸುವುದಿಲ್ಲವೋ, ಅಂತಹವರ ಮನೆಯನ್ನು ನಾನು ಎಂದಿಗೂ ಬಿಟ್ಟು ಹೋಗುವುದಿಲ್ಲ. ಇಂತಹ ಸ್ತ್ರೀಯರು ನನ್ನನ್ನು ತಮ್ಮ ವಶವನ್ನಾಗಿಟ್ಟುಕೊಳ್ಳುತ್ತಾರೆ. ಇದಾದ ನಂತರ ಲಕ್ಷ್ಮಿಯು ರುಕ್ಮಿಣಿಗೆ ಈಗಿನ್ನು ನಾನು ಎಂತಹ ಸ್ತ್ರೀಯರಲ್ಲಿ ಬೇಸರಪಡುತ್ತೇನೆ ಮತ್ತು ಯಾರನ್ನು ಧಿಕ್ಕರಿಸುತ್ತೇನೆಂದು ಹೇಳುತ್ತೇನೆ. ಸದಾ ತಮ್ಮ ಪತಿಯ ವಿರುದ್ಧ ಕೆಲಸ ಮಾಡುವ ಸ್ತ್ರೀಯರು, ಪತಿಯನ್ನು ವಿಧವಿಧವಾಗಿ ಹಿಂಸಿಸುವವರು, ಕಟುವಚನಗಳನ್ನಾಡುವವರು, ನನ್ನ ಕೋಪಕ್ಕೆ ಗುರಿಯಾಗುತ್ತಾರೆ. ನಾನು ಎಂದಿಗೂ ಅವರ ಮುಖವನ್ನು ಸಹ ನೋಡುವುದಿಲ್ಲ. ಯಾವ ಸ್ತ್ರೀಯರು ತಮ್ಮ ಪತಿಯ ಮನೆಯನ್ನು ತೊರೆದು ಇನ್ನೊಬ್ಬರ ಮನೆಯಲ್ಲಿ ಇರಲು ಆಸಕ್ತರಾಗಿರುವರೋ, ಬೇರೆ ಪುರುಷನಲ್ಲಿ ಪ್ರೇಮವಿಡುವರೋ ಅಂತಹವರು ನರಕದಲ್ಲಿ ಹುಳುವಾಗುತ್ತಾರೆ. ನಾನು ಸ್ವಪ್ನದಲ್ಲಿಯೂ ಅಂತಹ ಸ್ತ್ರೀಯರ ಬಳಿ ಹೋಗುವುದಿಲ್ಲ.

ಯಾವ ಸ್ತ್ರೀಯರು ಲಜ್ಜಾರಹಿತರಾಗಿದ್ದಾರೋ, ಜಗಳಗಂಟಿಗಳೂ, ಹೊಡೆದಾಟ ಪ್ರಿಯರಾಗಿದ್ದಾರೋ, ಕಟುವಾಕ್ಯಗಳನ್ನು ಆಡುತ್ತಾರೋ, ಹೆಚ್ಚು ಮಾತನಾಡುತ್ತಾರೋ, ಯಾರೆಂದರೆ ಅವರೊಡನೆ ಮಾತುಕತೆಯಾಡುತ್ತಾರೋ, ಯಾರೆಂದರೆ ಅವರೊಡನೆ ಕದನಕ್ಕಿಳಿಯುತ್ತಾರೋ, ಕ್ರೋಧವು ಯಾರ ಸ್ವಭಾವವಾಗಿದೆಯೋ, ಮಾತುಮಾತಿಗೆ ಸಿಡಿಮಿಡಿಗುಟ್ಟುತ್ತಾರೋ, ಸ್ನೇಹ ಮತ್ತು ದಯೆ ಯಾರಿಂದ ದೂರವಾಗಿದೆಯೋ,

ಅಂತಹ ಸ್ತ್ರೀಯರನ್ನು ನಾನು ತ್ಯಾಗಮಾಡುತ್ತೇನೆ. ಯಾರು ಅಪವಿತ್ರರಾಗಿರುತ್ತಾರೋ, ಹೆಚ್ಚು ನಿದ್ರಿಸುತ್ತಾರೋ, ಆಲಸ್ಯಕ್ಕೆ ವಶರಾಗಿರುತ್ತಾರೋ, ಹಿರಿಯರ ಮಾತನ್ನು ಮನ್ನಿಸುವುದಿಲ್ಲವೋ, ಕೆಲಸಮಾಡುವಾಗ ಪರಿಣಾಮದ ವಿಚಾರ ಮಾಡುವುದಿಲ್ಲವೋ, ಮನೆಯನ್ನು ವ್ಯವಸ್ಥಿತವಾಗಿಡುವುದಿಲ್ಲವೋ, ಮನೆಯ ವಸ್ತುಗಳನ್ನು ಎಲ್ಲಂದರಲ್ಲಿ ಎಸೆದುಬಿಡುತ್ತಾರೋ, ಅಂತಹ ಸ್ತ್ರೀಯರು ಎಂದಿಗೂ ನನ್ನನ್ನು ಪಡೆಯಲಾರರು.

❑❑

# ೩. ಸ್ತ್ರೀ-ಪುರುಷರ ಪರಸ್ಪರ ಸಂಬಂಧ

ಪುರುಷ ಮತ್ತು ಪ್ರಕೃತಿಯ ಸಂಯೋಗದಿಂದಲೇ ಜಗತ್ತು ಉಂಟಾಗಿದೆ ಮತ್ತು ಎಲ್ಲಿಯವರೆಗೆ ಜಗತ್ತಿರುವುದೋ ಅಲ್ಲಿಯವರೆಗೆ ಪುರುಷ-ಪ್ರಕೃತಿಯ ಈ ಸಂಯೋಗವೂ ಇದ್ದೇ ಇರುತ್ತದೆ. ಪುರುಷ-ಪ್ರಕೃತಿಯರು ಅನಾದಿ. ಪುರುಷ-ಸಂಸರ್ಗದಿಂದ ಪ್ರಕೃತಿಯೇ ಸಂಪೂರ್ಣ ಜೀವಜಗತ್ತನ್ನು, ಸಮಸ್ತವಿಕಾರಗಳನ್ನು ಮತ್ತು ನಿಖಿಲ ಗುಣಗಳನ್ನು ಉತ್ಪತ್ತಿಮಾಡುತ್ತಾಳೆ. (ಗೀತಾ ೧೩/೧೯; ೧೪/೩-೪) ಪ್ರಕೃತಿ ಶಕ್ತಿಯಾಗಿದ್ದರೆ ಪುರುಷನು ಶಕ್ತಿವಂತನಾಗಿದ್ದಾನೆ. ಶಕ್ತಿಯನ್ನುಳಿದು ಶಕ್ತಿವಂತನಿಗೆ ಅಸ್ತಿತ್ವವಿಲ್ಲ ಮತ್ತು ಶಕ್ತಿವಂತನನ್ನುಳಿದು ಶಕ್ತಿಗೆ ಯಾವ ಸ್ಥಾನವೂ ಇಲ್ಲ. ಇವುಗಳ ಸಂಬಂಧ ಅವಿನಾಭಾವವಾಗಿದೆ. ಇದೇ ರೀತಿ ನರ-ನಾರಿಯರ ಸಂಬಂಧವೂ ಇದೆ. ನರನು ಪುರುಷನ ಪ್ರತೀಕವಾದರೆ ನಾರಿಯು ಪ್ರಕೃತಿಯ ಪ್ರತೀಕವಾಗಿದ್ದಾಳೆ. ನಾರಿಯ ಹೆಸರೇ 'ಪ್ರಕೃತಿ' ಎಂದು. ಒಂದರ ಅಭಾವದಲ್ಲಿ ಇನ್ನೊಂದು ಅಪೂರ್ಣ. ಇದೇ ತತ್ತ್ವವನ್ನು ಆಧರಿಸಿ ಹಿಂದೂ ಶಾಸ್ತ್ರಗಳು ನರ-ನಾರಿಯರ ಕರ್ತವ್ಯ-ಕರ್ಮಗಳನ್ನು ನಿರ್ದೇಶಿಸಿವೆ. ಇಬ್ಬರ ಕರ್ತವ್ಯವು ಬೇರೆ ಬೇರೆಯಾಗಿದ್ದರೂ ಅವರು ಒಂದೇ ಶರೀರದ ಬಲ ಮತ್ತು ಎಡ ಅಂಗಗಳ ಕಾರ್ಯಗಳಂತೆ ಒಂದೇ ಶರೀರದ ಪೂರಕಗಳಾಗಿವೆ ಮತ್ತು ಒಂದೇ ಶರೀರದ ಸ್ಥಿತಿ, ಸಮೃದ್ಧಿ, ಪುಷ್ಟಿ ಮತ್ತು ತುಷ್ಟಿಗೆ ಕಾರಣವಾಗಿದ್ದಾರೆ. ಒಬ್ಬರನ್ನುಳಿದು ಇನ್ನೊಬ್ಬರ ಕೆಲಸ ಸಾಗುವಂತಿಲ್ಲ. ತಮ್ಮ ತಮ್ಮ ಕ್ಷೇತ್ರಗಳಲ್ಲಿ ಇಬ್ಬರಿಗೂ ತಮ್ಮದೇ ಆದ ಪ್ರಧಾನತೆ ಮತ್ತು ಶ್ರೇಷ್ಠತೆಯಿದೆ. ಆದರೆ ಅವರಿಬ್ಬರ ಶ್ರೇಷ್ಠತೆಯು ಒಂದೇ ಪರಮ 'ಶ್ರೇಷ್ಠ'ದ ಪೂರ್ಣತೆಯಲ್ಲಿ ತೊಡಗಿದೆ. ಇಬ್ಬರೂ ಸೇರಿ ತಮ್ಮ ತಮ್ಮ ಬೇರೆ-ಬೇರೆಯಾದ ಕರ್ತವ್ಯಗಳನ್ನು ಪಾಲಿಸುತ್ತ ಜೀವನದ ಪರಮ ಮತ್ತು ಚರಮ ಲಕ್ಷ್ಯವಾದ ಭಗವಂತನನ್ನು ಸೇರಬಲ್ಲರು. ನರನು ಪತಿವ್ರತಾ ನಾರಿಯ ದಿವ್ಯ, ತ್ಯಾಗಮಯ ಆದರ್ಶವನ್ನು ಮುಂದಿಟ್ಟುಕೊಂಡು ಭಗವಂತನಿಗೆ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡು

ಭಗವಂತನನ್ನು ಹೊಂದುತ್ತಾನಾದರೆ ನಾರಿಯು ತನ್ನ ಅಭಿನ್ನಸ್ವರೂಪನಾದ ಸ್ವಾಮಿಯನ್ನು ಸರ್ವಾಂಗ ಪೂರ್ಣವಾಗಿ ಅನುಗಮನ ಮಾಡಿ ಅವನು ಜೀವಿಸಿರುವಾಗಲೂ, ಪ್ರಾಣವನ್ನು ತ್ಯಜಿಸಿ ಹೊರಟುಹೋದನಂತರವೂ ಅವಳು ಭಗವಂತನನ್ನು ಸಹಜವಾಗಿಯೇ ಪಡೆದುಕೊಳ್ಳುತ್ತಾಳೆ. ಇದು ಸ್ತ್ರೀ-ಪುರುಷರ ನೇರವಾದ ಮತ್ತು ಸರಳವಾದ ಸ್ವರೂಪವೂ, ಕರ್ತವ್ಯವೂ ಆಗಿದೆ. ನಾರಿಯು ತನ್ನ ಕ್ಷೇತ್ರಕ್ಕೆ ಅನುಗುಣವಾಗಿ ತನ್ನದೇ ಆದ ದೃಷ್ಟಿಕೋನದಿಂದ ನರನ ಸೇವೆಯನ್ನು ಭಗವಂತನ ಪ್ರಾಪ್ತಿಗಾಗಿ ಮಾಡುತ್ತಾಳೆ, ನರನೂ ಸಹ ತನ್ನ ಕ್ಷೇತ್ರದಲ್ಲಿದ್ದುಕೊಂಡು ನಾರಿಯ ಸೇವೆಯನ್ನು ಸ್ವೀಕರಿಸಿ ತನ್ನ ಕ್ಷೇತ್ರಕ್ಕೆ ಅನುಕೂಲವಾದ ಕಾರ್ಯಗಳಿಂದ ಭಗವಂತನ ಪ್ರಾಪ್ತಿಗಾಗಿ ಅವನ ಸೇವೆಯನ್ನು ಮಾಡುತ್ತಾನೆ. ಇಬ್ಬರ ಸ್ಥಾನ ಮತ್ತು ಕರ್ತವ್ಯಗಳು ಪರಸ್ಪರ ಮಹತ್ತ್ವಪೂರ್ಣವೂ, ಆದರಣೀಯವೂ, ಅನಿವಾರ್ಯವೇ ಅಲ್ಲದೆ ಅಭಿನಂದನೀಯವೂ ಆಗಿದೆ ಮತ್ತು ಇಬ್ಬರೂ ತಮತಮಗಾಗಿ ಆದರ್ಶಪ್ರಾಯರಾಗಿದ್ದಾರೆ.

ಇದೇ ಭಾರತೀಯ ನರ-ನಾರಿಯರ ಸ್ವರೂಪವಾಗಿದೆ. ನರನು ನಾರಿಯ ಸೇವಕ, ಸ್ನೇಹಿತ ಮತ್ತು ಒಡೆಯನಾಗಿದ್ದಾನೆ. ಇದೇ ರೀತಿ ನಾರಿಯೂ ಸಹ ನರನ ಸೇವಕಿ, ಸಖಿ ಮತ್ತು ಸ್ವಾಮಿನಿಯಾಗಿದ್ದಾಳೆ. ಆದ್ದರಿಂದಲೇ ನಾರಿಯು ಪತಿವ್ರತೆಯಾಗಿದ್ದಾಳೆ. ಈ ಪಾತಿವ್ರತ್ಯವು ವಸ್ತುತಃ ಪರಮ ಪತಿ ಪರಮಾತ್ಮನನ್ನು ಪಡೆಯುವ ಮತ್ತು ಪ್ರೀತಿಯ ಉದ್ದೇಶದಿಂದಲೇ ಇದೆ. ಆದ್ದರಿಂದಲೇ ಪ್ರಾಚೀನ ಮತ್ತು ಅರ್ವಾಚೀನ ಕಾಲದ ಕೆಲವು ಬ್ರಹ್ಮವಾದಿನಿ ಮತ್ತು ಭಕ್ತಿಮತಿಯುಳ್ಳ ಗಾರ್ಗಿ ಮತ್ತು ಮೀರಾ ಮೊದಲಾದ ನಾರಿಯರು ಎಲ್ಲರೊಡನೆ ಸಂಬಂಧವನ್ನು ಕಡಿದುಕೊಂಡು ಏಕಮಾತ್ರ ಭಗವಂತನೊಡನೆ ಸಂಬಂಧವನ್ನು ಜೋಡಿಸಿಕೊಂಡು ಭಗವಂತನನ್ನು ಪಡೆದಿರುತ್ತಾರೆ. ಇಂದಿಗೂ ಇಂತಹ ಪವಿತ್ರ ಹೃದಯವುಳ್ಳ ನಾರಿಯರು ಇದ್ದಾರೆ ಮತ್ತು ಮುಂದೆಯೂ ಇರುವರು. ಆದರೆ ಜಗಚ್ಚಕ್ರವನ್ನು ಚೆನ್ನಾಗಿ ಸಂಚಾಲನೆಮಾಡಲು ನಾರಿಯ ಈ ಆದರ್ಶಕ್ಕಿಂತ ಅವಳ 'ಪಾತಿವ್ರತ್ಯ'ದ ಆದರ್ಶವು ವಿಶೇಷವಾಗಿ ಉಪಯೋಗವೂ ಆವಶ್ಯಕವೂ ಆಗಿದೆ. ಇದಕ್ಕೋಸ್ಕರವಾಗಿಯೇ ಶಾಸ್ತ್ರಗಳಲ್ಲಿ ಸ್ತ್ರೀಧರ್ಮದ ಹೆಸರಿನಲ್ಲಿ ಪಾತಿವ್ರತ್ಯವನ್ನೇ ನಿರ್ದೇಶಿಸಲಾಗಿದೆ. ಈ ಪಾತಿವ್ರತ್ಯದ ಪ್ರಭಾವದಿಂದಾಗಿಯೇ ನಾರಿಯು ನರನನ್ನು ಪೂರ್ಣವಾಗಿಸುತ್ತಾಳೆ. ಅಲ್ಲದೆ ಮಾತೃರೂಪದಿಂದ ಜಗತ್ತಿಗೆ ಪರಮಪವಿತ್ರ ಚರಿತ್ರವಂತನಾದ ಪುರುಷರತ್ನವನ್ನು ನೀಡುವ ಮೂಲಕ ಭಗವಂತನ ಮಂಗಳಕರವಾದ ಉದ್ದೇಶವನ್ನು ಪೂರ್ಣಗೊಳಿಸುತ್ತಾಳೆ.

□□

# ೪. ಭಾರತೀಯ ನಾರಿಯ ಸ್ವರೂಪ ಹಾಗೂ ಹೊಣೆಗಾರಿಗೆ

ವರ್ತಮಾನಯುಗದಲ್ಲಿ ಎಲ್ಲ ಕಡೆಗಳಲ್ಲಿ ಸ್ವತಂತ್ರತೆಯ ಆಕಾಂಕ್ಷೆಯು ಜಾಗ್ರತವಾಗಿದೆ. ನಾರಿಯ ಹೃದಯದಲ್ಲಿಯೂ ಇದಾಗಿರುವುದು ಸ್ವಾಭಾವಿಕವಾಗಿದೆ. ಸ್ವತಂತ್ರತೆಯು ಪರಮ ಶ್ರೇಷ್ಠವಾದ ಧರ್ಮವಾಗಿದೆ ಎನ್ನುವುದರಲ್ಲಿ ಸಂದೇಹವಿಲ್ಲ ಮತ್ತು ನರ-ನಾರಿಯರು ಸ್ವತಂತ್ರವಾಗಿರಬೇಕಾದದು ಆವಶ್ಯಕವೂ ಆಗಿದೆ. ಇಬ್ಬರೂ ಎಲ್ಲಿಯವರೆಗೆ ಸ್ವತಂತ್ರರಾಗುವುದಿಲ್ಲವೋ ಅಲ್ಲಿಯವರೆಗೆ ಯಥಾರ್ಥ ಪ್ರೇಮವು ಇರುವುದೂ ಇಲ್ಲ ಎಂಬುದು ಪರಮ ಸತ್ಯವಾಗಿದೆ. ಆದರೆ ಇಬ್ಬರ ಸ್ವಾತಂತ್ರ್ಯದ ಕ್ಷೇತ್ರ ಮತ್ತು ಮಾರ್ಗ ಎರಡೋ ಅಥವಾ ಒಂದೇಯೋ ಎನ್ನುವುದು ವಿಚಾರಣೀಯವಾದ ಪ್ರಶ್ನೆಯಾಗಿದೆ. ನರ ಮತ್ತು ನಾರಿಯರ ಶಾರೀರಿಕ ಮತ್ತು ಮಾನಸಿಕ ಸಂಘಟನೆಯು ನೈಸರ್ಗಿಕ ದೃಷ್ಟಿಯಿಂದ ಒಂದೇ ಆಗಿಲ್ಲ ಎಂಬುದು ಸತ್ಯವಾದ ವಿಷಯ; ಆದ್ದರಿಂದ ಇಬ್ಬರೂ ಸ್ವಾತಂತ್ರ್ಯದ ಕ್ಷೇತ್ರ ಮತ್ತು ಮಾರ್ಗವೂ ನಿಶ್ಚಯವಾಗಿ ಬೇರೆ ಬೇರೆಯಾಗಿದೆ. ಇಬ್ಬರೂ ತಮ್ಮ ತಮ್ಮ ಕ್ಷೇತ್ರದಲ್ಲಿ ತಮ್ಮ ತಮ್ಮ ಮಾರ್ಗದಲ್ಲಿ ನಡೆದುಕೊಂಡೇ ಸ್ವಾತಂತ್ರ್ಯವನ್ನು ಪಡೆಯಬಲ್ಲರು. ಇದೇ ಸ್ವಧರ್ಮವಾಗಿದೆ. ಸ್ವಧರ್ಮವನ್ನು ಅರಿಯುವವರೆಗೆ ಕಲ್ಯಾಣದ ಆಸೆಯಿಲ್ಲವಾಗಿದೆ. ಸ್ತ್ರೀಯು ಮನೆಯ ರಾಣಿಯಾಗಿದ್ದಾಳೆ, ಸಾಮ್ರಾಜ್ಞಿಯಾಗಿದ್ದಾಳೆ, ಮನೆಯಲ್ಲಿ ಅವಳದೇ ಏಕಛತ್ರ ರಾಜ್ಯವಿದೆ. ಆದರೆ ಅವಳು ಸ್ನೇಹಮಯಿಯಾದ ತಾಯಿ ಮತ್ತು ಆದರ್ಶಗೃಹಿಣಿಯ ರೂಪದಲ್ಲಿ ಮಾತ್ರವೇ ರಾಣಿಯಾಗಿದ್ದಾಳೆ. ಇದೇ ಅವಳ ನಿಸರ್ಗದತ್ತವಾದ ಸ್ವಾತಂತ್ರ್ಯ. ಆದ್ದರಿಂದಲೇ ಹತ್ತು ಶಿಕ್ಷಕರುಗಳಿಗಿಂತ ಆಚಾರ್ಯನು ಶ್ರೇಷ್ಠನೆಂದೂ, ನೂರು ಆಚಾರ್ಯರುಗಳಿಗಿಂತ ತಂದೆಯು ಶ್ರೇಷ್ಠನೆಂದೂ ಮತ್ತು ಸಾವಿರ ತಂದೆಯುರಿಗಿಂತ ಹೆಚ್ಚು ಶ್ರೇಷ್ಠಳೂ ವಂದನೀಯಳೂ ಹಾಗೂ ಆದರಣೀಯಳಾದವಳು ತಾಯಿ ಎಂಬುದಾಗಿ ಹೇಳಿದೆ.

ನಾರಿಯ ಈ ಸನಾತನವಾದ ಮಾತೃತ್ವವೇ ಅವಳ ಸ್ವರೂಪವಾಗಿದೆ. ಅವಳು ಮಾನವತೆಯ ಮಾತೆಯಾಗಿದ್ದಾಳೆ. ಭಗವಾನ್ ರಾಮ-ಕೃಷ್ಣ ಭೀಷ್ಮ-ಯುಧಿಷ್ಠಿರರು, ಕರ್ಣ, ಅರ್ಜುನ, ಬುದ್ಧ ಹಾಗೂ ಮಹಾವೀರ, ಶಂಕರ-ರಾಮಾನುಜರು, ಗಾಂಧಿ -ಮಾಳವೀಯರು-ಮುಂತಾದ ಜಗತ್ತಿನ ಎಲ್ಲ ಮಹಾ-ಮಹಾ ಪುರುಷರನ್ನು ನಾರಿಯೇ ಜನ್ಮವಿತ್ತಿದ್ದಾಳೆ. ಮತ್ತು ಮಹಾತ್ಮರನ್ನಾಗಿ ಮಾಡಿದ್ದಾಳೆ. ಅವಳ ಜೀವನವು ಕ್ಷಣಿಕವಾದ ವೈಷಯಿಕ ಆನಂದಕ್ಕಾಗಿ ಅಲ್ಲ. ಅವಳಾದರೋ ಜಗತ್ತಿಗೆ ಪ್ರತಿಕ್ಷಣ ಆನಂದವನ್ನು ಕೊಡುವಂತಹ ಸ್ನೇಹಮಯೀ ಜನನಿಯಾಗಿದ್ದಾಳೆ. ಅವಳಲ್ಲಿ ಪ್ರಾಣಗಳ ಮತ್ತು

ಹೃದಯದ ಪ್ರಧಾನತೆಯಿದೆಯಾದರೆ ಪುರುಷನಲ್ಲಿ ಶರೀರದ ಪ್ರಧಾನತೆಯಿದೆ. ಆದ್ದರಿಂದಲೇ ಪುರುಷನ ಸ್ವಾತಂತ್ರ್ಯದ ಕ್ಷೇತ್ರ ಶರೀರವಾಗಿದೆ ಮತ್ತು ನಾರಿಯ ಸ್ವಾತಂತ್ರ್ಯದ ಕ್ಷೇತ್ರ ಪ್ರಾಣ ಹಾಗೂ ಹೃದಯವಾಗಿದೆ. ನಾರಿಯು ಶಾರೀರಕವಾಗಿ ದುರ್ಬಲಳಾಗಿರಬಹುದು ಆದರೆ ಪ್ರಾಣದಿಂದ ಅವಳು ಪುರುಷನಿಗಿಂತಲೂ ಅತ್ಯಂತ ಬಲಶಾಲಿಯಾಗಿದ್ದಾಳೆ. ಈ ಕಾರಣದಿಂದಾಗಿಯೇ ನಾರಿಯು ಸಹಜವಾಗಿ ಮಾಡುವಷ್ಟು ತ್ಯಾಗವನ್ನು ಪುರುಷನು ಮಾಡುವ ಕಲ್ಪನೆಯನ್ನೂ ಮಾಡಲಾರನು. ಆದ್ದರಿಂದ ಪುರುಷ ಮತ್ತು ಸ್ತ್ರೀಯರು ಎಲ್ಲ ಕ್ಷೇತ್ರಗಳಲ್ಲಿ ಸಮಾನಭಾವದಿಂದ ಸ್ವತಂತ್ರರಲ್ಲ.

ಆವೇಶದಲ್ಲಿ ಯಾರಾದರೂ ಇದನ್ನು ಒಪ್ಪದಿರಬಹುದು, ಆದರೆ ಪ್ರಜ್ಞೆಯು ಮರಳಿದಾಗ ನಾರಿಯು ದೇಹದ ಕ್ಷೇತ್ರದಲ್ಲಿ ಯಾವಾಗಲೂ ಪೂರ್ಣವಾಗಿ ಸ್ವಾಧೀನಳಾಗಲಾರಳೆಂದು ಒಪ್ಪಲೇಬೇಕಾಗುತ್ತದೆ. ಪ್ರಕೃತಿಯು ಅವಳ ಮನಸ್ಸು ಪ್ರಾಣ ಮತ್ತು ಅವಯವಗಳ ರಚನೆಯನ್ನು ಇದೇ ರೀತಿಯಲ್ಲಿ ಮಾಡಿದ್ದಾಳೆ. ಅವಳು ಸ್ವಸ್ಥ ಮಾನವ-ಶಿಶುವಿಗೆ ಜನ್ಮವನ್ನು ಕೊಟ್ಟು ತನ್ನ ಹೃದಯದ ಅಮೃತ ರಸದಿಂದ ಅದನ್ನು ಪಾಲಿಸಿ-ಪೋಷಿಸುವುದರ ಮೂಲಕ ಪೂರ್ಣಮಾನವನನ್ನಾಗಿ ಮಾಡುತ್ತಾಳೆ. ಈ ನೈಸರ್ಗಿಕವಾದ ಹೊಣೆಗಾರಿಕೆಯನ್ನು ಪೂರ್ಣವಾಗಿ ನಿರ್ವಹಿಸುವ ಸಲುವಾಗಿಯೇ ಅವಳ ಶಾರೀರಿಕ ಮತ್ತು ಮಾನಸಿಕ ಶಕ್ತಿಗಳ ಸ್ವಾಭಾವಿಕವಾದ ಸದ್ವ್ಯಯವಾಗುತ್ತಾ ಇದೆ. ಜಗತ್ತಿನ ಬೇರೆ-ಬೇರೆ ಕ್ಷೇತ್ರಗಳಲ್ಲಿ ನಾರಿಯಸ್ಥಾನವು ಸಂಕುಚಿತ ಅಥವಾ ಸೀಮಿತವಾಗಿ ಕಾಣಬರುತ್ತಿದೆಯೋ ಅದರ ಕಾರಣವೇನೆಂದರೆ - ನಾರಿಯು ಬಹು ಕ್ಷೇತ್ರವ್ಯಾಪಿಯಾದ, ಕುಶಲನಾದ, ಪುರುಷನನ್ನು ಉತ್ಪಾದನೆ ಮತ್ತು ನಿರ್ಮಾಣ ಮಾಡುವುದಕ್ಕೋಸ್ಕರ ತನ್ನ ಒಂದು ವಿಶಿಷ್ಟವಾದ ಕ್ಷೇತ್ರದಲ್ಲಿದ್ದುಕೊಂಡೇ ಪ್ರಕಾರಾಂತರದಿಂದ ಎಲ್ಲ ಜಗತ್ತಿನ ಸೇವೆ ಮಾಡುತ್ತಿರುತ್ತಾಳೆ. ನಾರಿಯು ತನ್ನ ಈ ವೈಶಿಷ್ಟ್ಯವನ್ನು ಮರೆತಳೆಂದರೆ ಜಗತ್ತಿನ ವಿನಾಶವು ಬಹಳ ಶೀಘ್ರವಾಗಿ ಉಂಟಾಗುತ್ತದೆ. ಇಂದು ಇದೇ ಆಗುತ್ತಿದೆ.

ಸ್ತ್ರೀಯು ಬಾಲ್ಯ, ಯೌವನ ಮತ್ತು ವೃದ್ಧಾವಸ್ಥೆಯಲ್ಲಿ ಸ್ವತಂತ್ರಳಾಗಿರಬಾರದೆಂದು ಹೇಳಲಾಗಿದೆ. ಅದೇಕೆಂದರೆ, ಅವಳ ಶರೀರದ ನೈಸರ್ಗಿಕ ಸಂಘಟನೆಯು ವಿಶಿಷ್ಟವಾಗಿದ್ದು ಅವಳಿಗೆ ಬಹು ಜಾಗ್ರತೆವಹಿಸುವ, ಒಬ್ಬ ಕಾಪಾಡುವವನ ಅಗತ್ಯವಿದೆ. ಇದು ಅವಳ ಶ್ರೇಷ್ಠತೆಯ ಗೌರವದ ಸೂಚನೆಯಾಗಿದೆ ಅಲ್ಲದೆ ಅವಳು ಪರತಂತ್ರಳೆಂಬುದಲ್ಲ. ಪಾಶ್ಚಾತ್ಯ ದೇಶಗಳಲ್ಲಿ ನಾರಿಯ ಸ್ವಾತಂತ್ರ್ಯವು ಅತ್ಯ ಧಿಕ ವಿಸ್ತಾರವಾಗಿರುವಲ್ಲಿಯೂ ಸಹ ಸ್ತ್ರೀಯರು ಪುರುಷರಂತೆ ನಿರ್ಭಯರಾಗಿ ವ್ಯವಹರಿಸುವುದಿಲ್ಲ. ನಾರಿಗೆ ಮಾತೃತ್ವವಿರುವುದರಿಂದ

ಅವಳು ಗರ್ಭಧಾರಣೆ ಮಾಡಲೇಬೇಕಾಗುತ್ತದೆ. ಪ್ರಕೃತಿಯು ಪುರುಷನನ್ನು ಈ ದಾಯಿತ್ವದಿಂದ ಮುಕ್ತವಾಗಿಸಿ ನಾರಿಯಮೇಲೆ ಈ ಹೊಣೆಯನ್ನು ಹೊರಿಸಿದೆ. ಆದ್ದರಿಂದ ಅವಳ ಶಾರೀರಿಕ ಸ್ವಾಧೀನತೆಯು ಸರ್ವತ್ರ ಸುರಕ್ಷಿತವಾಗಿಲ್ಲ. ಆದರೆ ಈ ದೈಹಿಕ ಪರತಂತ್ರತೆಯಲ್ಲಿಯೂ ಹೃದಯದಿಂದ ಅವಳು ಸ್ವತಂತ್ರಳಾಗಿದ್ದಾಳೆ; ಏಕೆಂದರೆ ತಪಸ್ಸು ತ್ಯಾಗ, ಧೈರ್ಯ, ಸಹಿಷ್ಣುತೆ, ಸೇವೆ ಮೊದಲಾದ ಸದ್ಗುಣಗಳು ಸತ್‌ಸ್ತ್ರೀಯ ಸೇವೆಯಲ್ಲಿ ಸದಾ ತೊಡಗಿರುತ್ತವೆ. ಪುರುಷನಲ್ಲಿ ಈ ಗುಣಗಳನ್ನು ತಂದುಕೊಳ್ಳಬೇಕಾಗುತ್ತದೆ, ಆದರೂ ಅವನಲ್ಲಿ ಈ ಸದ್ಗುಣಗಳು ಪೂರ್ಣವಾಗಿ ಮೂಡುವುದಿಲ್ಲ. ಸ್ತ್ರೀಯಲ್ಲಿ ಈ ಗುಣಗಳ ವಿಕಾಸ ಸಹಜವಾಗಿರುತ್ತದೆ. ಆದ್ದರಿಂದಲೇ ನಾರಿಯು ದೇಹದಿಂದ ಪರತಂತ್ರಳಾಗಿದ್ದರೂ ಪ್ರಾಣದ ದೃಷ್ಟಿಯಿಂದ ಸ್ವತಂತ್ರಳಾಗಿದ್ದಾಳೆ. ನಾರಿಯ ಈ ಸೇವೆಯು ಮಹತ್ತರವಾದುದು ಮತ್ತೆ ಅವಳು ಮಾತ್ರ ಇದನ್ನು ಮಾಡಬಲ್ಲಳು. ಈ ಮಹತ್ತರವಾದ ಸೇವೆಗಾಗಿಯೇ ಸೃಷ್ಟಿಕರ್ತನು ನಾರಿಯನ್ನು ಸೃಷ್ಟಿಸಿದ್ದಾನೆ.

ನಾರಿಯು ತನ್ನ ಈ ಪ್ರಾಕೃತಿಕವಾದ ಉತ್ತರದಾಯಿತ್ವದಿಂದ ಹೊರಗಾಗಲಾರಳು. ಇದರಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುವ ನಾರಿಯಲ್ಲಿ ಇದು ವಿಕೃತ ರೂಪದಿಂದ ಉದಯವಾಗುತ್ತದೆ. ವಿಕೃತರೂಪದಿಂದಾಗುವ ಕಾರ್ಯದ ಪರಿಣಾಮ ಅತಿಭಯಂಕರವಾಗಿರುತ್ತದೆ. ಯೂರೋಪಿನಲ್ಲಿ ನಾರಿಯು ಸ್ವತಂತ್ರಳಾಗಿದ್ದಾಳೆ. ಹಾಗಾದರೆ ಅಲ್ಲಿಯ ಸ್ತ್ರೀಯರು ತಮ್ಮ ಈ ಪ್ರಾಕೃತಿಕ ದಾಯಿತ್ವದಿಂದ ತಪ್ಪಿಸಿ ಕೊಂಡಿದ್ದಾರೇನು? ವಾಸನೆಗಳನ್ನು ಅವಳು ಗೆದ್ದಿರುವಳೇನು? ಅವರು ವಿವಾಹ ಮಾಡಿಕೊಳ್ಳದಿರಲಿ ಅಥವಾ ಸಾಮಾಜಿಕ ವಿಘಟನೆಯಾದ ಕಾರಣ ವಿವಾಹಕ್ಕೆ ಯೋಗ್ಯವಾದ ವಯಸ್ಸಿನಲ್ಲಿ ವಿವಾಹವಾಗದಿದ್ದರೂ, ಪುರುಷನೊಡನೆ ಸಂಸರ್ಗವಾಗದಿರುವುದಿಲ್ಲ. ಕೆಲವು ದಿನಗಳ ಹಿಂದೆ ಇಂಗ್ಲೆಂಡಿನ ಸಂಸತ್ತಿನ ಸಾಧಾರಣ ಸಭೆಯಲ್ಲಿ ಒಂದು ಪ್ರಶ್ನೆಗೆ ಉತ್ತರವಾಗಿ ಕಾರ್ಮಿಕರ ಸದಸ್ಯರಾದ ಶ್ರೀಯುತ ಲೇಜ್ ಎಂಬುವವರು ಇಂಗ್ಲೆಂಡಿನಲ್ಲಿ ಇಪ್ಪತ್ತು ವರ್ಷ ವಯಸ್ಸಿನ ಕುಮಾರಿಯರಲ್ಲಿ ಶೇಕಡ ನಲವತ್ತು ಕುಮಾರಿಯರು ವಿವಾಹಕ್ಕೆ ಮುಂಚೆಯೇ ಗರ್ಭವತಿಯಾಗಿರುವುದು ಕಂಡುಬಂದಿದೆ ಮತ್ತು ವಿವಾಹಿತ ಸ್ತ್ರೀಯರ ಪ್ರಥಮ ಸಂತಾನದಲ್ಲಿ ನಾಲ್ಕರಲ್ಲಿ ಒಂದು ಅಂದರೆ ಶೇಕಡ ಇಪ್ಪತ್ತೈದು ವ್ಯಭಿಚಾರ- ಜನ್ಯವಾಗಿರುತ್ತದೆ ಎಂದಿದ್ದಾರೆ. ಮುಂದುವರಿದು ಅವರು ದೇಶದ ಇಂತಹ ನೈತಿಕಪತನ ಎಂದೂ ಕಂಡುಬಂದಿಲ್ಲ ಎಂದು ಹೇಳಿರುವರು. ಅಮೆರಿಕಾ ಸ್ಥಿತಿಯು ಇವುಗಳಿಗಿಂತಲೂ ಹೆಚ್ಚು ಭಯಾನಕವಾಗಿದೆ. ಇಂತಹ ಸ್ತ್ರೀ-ಸ್ವಾತಂತ್ರ್ಯವನ್ನು ಭಾರತೀಯ ನಾರಿಯು ಸಹಿಸಬಲ್ಲಳೇ?

ವಿದೇಶೀಯರ ಪರಿವಾರದ ಜೀವನವು ಪ್ರಾಯಶಃ ನಷ್ಟವಾಗಿಹೋಗಿದೆ. ದಯೆ, ಪ್ರೇಮ, ಸ್ನೇಹ, ಪರೋಪಕಾರ, ಸೇವಾ-ಸಂಯಮ ಮತ್ತು ಶುದ್ಧವಾದ ಅರ್ಥವಿತರಣೆಯ ಮಹಾನ್ ಸಮ್ಮಿಲಿತ ಅಥವಾ ಸಮ್ಮಿಶ್ರ ಕುಟುಂಬ ವ್ಯವಸ್ಥೆಯು ಅಲ್ಲಿ ಹೇಳಹೆಸರಿಲ್ಲದಂತಾಗಿದೆ. ತತ್ಪರಿಣಾಮವಾಗಿ ಅಜ್ಜ-ಅಜ್ಜಿ, ದೊಡ್ಡಪ್ಪ-ದೊಡ್ಡಮ್ಮ, ಸಹೋದರ-ಅತ್ತಿಗೆ, ಸೋದರಮಾವ-ಅತ್ತೆ, ಸೋದರತ್ತೆ-ಸಹೋದರಿ, ತಾಯಿಯ ತಂಗಿ, ಸೋದರಳಿಯ - ಸೋದರಸೊಸೆ, ಸಹೋದರನ ಮಗ-ಮಗಳು, ಮೊದಲಾದವರನ್ನುಳ್ಳ ಮಹಾನ್ ಸುಶೃಂಖಲ ಕುಟುಂಬವೇನಿದೆಯೋ, ಯಾರೆಲ್ಲರ ಪಾಲನೆ-ಪೋಷಣೆಯು ತನ್ನ ಕರ್ತವ್ಯವೆಂದೂ, ಹಾಗೆ ಮಾಡಿದರೆ ತನ್ನನ್ನು ಧನ್ಯನೆಂದೂ, ಕೃತಾರ್ಥನೆಂದೂ ತಿಳಿಯುತ್ತಾನೆಯೋ ಅಂತಹ ಕುಟುಂಬ ವ್ಯವಸ್ಥೆಯು ಹೇಳ-ಹೆಸರಿಲ್ಲದಂತಾಗಿದೆ. ಸ್ವತಂತ್ರತೆ ಮತ್ತು ಸಮಾನ ಅಧಿಕಾರದ ಯುದ್ಧವು ಅಲ್ಲಿಯ ಸುಂದರವಾದ ಮನೆಯನ್ನು ತೊಡೆದುಹಾಕಿದೆ. ಈ ಕಾರಣದಿಂದಲೇ ಅಲ್ಲಿ ಸಣ್ಣ-ಸಣ್ಣ ವಿಷಯಗಳಿಗೂ ಕಲಹ, ಅಶಾಂತಿ, ವಿವಾಹ-ವಿಚ್ಛೇದನ ಅಥವಾ ಆತ್ಮಹತ್ಯೆಯಾಗುತ್ತವೆ. ಅಲ್ಲಿ ಸ್ತ್ರೀಯು ಈಗ ಮನೆಯ ರಾಣಿಯಲ್ಲ, ಮನೆಯಲ್ಲಿ ಅವಳ ಅಧಿಕಾರ ನಡೆಯುವುದಿಲ್ಲ, ಗೃಹಸ್ಥ ಜೀವನದ ಪರಮ ಶೋಭಾಯಮಾನವಾದ ಆದರ್ಶವು ಅವಳ ಕಲ್ಪನೆಯಿಂದ ದೂರವಾಗಿರುವ ವಸ್ತುವಾಗಿದೆ. ಮನೆಯನ್ನು ಅಲಂಕರಿಸುವ, ಮನೆಗೆ ಅಲಂಕಾರಪ್ರಾಯಳಾಗಿರುವ ಶ್ರೇಷ್ಠ ಗೃಹಿಣಿ, ಪತಿಯ ಪ್ರತಿಯೊಂದು ಕಾರ್ಯದಲ್ಲಿ ಸಹಯೋಗ ನೀಡುವ ಸಹಧರ್ಮಿಣಿ ಮತ್ತು ಮಕ್ಕಳಿಗೆ ಹೃದಯದ ಅಮೃತರಸವನ್ನುಣಿಸಿ ಪಾಲಿಸಿ-ಪೋಷಿಸುವ ಮಾತೆಯ ಆದರ್ಶ ನಷ್ಟವಾಗುತ್ತಿದೆ. ವೈಯಕ್ತಿಕ ಸ್ವಾತಂತ್ರ್ಯ ಮತ್ತು ಸ್ವತಂತ್ರ ಪ್ರೇಮದ ಮೋಹದಲ್ಲಿ ಅಲ್ಲಿಯ ನಾರಿಯು ಇಂದು ಎಷ್ಟು ಪರಾಧೀನಳಾಗಿರುವಳೆಂದರೆ ಅವಳು ಮನೆ-ಮನೆ ಅಲೆಯುತ್ತ ವಿಭಿನ್ನ ಪುರುಷರಿಂದ ಹಾನಿಗೆ ಗುರಿಯಾಗಬೇಕಾಗಿ ಬಂದಿದೆ. ಎಲ್ಲೆಂದರಲ್ಲಿ ತನ್ನ ಪ್ರೇಮದ ಮಾರಾಟ ಮಾಡುವುದು, ನೌಕರಿಗಾಗಿ ಹೊಸ ಹೊಸ ಮಾಲೀಕರ ಬಾಗಿಲನ್ನು ಬಡಿಯುವುದು ಮತ್ತು ಕೆಲಸ ಖಾಲಿ ಇಲ್ಲ ಎಂಬ ಸೂಚನಾಫಲಕವನ್ನು ಓದಿ ನಿರಾಶಳಾಗಿ ಹಿಂದಿರುಗುವುದು ಸಾಮಾನ್ಯವಾಗಿ ಹೋಗಿದೆ. ಇದೆಂತಹ ಸ್ವಾತಂತ್ರ್ಯ! ಮತ್ತೆಂತಹ ಸುಖವಾಗಿದೆ? ಇಂದು ಭಾರತೀಯ ಮಹಿಳೆಯರೂ ಸಹ ಈ ಸ್ವತಂತ್ರತೆ ಮತ್ತು ಸುಖದ ಕಡೆಗೆ ಮೋಹವಶಳಾಗಿ ಧಾವಿಸುತ್ತಿರುವುದು ದುಃಖದ ಮತ್ತು ಆಶ್ಚರ್ಯದ ಸಂಗತಿಯಾಗಿದೆ.

ಅಲ್ಲಿ ಶಿಕ್ಷಿತ ಸ್ತ್ರೀಯರಲ್ಲಿ ಬಹುಮುಖೀ ವ್ಯಕ್ತಿತ್ವದ ವಿಕಾಸವುಂಟಾಗಿದೆ ಎಂದು ಜನರು ಹೇಳುತ್ತಾರೆ. ಆ ಸ್ತ್ರೀಯರಲ್ಲಿ ಅಕ್ಷರ-ಜ್ಞಾನದ ವಿಕಾಸ ಸಾಕಷ್ಟಾಗಿರುವುದಂತೂ

ನಿಜ; ಆದರೆ ಅಷ್ಟು ಮಾತ್ರದಿಂದಲೇ ಯಾರಾದರೂ ಸುಶಿಕ್ಷಿತರೂ ವಿಕಾಸವನ್ನು ಪಡೆದವರೆಂದೂ ಒಪ್ಪಲಾಗುವುದಿಲ್ಲ. ಮನುಷ್ಯನಲ್ಲಿ ಅವನ ಸ್ವಧರ್ಮಕ್ಕನುಗುಣವಾದ ಕರ್ತವ್ಯದ ಅರಿವನ್ನುಂಟುಮಾಡಿ ಅವನನ್ನು ಕರ್ತವ್ಯಪಾಲನೆಗೆ ಯೋಗ್ಯನನ್ನಾಗಿ ಮಾಡುವುದೇ ಶಿಕ್ಷಣದ ಗುರಿಯಾಗಿದೆ. ಯೂರೋಪಿನ ಸ್ತ್ರೀ-ಶಿಕ್ಷಣವು ಈ ಕಾರ್ಯವನ್ನು ಮಾಡಿಲ್ಲ. ಸ್ತ್ರೀಯರಿಗೆ ಅವರ ನಿಸರ್ಗದತ್ತವಾದ ಧರ್ಮಕ್ಕೆ ಅನುಗುಣವಾದ ಶಿಕ್ಷಣವು ಸಿಗುವಂತಾಗಿದ್ದರೆ ಲಾಭವಾಗುತ್ತಿತ್ತು. ಪ್ರಕೃತಿಗೆ ವಿರುದ್ಧವಾದ ಶಿಕ್ಷಣದಿಂದ ಈ ಪ್ರಕಾರವಾಗಿ ದೊಡ್ಡಹಾನಿಯುಂಟಾಗಿದೆ. ಈ ಯುಗದಲ್ಲಿ ಸ್ತ್ರೀಯರಿಗೆ ಕೊಡಲಾಗುತ್ತಿರುವ ಶಿಕ್ಷಣದಿಂದ ನಿಜವಾಗಿ ಅವರ ಸ್ವಧರ್ಮಕ್ಕನುಗುಣವಾದ ವಿಕಾಸವಾಗಿದೆಯೇ? ಇದರಿಂದ ಸ್ತ್ರೀಯರು ತಮ್ಮ ಕಾರ್ಯಕ್ಷೇತ್ರದಲ್ಲಿ ಕುಶಲರಾಗಿರುವರೇ? ಅವರ ಕ್ಷೇತ್ರದಲ್ಲಿ ಸಹಜವಾಗಿದ್ದ ನೈಸರ್ಗಿಕ ಸ್ವಾತಂತ್ರ್ಯದ ರಕ್ಷಣೆಯಾಗಿದೆಯೇ? ಅದರ ಅಪಹರಣವಾಗಿಲ್ಲ ತಾನೇ? ನೂರಾರು ವರ್ಷಗಳಿಂದ ನಡೆದುಕೊಂಡು ಬಂದಿರುವ ಯೂರೋಪಿನ ಶಿಕ್ಷಣವು ಆ ದೇಶದಲ್ಲಿ ಎಷ್ಟು ಮಂದಿ ಮಹಾನ್ ಪ್ರತಿಭಾವಂತರೂ, ಸ್ವಧರ್ಮ ಪರಾಯಣರೂ ಜಗತ್ತಿನ ನೈಸರ್ಗಿಕತೆಯ ರಕ್ಷಕರೂ ಆದ ಎಷ್ಟು ಮಂದಿ ಸ್ತ್ರೀಯರಿಗೆ ಜನ್ಮಕೊಟ್ಟಿದೆ? ಈ ಶಿಕ್ಷಣದಿಂದಾಗಿ ಅಲ್ಲಿಯ ನಾರಿಯರಲ್ಲಿ ಗೃಹಿಣೀತನ ಮತ್ತು ಮಾತೃತ್ವದ ನಾಶವಾಗಿರುವುದು ಪ್ರತ್ಯಕ್ಷವಾಗಿದೆ. ಅಮೆರಿಕಾದಲ್ಲಿ ಶೇಕಡ ೭೭ ರಷ್ಟು ಸ್ತ್ರೀಯರು ಮನೆಗೆಲಸಮಾಡುವುದರಲ್ಲಿ ಅಸಫಲರೆಂಬುದು ಸಿದ್ಧವಾಗಿದೆ. ಶೇಕಡ ೬೦ ರಷ್ಟು ಸ್ತ್ರೀಯರು ವಿವಾಹವಾಗಲು ಯೋಗ್ಯವಾದ ವಯಸ್ಸು ಮೀರಿದ ಕಾರಣ ವಿವಾಹವಾಗುವ ಯೋಗ್ಯತೆಯನ್ನು ಕಳೆದುಕೊಂಡಿದ್ದಾರೆ. ಅಲ್ಲಿ ಸಾಮಾನ್ಯವಾಗಿ ಹದಿನಾರರಿಂದ ಇಪ್ಪತ್ತು ವರ್ಷಗಳವರೆಗಿನ ಕಾಲವನ್ನು ವಿವಾಹಯೋಗ್ಯವೆಂದು ತಿಳಿಯಲಾಗುತ್ತದೆ. ಇದಾದ ನಂತರ ಹೇಗೆ-ಹೇಗೆ ವಯಸ್ಸು ಕಳೆಯುತ್ತದೋ ಹಾಗೆ ಹಾಗೇ ವಿವಾಹದ ಯೋಗ್ಯತೆಯು ಕ್ಷೀಣಿಸುತ್ತ ಹೋಗುತ್ತಿದೆ. ಇದರ ಪರಿಣಾಮವಾಗಿ ಅಲ್ಲಿ ಸ್ವೇಚ್ಛಾಚಾರ, ಅನಾಚಾರ, ವ್ಯಭಿಚಾರ ಮತ್ತು ಅತ್ಯಾಚಾರಗಳು ಉತ್ತರೋತ್ತರ ಹೆಚ್ಚುತ್ತಲೇ ಇವೆ. ಅವಿವಾಹಿತ ಮಾತೆಯರ ಸಂಖ್ಯೆಯು ಕ್ರಮವಾಗಿ ಹೆಚ್ಚುತ್ತ ಹೋಗುತ್ತಿದೆ. ಮನೆಯ ಸುಖವು ಯಾರಿಗೂ ಇಲ್ಲದಂತಾಗಿದೆ. ಕಾಹಿಲೆಯ ಸ್ಥಿತಿಯಲ್ಲಿ ಹಾಗೂ ವೃದ್ಧಾಪ್ಯದಲ್ಲಿ ಯಾರು ಯಾರ ಸೇವೆಯನ್ನು ಮಾಡುವರು? ಅಲ್ಲಿಯ ಶಿಕ್ಷಿತರಾದ ಸ್ತ್ರೀಯರಲ್ಲಿ ಸುಮಾರು ಶೇಕಡ ೫೦ ರಷ್ಟು ಸ್ತ್ರೀಯರು ಕುಮಾರಿಯ ಸ್ಥಿತಿಯಲ್ಲಿರಬೇಕಾಗುತ್ತದೆ ಮತ್ತು ಮದುವೆಯಾಗದೆಯೇ ವೈಧವ್ಯದಂತಹ ದುಃಖವನ್ನು ಅನುಭವಿಸಬೇಕಾಗುತ್ತದೆ. ಇದು ಬಹುಮುಖೀ ವಿಕಾಸವೇನು? ಇದಲ್ಲದೆ ವರ್ತಮಾನ ಶಿಕ್ಷಣದ ಪರಿಣಾಮವಾಗಿ

ಸ್ತ್ರೀಯರಲ್ಲಿ ನಾರೀತ್ವ ಹಾಗೂ ಮಾತೃತ್ವದ ನಾಶವಾಗಿ ಅವರಲ್ಲಿ ಪುರುಷತ್ವ ವೃದ್ಧಿಯಾಗುತ್ತಿದೆ. ಮತ್ತು ಪುರುಷರಲ್ಲಿ ಸ್ತ್ರೀತ್ವದ ವೃದ್ಧಿಯಾಗುತ್ತಿದೆ. ನಾರಿಯು ನಿಯಮಿತವಾದ ವ್ಯಾಯಾಮ ಮಾಡಿ, ಬಗೆಬಗೆಯ ಸಾಧನಗಳ ನೆರವಿನಿಂದ ಪುರುಷನಾಗುತ್ತಿದ್ದರೆ, ಪುರುಷನು ಅಂಗಲಾಲಿತ್ಯ, ಭಾವ-ಭಂಗಿ, ಕೇಶವಿನ್ಯಾಸ ಮತ್ತು ಸ್ವರಮಾಧುರ್ಯಾದಿಗಳಿಂದ ಸ್ತ್ರೀಯಾಗುತ್ತಿದ್ದಾನೆ. ಸ್ತ್ರೀಯರಲ್ಲಿ ಗಂಡಸುತನವು ಅವಶ್ಯವಾಗಿ ಉಂಟಾಗಬೇಕು. ಅವಳು ರಣಚಂಡಿಯೂ, ದಶಪ್ರಹರಣ-ಧಾರಿಣಿ ದುರ್ಗಿಯೂ ಆಗಬೇಕು. ಆದರೆ ಪತಿ-ಪುತ್ರರಿಗೆ ಅಹಿತವನ್ನುಂಟುಮಾಡುವ ಇಚ್ಛೆಯುಳ್ಳ ದುಷ್ಟರನ್ನೂ ಆತತಾಯಿಯರನ್ನು ದಂಡಿಸುವುದಕ್ಕಾಗಿಯೇ ಆಗಬೇಕು. ಅವರಲ್ಲಿ ಪತ್ನೀತ್ವ ಮತ್ತು ಮಾತೃತ್ವದ ಅಖಂಡಭಾವನೆ ಸ್ಥಿರವಾದಾಗಲೇ ಇದುಸಾಧ್ಯ. ಭಾರತವರ್ಷದಲ್ಲಿ ನಾರಿಯನ್ನು ರಣಚಂಡೀ ಮುಂಡಮಾಲಿನೀ, ಕರಾಲಿ-ಕಾಳಿಯ ರೂಪದಲ್ಲಿ ಪೂಜಿಸಿದೆ. ಆದರೆ ಅಲ್ಲಿಯೂ ಅವಳು ಮಾತೃಸ್ವರೂಪಳೇ ಆಗಿದ್ದಾಳೆ. ಸ್ನೇಹಮಯೀ ಮಾತೆ, ಪ್ರೇಮಮಯೀ ಪತ್ನೀ ಒಂದು ವೇಳೆ ವೀರಾಂಗನೆಯಾಗಿ ರಣಕ್ಕೆ ಸನ್ನದ್ಧಳಾಗಿ ಆಗಿ ರಣಾಂಗಣಕ್ಕೆ ಬರುವಳಾದರೆ ಅವಳು ಘೋರ ಪಾತಕಿಗಳ ಹಿಡಿತದಿಂದ ತನ್ನ ಪತಿ-ಪುತ್ರರನ್ನು ರಕ್ಷಿಸಿ ಸಮಾಜ ಮತ್ತು ದೇಶದ ಅಪರಿಮಿತ ಮಂಗಳವನ್ನು ಸಾಧಿಸಿ ಮುಖವನ್ನು ಉಜ್ವಲಗೊಳಿಸುವಳು. ಆದರೆ ಈ ಹೃದಯ-ಧನವನ್ನು ಕಳೆದುಕೊಂಡು, ಮನಸ್ಸಿನ ಈ ಪರಮ ಅಮೂಲ್ಯವಾದ ಸಂಪತ್ತನ್ನು ಕಳೆದುಕೊಂಡು, ಕೇವಲ ದೇಹದ ಕ್ಷೇತ್ರದಲ್ಲಿ ಸ್ವತಂತ್ರಳಾಗುವುದಕ್ಕಾಗಿ ನಾರಿಯು ಕತ್ತಿಯನ್ನು ಹಿಡಿಯುವುದಾದರೆ ಆದರಿಂದ ನಿಶ್ಚಯವಾಗಿ ಅವಳ ಪ್ರಿಯ ಸಂತಾನಗಳ ರುಂಡ-ಮುಂಡಗಳು ಬೇರೆ ಬೇರೆಯಾಗುವುವು, ಪ್ರಾಣ-ಪ್ರಿಯನಾದ ಪತಿಯ ಹೃದಯವು ಇರಿಯಲ್ಪಟ್ಟು ಎಲ್ಲರ ಮುಖಕ್ಕೂ ಕಳಂಕ ತಟ್ಟುವುದು. ಸ್ತ್ರೀಯು ರಣ-ಚಂಡಿಯಾಗುವ ಮುನ್ನ ಈ ವಿಷಯವನ್ನು ಕೂಲಂಕುಷವಾಗಿ ವಿಮರ್ಶಿಸಬೇಕು. ಅತ್ಯಾಚಾರಿಗಳ ದಮನಕ್ಕಾಗಿ ನಮ್ಮ ತಾಯಿ-ತಂಗಿಯರು ರಣಚಂಡಿಯರಾಗಲಿ; ಆದರೆ ನಮ್ಮ ರಕ್ಷಣೆ ಮತ್ತು ಪಾಲನೆಗಾಗಿ ಅವರ ಹೃದಯದಲ್ಲಿ ಸದಾ ಸುಧಾರಸವು ಹರಿಯುತ್ತಿರಲಿ. ಅಲ್ಲಿ, ಅವಳ ಕೈಯಲ್ಲಿ ಕತ್ತಿ ಇಲ್ಲದೆಯೇ ಇರಲಿ.

ಆದ್ದರಿಂದ ಯೂರೋಪ-ಅಮೇರಿಕಾ ದೇಶಗಳಲ್ಲಿ ಸ್ತ್ರೀಯರು ಸ್ವತಂತ್ರರಾಗಿರುವ ಕಾರಣ ಸುಖವಾಗಿದ್ದಾರೆ ಮತ್ತು ಅವರಿಗೆ ಇಂದಿನ ಶಿಕ್ಷಣದಿಂದ ನಿಜವಾಗಿ ಲಾಭವಾಗಿದೆಯೆನ್ನುವ ಭ್ರಮೆಯನ್ನು ಬಿಟ್ಟು ಬಿಡಬೇಕು. ಯಾವುದಾದರೊಂದು ಅಂಶದಲ್ಲಿ ಲಾಭವಾಗಿದೆಯೆಂದು ಇಟ್ಟುಕೊಂಡರೂ, ಅಲ್ಲಿಯ ವಾತಾವರಣ, ಪರಿಸ್ಥಿತಿ, ಆಚಾರ-ವಿಚಾರ, ಸಂಸ್ಕೃತಿ ಮತ್ತು ಅಲ್ಲಿಯ ಲಕ್ಷ್ಯ

ಬೇರೆಯೆಂದೂ ಮತ್ತು ನಮ್ಮವುಗಳು ಬೇರೆಯೆಂದೂ ತಿಳಿಯಬೇಕು. ಅಲ್ಲಿ ಕೇವಲ ಭೌತಿಕ ಉನ್ನತಿಯೇ ಜೀವನದ ಲಕ್ಷ್ಯವಾದರೆ ನಮ್ಮ ಜೀವನದ ಲಕ್ಷ್ಯವು ಪರಮಾತ್ಮನ ಪ್ರಾಪ್ತಿಯೆಂಬುದಾಗಿದೆ. ಪರಮಾತ್ಮನ ಪ್ರಾಪ್ತಿಗೆ ವಿಲಾಸ-ವಾಸನೆಗಳ ತ್ಯಾಗ ಮತ್ತು ಇಂದ್ರಿಯಗಳ ಸಂಯಮ ಸರ್ವೋತ್ತಮ ಸಾಧನವಾಗಿದೆ. ಇದನ್ನು ದೃಷ್ಟಿಯಲ್ಲಿಟ್ಟುಕೊಂಡೇ ನಮ್ಮ ಶಿಕ್ಷಣ ಪದ್ಧತಿಯನ್ನು ರೂಪಿಸಬೇಕು. ಆಗ ಮಾತ್ರ ನಮ್ಮ ನಾರಿಯರು ಆದರ್ಶ ಮಾತೆ ಮತ್ತು ಆದರ್ಶ ಗೃಹಿಣಿಯರಾಗಿ ಜಗತ್ತಿಗೆ ಮಂಗಳವನ್ನುಂಟು ಮಾಡಬಲ್ಲರು.

ಸ್ತ್ರೀಯರು ದೇಶಕ್ಕೆ, ಸಮಾಜಕ್ಕೆ ಸಂಬಂಧಿಸಿದ ಯಾವ ಕೆಲಸವನ್ನೂ ಮಾಡಬಾರದೆಂದು ಹೇಳಬಹುದೇ? ಹಾಗೇನೂ ಅಲ್ಲ. ಏಕೆ ಮಾಡಬಾರದು? ಆದರೆ ನಮ್ಮ ಸ್ವಧರ್ಮವೆಂಬುದೇನಿದೆಯೋ ಅದನ್ನು ಉಳಿಸಿಕೊಂಡು, ಬೆಳಸಿಕೊಂಡು ಮಾಡಲಿ, ಸ್ವಧರ್ಮದ ಶಿಕ್ಷಣವನ್ನು ಅಶಿಕ್ಷಿತ ಸೋದರಿಯರಿಗೆ ಎಷ್ಟು ಕೊಡಬಲ್ಲರೋ ಅದನ್ನು ಉಪದೇಶ, ಆಚರಣೆಗಳ ಮುಖಾಂತರ ಅವಶ್ಯವಾಗಿ ಕೊಡಲಿ. ಪತಿ, ಪುತ್ರ, ಪುತ್ರಿಯರು ಇವರೆಲ್ಲರೂ ಸರಿಯಾಗಿ ನಡೆದುಕೊಂಡಲ್ಲಿ, ತಮ್ಮ ತಮ್ಮ ಕರ್ತವ್ಯ ಪಾಲನೆಯಲ್ಲಿ ಪ್ರಾಮಾಣಿಕತೆಯಿಂದ ಸಂಲಗ್ನರಾಗುವುದಾದರೆ ದೇಶದಲ್ಲಿ, ಸಮಾಜದಲ್ಲಿ ಮಾತೆಯರು ಸ್ವಧರ್ಮವನ್ನು ಬಿಟ್ಟು ಸುಧಾರಣಾಕಾರ್ಯ ಮಾಡಬೇಕಾದಂತಹ ಯಾವ ಕೊರತೆಯೂ ಇರಲು ಅವಕಾಶವಿರುವುದಿಲ್ಲ ಮತ್ತು ಪುರುಷರನ್ನು ಸತ್ಪುರುಷರನ್ನಾಗಿ ಮಾಡುವ ಈ ಕಾರ್ಯ ಸ್ತ್ರೀಯರದೇ ಆಗಿದೆ. ಮಾತೆಯರು ತಮ್ಮ ಸ್ತ್ರೀಧರ್ಮದಲ್ಲಿ ತತ್ಪರರಾಗಿದ್ದಲ್ಲಿ ಪುರುಷರಲ್ಲಿ ಉಚ್ಛೃಂಖಲತೆಯು ಉಂಟಾಗುವುದೂ ಇಲ್ಲ. ಆದ್ದರಿಂದ ಭಾರತದ ಆದರಣೀಯ ದೇವಿಯರಲ್ಲಿ ಪ್ರಾರ್ಥನೆಯೇನೆಂದರೆ ಅವರು ತಮ್ಮ ಸ್ವರೂಪವನ್ನು ಸಂಬಾಳಿಸಿಕೊಳ್ಳಲಿ. ತಮ್ಮ ಮಹತ್ತರವಾದ ದಾಯಿತ್ವದ ಕಡೆಗೆ ಗಮನ ಕೊಡುವುದರ ಮೂಲಕ ಪುರುಷರನ್ನು ವಾಸ್ತವಿಕ ಸ್ವಧರ್ಮಪರಾಯಣ ಪುರುಷರನ್ನಾಗಿ ಮಾಡಲಿ. ಸರ್ವಶಕ್ತಿಮಯಿ ಮಾತೆಯರು ಪುರುಷರ ಎಂತಹ ವ್ಯಕ್ತಿತ್ವವನ್ನು ನಿರ್ಮಾಣ ಮಾಡಲು ಇಚ್ಛಿಸುತ್ತಾರೆಯೋ ಅಂತಹ ವ್ಯಕ್ತಿತ್ವವು ನಿರ್ಮಾಣವಾಗುತ್ತದೆ. ಇಂದು ಪುರುಷರು ಕೆಟ್ಟಿರುವುದಕ್ಕೆ ಮಾತೆಯರು ಪುರುಷರನ್ನು ಲೆಕ್ಕಿಸದೆ, ತಮ್ಮ ಪತಿ-ಪುತ್ರರ ಕಲ್ಯಾಣವನ್ನು ಬಯಸದೆ ತಮ್ಮ ಸ್ವತಂತ್ರವಾದ, ವ್ಯಕ್ತಿಗತವಾದ ಕಲ್ಯಾಣವನ್ನು ಬಯಸುವುದಾದಲ್ಲಿ ಪುರುಷರ ಪತನವು ಖಂಡಿತ. ಪತಿ-ಪುತ್ರರು ದಾರಿ ತಪ್ಪಿದಲ್ಲಿ ಗೃಹಿಣಿ ಮತ್ತು ಮಾತೆಯರು ಯಾರ ಬಲದ ಅವಲಂಬನದಿಂದ ತಮ್ಮ ಸುಂದರ ಸ್ವರೂಪವನ್ನು ರಕ್ಷಿಸಿಕೊಳ್ಳಬಲ್ಲರು? ಪುರುಷರನ್ನು ಉಳಿಸಿ ತನ್ನನ್ನು ಉಳಿಸಿಕೊಳ್ಳುವುದು, ಪುರುಷರನ್ನು ಪುರುಷರನ್ನಾಗಿಸಿ ತನ್ನ ನಾರೀತ್ವದ ಅಭ್ಯುದಯ

ಮಾಡುವುದು – ಇದರಲ್ಲಿ ನಿಜವಾದ, ಕಲ್ಯಾಣಕಾರಿಯಾದ ನಾರಿಯ ಉದ್ಧಾರವಿದೆ. ಪುರುಷನನ್ನು ಅಂಕೆಯಲ್ಲಿಡದೆ ನಾರಿಯು ಅವನ ಪ್ರತಿದ್ವಂದ್ವಿಯಾಗಿ ತನ್ನ ಸ್ವಾತಂತ್ರ್ಯದ ಉನ್ನತಿ ಮಾಡಹೋಗುವುದು ಪುರುಷನನ್ನು ನಿರಂಕುಶ, ಅತ್ಯಾಚಾರಿ ಮತ್ತು ಸ್ವೇಚ್ಛಾಚಾರಿಯನ್ನಾಗಿ ಮಾಡಿ ಅದರ ದಾಸ್ಯಕ್ಕೆ ಆಹ್ವಾನ ಕೊಟ್ಟಂತೆಯೇ ಸರಿ. ಫಲತಃ ಸಮಾಜದಲ್ಲಿ ಪುರುಷ ಮತ್ತು ಸ್ತ್ರೀಯರ ಸುಖವು ಸುಟ್ಟು ಬೂದಿಯಾಗುವಂತಹ ದಾವಾನಲವನ್ನು ಧಗಧಗ ಉರಿಯುವಂತೆ ಮಾಡುವುದಾಗಿದೆ. ಭಗವಂತನ ದಯೆಯಿಂದ ನಾರಿಯಲ್ಲಿ ಸುಬುದ್ಧಿಯು ಉಂಟಾಗಿ ಅವಳು ತನ್ನ ಉತ್ತರದಾಯಿತ್ವವನ್ನು ಅರಿತುಕೊಂಡು, ಸ್ವಧರ್ಮಪರಾಯಣಳಾಗಿ ಜಗತ್ತಿಗೆ ಮಂಗಳವನ್ನುಂಟುಮಾಡಲಿ.

❑❑

## ೫. ವಿವಾಹದ ಮಹಾನ್ ಉದ್ದೇಶ ಮತ್ತು ವಿವಾಹಕಾಲ

ಮಾನವರಲ್ಲಿ ಪಶುಗಳಂತೆ ಯಥೇಚ್ಛಾಚಾರವಾಗದಿರಲಿ, ಇಂದ್ರಿಯ ಲಾಲಸೆ ಮತ್ತು ಭೋಗ ಭಾವವು ಮರ್ಯಾದೆಯಿಂದ ಕೂಡಿರಲಿ, ಭಾವಗಳಲ್ಲಿ ಶುದ್ಧಿ ಇರಲಿ, ಕ್ರಮಕ್ರಮವಾಗಿ ಸಂಯಮದ ಮೂಲಕ ಮನುಷ್ಯನು ತ್ಯಾಗದ ಕಡೆಗೆ ಮುಂದುವರಿಯಲಿ, ಸಂತಾನೋತ್ಪತ್ತಿಯ ಮೂಲಕ ವಂಶದ ರಕ್ಷಣೆ ಮತ್ತು ಪಿತೃಋಣದ ಶೋಧವಾಗಲಿ, ಪ್ರೇಮವನ್ನು ಕೇಂದ್ರವಾಗಿಸಿಕೊಂಡು ಅದನ್ನು ಪವಿತ್ರವಾಗಿಸುವ ಅಭ್ಯಾಸವು ವೃದ್ಧಿಸಲಿ, ಸ್ವಾರ್ಥದಲ್ಲಿ ಸಂಕೋಚ ಮತ್ತು ಪರಾರ್ಥ ತ್ಯಾಗದ ಬುದ್ಧಿಯು ಜಾಗೃತವಾಗಿ ಅಂತಹುದೇ ಪರಾರ್ಥ-ತ್ಯಾಗಮಯ ಜೀವನವುಂಟಾಗಲಿ ಮತ್ತು ಕೊನೆಯಲ್ಲಿ ಭಗವಂತನ ಪ್ರಾಪ್ತಿಯಾಗಲಿ. ಈ ಉದ್ದೇಶಗಳನ್ನು ಒಳಗೊಂಡು ಹಿಂದೂ-ವಿವಾಹದ ವಿಧಾನವುಂಟಾಗಿದೆ. ವಿವಾಹವು ಧಾರ್ಮಿಕ ಸಂಸ್ಕಾರವಾಗಿದ್ದು ಮೋಕ್ಷ ಪ್ರಾಪ್ತಿಯ ಒಂದು ಸೋಪಾನವಾಗಿದೆ. ಇದರಿಂದಾಗಿ ವಿಲಾಸ ವಾಸನೆಗಳು ಪ್ರಾರಂಭವಾಗದೆ ಸಂಯಮ ಪೂರ್ಣವಾದ ಜೀವನ ಪ್ರಾರಂಭವಾಗುತ್ತದೆ. ಆದ್ದರಿಂದಲೇ ವಿವಾಹದಲ್ಲಿ ಬೇರೆ ವಿಷಯಗಳ ಜೊತೆ ಜೊತೆಗೆ ಕಾಲದ ಬಗೆಗೂ ವಿಚಾರ ಮಾಡಲಾಗಿದೆ. ಇದರಲ್ಲಿ ಕನ್ಯೆಯ ವಿವಾಹವು ರಜೋದರ್ಶನಕ್ಕೆ ಮುಂಚಿತವಾಗಿ ಆಗಿಹೋಗಬೇಕೆನ್ನುವುದು ಮುಖ್ಯ ವಿಚಾರಗಳಲ್ಲಿ ಒಂದಾಗಿದೆ. ರಜೋದರ್ಶನವು ಎಲ್ಲ ದೇಶಗಳಲ್ಲಿ ಒಂದೇ ವಯಸ್ಸಿನಲ್ಲಿ ಆಗುವುದಿಲ್ಲ. ಪ್ರಕೃತಿಯ ಭಿನ್ನತೆಯ ಕಾರಣದಿಂದಾಗಿ ಎಲ್ಲೋ ಕಡಿಮೆ ವಯಸ್ಸಿನಲ್ಲಿ, ಇನ್ನೆಲ್ಲೋ ಸ್ವಲ್ಪ ಹೆಚ್ಚು ವಯಸ್ಸಿನಲ್ಲಿ ಆಗುತ್ತದೆ. ಆದ್ದರಿಂದ ರಜೋದರ್ಶನದ ಕಾಲವನ್ನು ತಮ್ಮ ತಮ್ಮ ದೇಶಗಳ ಕಾಲ ಮತ್ತು ಸ್ಥಿತಿಗಳಿಗೆ ಅನುಸಾರವಾಗಿ ನಿರ್ಣಯಿಸಬೇಕಾಗುತ್ತದೆ. ಆದರೆ ರಜೋದರ್ಶನಕ್ಕೆ ಮುಂಚೆಯೇ ವಿವಾಹ ನಡೆಯುವುದು ಆವಶ್ಯಕವಾಗಿದೆ.

ರಜೋದರ್ಶನವು ಪ್ರಕೃತಿಯ ಒಂದು ಮಹಾನ್ ಸಂಕೇತವಾಗಿದೆ. ಇದರಿಂದಾಗಿ ಸ್ತ್ರೀಯು ಗರ್ಭಧಾರಣೆಗೆ ಯೋಗ್ಯಳಾಗುತ್ತಾಳೆ ಮತ್ತು ಇದೇ ಕಾರಣದಿಂದಾಗಿ ಋತುಕಾಲದಲ್ಲಿ ಸ್ತ್ರೀಯರ ಕಾಮ-ವಾಸನೆಯು ಬಲವಾಗಿರುತ್ತದೆ, ಅವಳು ಪುರುಷನ ಸಂಬಂಧದ ಬಯಕೆಯಲ್ಲಿರುತ್ತಾಳೆ. ಈ ಸ್ವಾಭಾವಿಕವಾದ ವಾಸನೆಯನ್ನು ಕೇಂದ್ರೀಕರಿಸಲೋಸುಗವೇ ರಜಸ್ವಲೆಯಾಗುವ ಮೊದಲೇ ವಿವಾಹದ ವಿಧಾನ ಮಾಡಲಾಗಿದೆ. ಗಂಡನ ಆಶ್ರಯದಿಂದ ಸ್ತ್ರೀಯ ಕಾಮ ವಾಸನೆಯು ಇಲ್ಲಿ-ಅಲ್ಲಿ ಹರಡಿ ದೂಷಿತವಾಗುವುದಕ್ಕೆ ಅವಕಾಶವಿರುವುದಿಲ್ಲ. ಆದರೆ ವಿವಾಹವಾಗದಿರುವ ಸ್ಥಿತಿಯಲ್ಲಿ ಅದೇ ವಾಸನೆಯು ಅವಕಾಶವನ್ನು ಪಡೆದು ಯೂರೋಪು ದೇಶದಲ್ಲಾಗುತ್ತಿರುವಂತೆ ವ್ಯಭಿಚಾರದ ರೂಪದಲ್ಲಿ ಪರ್ಯವಸಾನವಾಗುತ್ತದೆ. ಅಲ್ಲಿ ಕುಮಾರಿ-ಮಾತೆಯರ ಸಂಖ್ಯೆಯು ಹೆಚ್ಚುತ್ತಿರುವುದನ್ನು ನೋಡಿದರೆ ಅಲ್ಲಿ ಸತೀತ್ವವು ಇಲ್ಲವೇ ಇಲ್ಲವೆಂದೋ ಅಥವಾ ಏನಾದರೂ ಉಳಿದುಕೊಂಡಿದ್ದಲ್ಲಿ ಶೀಘ್ರವೇ ಅದು ನಷ್ಟವಾಗುವುದೆಂದು ಹೇಳಬೇಕಾಗುವುದು.

ರಜಸ್ವಲೆಯಾದನಂತರ ಸ್ತ್ರೀಗೆ ಪುರುಷನ ಪ್ರಾಪ್ತಿಯ ಇಚ್ಛೆಯುಂಟಾಗುತ್ತದೆ. ಒಂದುವೇಳೆ ಆ ಸಮಯದಲ್ಲಿ ಪತಿಯ ಮೂಲಕ ಅವಳ ಅಂತಃಕರಣವು ಸುರಕ್ಷಿತವಾಗುವುದಿಲ್ಲವಾದರೆ ಅವಳ ಚಿತ್ತದ ಮೇಲೆ ಅನೇಕ ಪುರುಷರ ಛಾಯೆಯು ಮೂಡುತ್ತದೆ. ಅವಳ ಆದರ್ಶ ಸತೀತ್ವ ನಷ್ಟವಾಗಿ ಹೋಗುತ್ತದೆ. ಋತುಸ್ನಾನಮಾಡಿ ಅವಳು ಯಾವ ಪುರುಷನನ್ನು ಮನಸಾರೆ ನೋಡುತ್ತಾಳೋ ಅವನ ಮೂರ್ತಿಯು ಚಿತ್ತದ ಮೇಲೆ ಅಂಕಿತವಾಗುತ್ತದೆ. ಆದಕಾರಣ ಋತುಕಾಲಕ್ಕಿಂತ ಮುಂಚಿತವಾಗಿಯೇ ವಿವಾಹವಾಗಿಬಿಡುವುದು ಅತ್ಯಂತ ಅವಶ್ಯಕವಾಗಿದೆ. ತನ್ನ ಪತಿಯನ್ನುಳಿದು ಯಾವ ಸ್ತ್ರೀಯು ಯಾರನ್ನೂ ಪುರುಷರೂಪದಲ್ಲಿ ನೋಡುವುದಿಲ್ಲವೋ, ಹಾಗೆ ನೋಡಿದಾಗ್ಯೂ ತಂದೆ, ಸೋದರ ಅಥವಾ ಮಗನ ರೂಪದಲ್ಲಿ ನೋಡುತ್ತಾಳೋ ಅವಳು ಆದರ್ಶ ಸತಿಯೆನಿಸುತ್ತಾಳೆ. ಹೀಗಿದ್ದರೂ ಹೀಗೆ ನೋಡುವವಳನ್ನು ಸಹ ಮಧ್ಯಮ ಶ್ರೇಣಿಯ ಪತಿವ್ರತೆಯೆಂದು ತಿಳಿಯಲಾಗಿದೆ.

ಋತುಕಾಲಕ್ಕೆ ಮುಂಚಿತವಾಗಿ ವಿವಾಹವಾಗಿ ಪತಿಯ ಸಂರಕ್ಷಣೆಯಲ್ಲಿ ಇದ್ದಾಗಲೇ ಇದು ಸಂಭವನೀಯವಾಗಿದೆ. ಸಾಮಾನ್ಯವಾಗಿ ವಿವಾಹ ಸಮಯದಲ್ಲಿ ಕನ್ಯೆಯ ವಯಸ್ಸು ಹದಿಮೂರು ವರ್ಷಗಳು ಮತ್ತು ವರನ ವಯಸ್ಸು ಹದಿನೆಂಟು ವರ್ಷಗಳು ಆಗಿರಬೇಕು. ವಿವಾಹವಾಗುವುದು ಅವಶ್ಯಕವಾಗಿರುವುದರಿಂದ ಹೆಚ್ಚು ವಯಸ್ಸಾಗುವುದಕ್ಕೆ ಮೊದಲೇ ವಿವಾಹ ಮಾಡಿಕೊಳ್ಳುವುದು ಉತ್ತಮ.

□□

# ೬. ಋತುಕಾಲದಲ್ಲಿ ಸ್ತ್ರೀಯು ಹೇಗಿರಬೇಕು?

ಸ್ತ್ರೀಯ ಶರೀರದಲ್ಲಿ ಇರುವ ಮಲಿನತೆಯು ಪ್ರತಿ ತಿಂಗಳಲ್ಲಿ ರಜಸ್ರಾವದ ಮೂಲಕ ಹೊರಗೆ ಹಾಕಲ್ಪಟ್ಟು ಅವಳು ಪವಿತ್ರಳಾಗಿ ಗರ್ಭಧಾರಣೆಗೆ ಯೋಗ್ಯಳಾಗುತ್ತಾಳೆ. ಮನುಸ್ಮೃತಿ ಇದನ್ನೇ ಹೇಳುತ್ತದೆ. ಹಿಂದೂ ಶಾಸ್ತ್ರಗಳಲ್ಲಿ ರಜಸ್ವಲೆಯಾದ ಸ್ತ್ರೀಯು ಮೂರು ದಿನಗಳವರೆಗೆ ಯಾರನ್ನೂ ಮುಟ್ಟಬಾರದೆಂದು ಹೇಳಿದೆ. ಅವಳು ಎಲ್ಲರಿಂದ ಬೇರೆಯಾಗಿ, ಯಾರ ದೃಷ್ಟಿಯೂ ಬೀಳದಂತಹ ಸ್ಥಾನದಲ್ಲಿ ಕುಳಿತುಕೊಳ್ಳಬೇಕು. ನಾಲ್ಕನೆಯ ದಿನ ಸ್ನಾನಮಾಡಿ ಪವಿತ್ರಳಾಗುವವರೆಗೆ ಯಾರಿಗೂ ತನ್ನ ಮುಖವನ್ನು ತೋರಿಸಬಾರದು, ತನ್ನ ಶಬ್ದವನ್ನು ಕೇಳಿಸಬಾರದು.

**ಸ್ತ್ರೀ ಧರ್ಮಿಣೀ ತ್ರಿರಾತ್ರಂ ತು ಸ್ವಮುಖಂ ನೈವ ದರ್ಶಯೇತ್ ।**
**ಸ್ವವಾಕ್ಯಂ ಶ್ರಾವಯೇನ್ನಾಪಿ ಯಾವತ್ ಸ್ನಾನಾನ್ನ ಶುದ್ಧ್ಯತಿ ॥**

ಋತುಕಾಲದ ಸಮಯದಲ್ಲಿ ಪುರುಷರು ಮರೆತೂ ಸಹ ರಜಸ್ವಲೆಯಾದವಳ ಬಳಿ ಹೋಗಬಾರದು. ಮನು ಮಹಾರಾಜರು ಹೇಳುತ್ತಾರೆ -

**ನೋಪಗಚ್ಛೇತ್ ಪ್ರಮತ್ತೋಽಪಿ ಸ್ತ್ರಿಯಮಾರ್ತವದರ್ಶನೇ ।**
**ಸಮಾನಶಯನೇ ಚೈವ ನ ಶಯೀತ ತಯಾ ಸಹ ॥**
**ರಜಸಾಭಿಪ್ಲುತಾಂ ನಾರೀಂ ನರಸ್ಯ ಹ್ಯುಪಗಚ್ಛತಃ ।**
**ಪ್ರಜ್ಞಾ ತೇಜೋ ಬಲಂ ಚಕ್ಷುರಾಯುಶ್ಚೈವ ಪ್ರಹೀಯತೇ ॥**
**ತಾಂ ವಿವರ್ಜಯತಸ್ತಸ್ಯ ರಜಸಾ ಸಮಭಿಪ್ಲುತಾಮ್ ।**
**ಪ್ರಜ್ಞಾ ತೇಜೋ ಬಲಂ ಚಕ್ಷುರಾಯುಶ್ಚೈವ ಪ್ರವರ್ಧತೇ ॥**

(ಮನು. ೪/೪೦-೪೨)

ಕಾಮಾತುರನಾಗಿದ್ದರೂ ಪುರುಷನು ರಜೋದರ್ಶನದ ಸಮಯದಲ್ಲಿ ಸ್ತ್ರೀ ಸಮಾಗಮವನ್ನು ಮಾಡಬಾರದು ಮತ್ತು ಅವಳ ಜೊತೆಯಲ್ಲಿ ಒಂದೇ ಹಾಸಿಗೆಯಲ್ಲಿ ಮಲಗಬಾರದು. ರಜಸ್ವಲೆಯಾದ ನಾರಿಯ ಜೊತೆಯಲ್ಲಿ ಸಮಾಗಮ ಮಾಡುವ ಪುರುಷನ ಬುದ್ಧಿ, ತೇಜಸ್ಸು, ಬಲ ನೇತ್ರಗಳು ಮತ್ತು ಆಯುಸ್ಸು ನಷ್ಟವಾಗುವುದು. ಯಾವ ಪುರುಷನು ರಜಸ್ವಲೆಯಾದ ಸ್ತ್ರೀಯಿಂದ ದೂರವಿರುವನೋ ಅವನ ಬುದ್ಧಿ, ಬಲ, ತೇಜಸ್ಸು, ನೇತ್ರ ಜ್ಯೋತಿ ಮತ್ತು ಆಯುಸ್ಸು ಹೆಚ್ಚುತ್ತವೆ. ರಜಸ್ವಲೆಯಾಗಿರುವ ಸಮಯದಲ್ಲಿ ಎಷ್ಟು ಇಂದ್ರಿಯ ಸಂಯಮ, ಹಗುರವಾದ ಭೋಜನ ಹಾಗೂ ವಿಲಾಸತೆಯ ಅಭಾವವಿರುವುದೋ ಅಷ್ಟೇ ಪ್ರಮಾಣದಲ್ಲಿ ಸ್ತ್ರೀಶೋಣಿತದ ಶಕ್ತಿಯು ಕಡಿಮೆಯಾಗಿ, ಅದರಿಂದ ಹೆಣ್ಣು ಮಗು ಹುಟ್ಟದೆ ಗಂಡು ಮಗುವಿನ ಜನನವಾಗುತ್ತದೆ. ರಜಸ್ವಲೆಯಾದ ಸ್ತ್ರೀಯು ಮೂರು ದಿನಗಳವರೆಗೆ ಕೇವಲ ಒಂದು ಹೊತ್ತು

ಊಟಮಾಡುವುದು, ನೆಲದ ಮೇಲೆ ಮಲಗುವುದು, ಸಂಯಮಳಾಗಿರುವುದು, ಮೊಸರು-ತುಪ್ಪ-ಹಾಲನ್ನು ಸೇವಿಸದಿರುವುದು, ಪುಷ್ಪಮಾಲೆ ಅಥವಾ ಆಭರಣಗಳನ್ನು ಧರಿಸದಿರುವುದು, ಅಗ್ನಿಯನ್ನು ಸ್ಪರ್ಶಿಸದಿರುವುದು- ಹೀಗಿದ್ದು ನಾಲ್ಕನೆಯ ದಿನ ಸಚೇಲಸ್ನಾನ ಮಾಡಬೇಕು.

ಋತುಕಾಲದಲ್ಲಿ ಸ್ತ್ರೀಯ ಸ್ಪರ್ಶಮಾಡದಿರುವುದರಿಂದ ಅವಳಿಗೆ ಅವಮಾನ ಮಾಡಿದಂತಾಗುವುದೆಂದು ತಿಳಿಯಬಾರದು. ತನ್ನ ಆರೋಗ್ಯಕ್ಕಾಗಿಯೂ, ಇತರರ ಆರೋಗ್ಯಕ್ಕಾಗಿಯೂ ಮತ್ತು ಪ್ರಾಕೃತಿಕ ಜಡವಸ್ತುಗಳು ತಮ್ಮ ಸ್ವರೂಪದಲ್ಲಿ ಸುರಕ್ಷಿತವಾಗಿರುವುದಕ್ಕಾಗಿಯೂ ಸಹ ಅವಳು ಯಾರನ್ನೂ ನೋಡದಿರುವುದು, ಮತ್ತು ಸ್ಪರ್ಶಿಸದಿರುವುದು ಆವಶ್ಯಕವಾಗಿದೆ. ಮನೆಯಲ್ಲಿ ಹಪ್ಪಳವನ್ನು ತಯಾರಿಸುತ್ತಿರುವುದನ್ನು ರಜಸ್ವಲೆಯಾದವಳು ನೋಡಿದರೆ ಅವು ಕೆಂಪು ಬಣ್ಣಕ್ಕೆ ತಿರುಗುತ್ತವೆಯೆನ್ನುವುದು ಸರ್ವೇಸಾಮಾನ್ಯ ಸಂಗತಿಯಾಗಿದೆ. ಕೆಲವರು ಇದನ್ನು ಕೇವಲ ಭ್ರಮೆ ಎಂದು ತಳ್ಳಿಹಾಕುವುದುಂಟು. ಆದರೆ ಇದು ವೈಜ್ಞಾನಿಕ ಸತ್ಯವಾಗಿದೆ.

ಅಮೇರಿಕಾ ದೇಶದ ಪ್ರೊ. ಶೀಕ್ (Schick) ನು ಅನುಸಂಧಾನಗೈದು ರಜಸ್ವಲೆಯಾದವಳ ಶರೀರದಲ್ಲಿ ಪ್ರಬಲವಾದ ವಿಷ ಹರಿಯುತ್ತಿರುವುದೆಂದೂ, ಅವಳು ಯಾವ ಹೂದೋಟದಲ್ಲಿ ಪ್ರವೇಶಮಾಡುವಳೋ ಅದರಲ್ಲಿನ ಎಲೆ-ಹೂಗಳು ಒಣಗಿ ಹೋಗಿಬಿಡುವುದೆಂದೂ, ಹಣ್ಣಿನ ಮರಗಳು ಸಾಯುವುದಲ್ಲದೆ ಹಣ್ಣುಗಳು ಕೊಳೆತು ನಾರುತ್ತವೆಂಬುದು ಪ್ರಮಾಣಸಿದ್ಧವಾಗಿದೆ, ವೃಕ್ಷಗಳಲ್ಲಿ ಹುಳು-ಹುಪ್ಪಟೆಗಳು ಬೀಳುತ್ತವೆ-ಸಾಯುತ್ತವೆ ಎಂದೂ ಹೇಳಿದ್ದಾನೆ.*

## ರಜೋದರ್ಶನದ ಸಮಯದಲ್ಲಿ ಪಾಲಿಸಬೇಕಾದ ನಿಯಮಗಳು

ಎಲ್ಲಿಯವರೆಗೆ ರಕ್ತವು ಸ್ರವಿಸುತ್ತಿರುತ್ತದೆಯೋ ಅಲ್ಲಿಯವರೆಗೆ ಋತುಕಾಲವೇ. ಸಾಮಾನ್ಯವಾಗಿ ಮೂರು ದಿನಗಳ ಕಾಲವನ್ನು ಋತುಕಾಲವೆಂದು ಗೊತ್ತುಪಡಿಸಲಾಗಿದೆಯಾದರೂ, ಆ ಕಾಲದ ನಂತರವೂ ರಕ್ತಸ್ರಾವವು ನಿಲ್ಲಲಿಲ್ಲವಾದರೆ ನಾಲ್ಕನೆಯ ದಿನ ಸ್ನಾನಮಾಡುವುದರಿಂದ ಶುದ್ಧಿಯಾಗುವುದಿಲ್ಲ. ಅಶುದ್ಧಿಯ ಕಾರಣ ರಕ್ತಸ್ರಾವವಾದ್ದರಿಂದ ಅದಿರುವವರೆಗೆ ಸ್ನಾನ ಮಾತ್ರದಿಂದ ಹೇಗೆ ಶುದ್ಧಿಯಾದೀತು? ಅಂದಮೇಲೆ ರಕ್ತಸ್ರಾವವಿರುವವರೆಗೆ ನಿಯಮಗಳನ್ನು ಪಾಲಿಸುವುದು ಆವಶ್ಯಕವಾಗಿದೆ.

* American Journal of clinical Medicine, May 1921, Medical record for February 1919 (p. 317) abstracts and article (wien week, May 20, 1920) ಅನ್ನು ನೋಡಿರಿ.

## ನಿಯಮಗಳು

೧. ಹೊಟ್ಟೆಯ ತಳಭಾಗವನ್ನು ಹೆಚ್ಚು ಅಲುಗಾಡಿಸುವುದಾಗಲಿ, ಅದರ ಮೇಲೆ ಹೆಚ್ಚು ಭಾರ ಬೀಳುವಂತಹ ಕೆಲಸಗಳನ್ನು ಮಾಡಬಾರದು. ನೀರಿನಿಂದ ತುಂಬಿದ ಕೊಡವನ್ನು ಎತ್ತುವುದು, ಹೆಚ್ಚು ಕಾಲದವರೆಗೆ ಕುಕ್ಕರಗಾಲಿನಮೇಲೆ ಕುಳಿತಿರುವುದು, ಕುಣಿದಾಡುವುದು, ಓಡುವುದು, ಬಹಳ ಜೋರಾಗಿ ನಗುವುದು, ಅಳುವುದು ಅಥವಾ ಜಗಳವಾಡುವುದು, ಹೆಚ್ಚು ಅಲೆದಾಡುವುದು ತಿರುಗಾಡುವುದು, ಹಾಡುವುದು ವಾದ್ಯ ನುಡಿಸುವುದು, ಶೋಕ, ದುಃಖ ಅಥವಾ ಕಾಮವನ್ನು ಅಧಿಕಗೊಳಿಸುವ ದೃಶ್ಯವನ್ನು ನೋಡುವುದು ಅಥವಾ ಗ್ರಂಥವನ್ನು ಓದುವುದು-ಇವೆಲ್ಲ ಹಾನಿಯನ್ನುಂಟು ಮಾಡುವ ಕ್ರಿಯೆಗಳಾಗಿವೆ. ಅದರಲ್ಲೂ ನೀರಿನಿಂದ ತುಂಬಿದ ಬಿಂದಿಗೆಯನ್ನೆತ್ತುವುದು ಅಥವಾ ಒಲೆಯ ಮೇಲಿಂದ ಭಾರವಾದ ಪಾತ್ರೆಯನ್ನು ಕೆಳಗಿಳಿಸುವುದು- ಅಂದರೆ ಶರೀರದ ಒಳಭಾಗದಲ್ಲಿ ಭಾರಬೀಳುವಂತಹ ಕೆಲಸವನ್ನಂತೂ ಮಾಡಲೇಬಾರದು. ಮನೆಯ ಸಾಧಾರಣ ವಾದ ಕೆಲಸಗಳನ್ನು ಮಾಡಲು ಅಡ್ಡಿಯಿರುವುದಿಲ್ಲ.

೨. ಹೊಟ್ಟೆಯ ತಳಭಾಗ ಮತ್ತು ಸೊಂಟಕ್ಕೆ ಶೀತವುಂಟಾಗುವಂತಹ ಯಾವ ಕಾರ್ಯವನ್ನೂ ಮಾಡಬಾರದು. ರಜೋದರ್ಶನದ ಕಾಲದಲ್ಲಿ ಸ್ನಾನಮಾಡುವುದನ್ನು ನಿಷೇಧಿಸಿರುವುದಕ್ಕೆ ಇದೇ ಕಾರಣ. ಈ ಕಾಲದಲ್ಲಿ ತಲೆ ಬಿಸಿಯಾದಲ್ಲಿ ಅಥವಾ ತಾಪ ಹೆಚ್ಚಿದಲ್ಲಿ ತಣ್ಣನೆಯ ತೈಲವನ್ನು ಹಚ್ಚಬೇಕು ಅಥವಾ ಒದ್ದೆಯಾದ ಅಂಗವಸ್ತ್ರದಿಂದ ಒರೆಸಬೇಕು. ಆದರೆ ಸೊಂಟದಾಳದ ನೀರಿನಲ್ಲಿ ಸೊಂಟವನ್ನು ಮುಳುಗಿಸಿ ಸ್ನಾನಮಾಡುವುದು ಅಥವಾ ಒದ್ದೆಯಾದ ನೆಲದಮೇಲೆ ಮೈಬಿಚ್ಚಿ ಮಲಗುವುದು ತುಂಬ ಹಾನಿಕರ.

೩. ಕೊಳಕಾದ, ಹಳೆಯದಾದ ಅಥವಾ ಚಿಂದಿ ಚಿಂದಿಯಾದ ಬಟ್ಟೆಯನ್ನು ಉಪಯೋಗಿಸಬಾರದು. ಒಮ್ಮೆ ಉಪಯೋಗಿಸಿದ ಬಟ್ಟೆಯನ್ನು ಒಗೆದ ಮೇಲೆ ಸಹ ಉಪಯೋಗಿಸುವುದು ಹಾನಿಕರ. ರಜಸ್ವಲೆಯಾದ ಕಾಲದ ರಕ್ತವು ಒಂದು ಪ್ರಕಾರವಾದ ವಿಷವಾಗಿದೆ. ಈ ವಿಷದ ಸಂಸರ್ಗದಲ್ಲಿ ಬರುವ ಪದಾರ್ಥಗಳೆಲ್ಲವನ್ನೂ ವಿಷವೆಂದೇ ತಿಳಿದು ತ್ಯಾಗಮಾಡಬೇಕು.

೪. ರಕ್ತಸ್ರಾವವಾಗುತ್ತಿರುವವರೆಗೆ ಅರಿತು-ಮರೆತೂ ಪತಿಯ ಸಂಗವನ್ನು ಮಾಡಬಾರದು. ಶಾಸ್ತ್ರದಂತೆ ಈ ದಿನಗಳಲ್ಲಿ ಪತಿಯ ದರ್ಶನಮಾಡುವುದು ಸಹ ನಿಷಿದ್ಧವೆಂದು ತಿಳಿಸಲಾಗಿದೆ.

೫. ಮಾಂಸಾಹಾರಿಗಳು ಈ ಕಾಲದಲ್ಲಿ ಮಾಂಸ ಮದ್ಯ ಮೀನು ಅಥವಾ ಈರುಳ್ಳಿಯೇ ಮುಂತಾದುವನ್ನು ತಿನ್ನಬಾರದು. ಮಾಂಸಾಹಾರವು ಮಾನವ ಪ್ರಕೃತಿಗೆ ವಿರುದ್ಧವಾದುದು. ಆದ್ದರಿಂದ ಮಾಂಸಾಹಾರವನ್ನು ಎಂದಿಗೂ ಮಾಡಬಾರದು. ಮದ್ಯ, ಮೀನು ಮತ್ತು ಮೊಟ್ಟೆಯನ್ನು ಮುಟ್ಟುವುದೂ ಪಾಪ. ಇವುಗಳಿಂದ ಮನುಷ್ಯನು ದೂರವಿರಬೇಕು.

ನಿಯಮಗಳು ಸಾಧಾರಣವಾಗಿವೆ, ಆದರೆ ಇವುಗಳನ್ನು ಪಾಲಿಸುವ ಸ್ತ್ರೀಯು ಎಷ್ಟು ಆರೋಗ್ಯವಂತಳೂ, ಸುಖಿಯೂ ಆಗಿರುತ್ತಾಳೋ, ಪಾಲಿಸದಿರುವ ಸ್ತ್ರೀಯು ಅಷ್ಟೇ ರೋಗಿ ಮತ್ತು ದುಃಖಿತಳಾಗುವುದು ಖಂಡಿತ.

❑❑

## ೭. ಗರ್ಭಾಧಾನದ ಶ್ರೇಷ್ಠ ನಿಯಮಗಳು

ಗರ್ಭಾಧಾನ ಸಂಸ್ಕಾರವು ಎಲ್ಲ ಸಂಸ್ಕಾರಗಳಿಗಿಂತ ಆವಶ್ಯಕವಾದ ಸಂಸ್ಕಾರವಾಗಿದೆ. ಆದರೆ ಇತ್ತೀಚೆಗೆ ಆ ಸಂಸ್ಕಾರವು ಸರ್ವಥಾ ಲೋಪವಾಗಿ ಹೋಗಿದೆ. ಸ್ತ್ರೀ-ಪುರುಷರ ಶಾರೀರಿಕ ಮತ್ತು ಮಾನಸಿಕ ಸ್ವಾಸ್ಥ್ಯ, ಪವಿತ್ರತೆ, ಆನಂದ ಮತ್ತು ಶಾಸ್ತ್ರಾನುಕೂಲವಾದ ತಿಥಿ, ವಾರ, ಸಮಯ ಮೊದಲಾದವುಗಳ ಸಂಯೋಗದಿಂದಲೇ ಶ್ರೇಷ್ಠ ಸಂತಾನೋತ್ಪತ್ತಿಯಾಗುತ್ತದೆ. ಫೋಟೋ ಮೂಡುತ್ತದೆ. ಫೋಟೋ ತೆಗೆಯುವುದಕ್ಕೆ ಸಮಯವು ಹೇಗೆ ನಿಶ್ಚಿತವಾಗಿರುತ್ತದೆಯೋ ಅದೇ ಪ್ರಕಾರ ಗರ್ಭಾಧಾನದ ಸಮಯದಲ್ಲಿ ದಂಪತಿಗಳ ಶರೀರ ಮತ್ತು ಮನಸ್ಸುಗಳು ಹೇಗಿರುತ್ತವೆಯೋ ಅಂತಹ ತನು-ಮನಗಳನ್ನುಳ್ಳ ಸಂತಾನೋತ್ಪತ್ತಿಯಾಗುತ್ತದೆ. ಮನುಷ್ಯನ ಪ್ರಧಾನ ಲಕ್ಷ್ಯ ಭಗವತ್ಪ್ರಾಪ್ತಿಯೆಂಬುದಾಗಿದೆ. ಆದ್ದರಿಂದ ಅದೇ ಲಕ್ಷ್ಯವನ್ನು ಧ್ಯಾನದಲ್ಲಿಟ್ಟು, ಅದಕ್ಕೋಸ್ಕರವೇ ಎಲ್ಲ ಕಾರ್ಯಗಳನ್ನು ಮಾಡಬೇಕು. ಗರ್ಭಾಧಾನದ ಉದ್ದೇಶ, ಗರ್ಭಧಾರಣೆಯ ಯೋಗ್ಯತೆ, ಅದಕ್ಕೆ ಉಪಯೋಗವಾಗುವಂತಹ ಮನಸ್ಸು ಸ್ವಾಸ್ಥ್ಯ ಹಾಗೂ ಉಪಯುಕ್ತವಾದ ಕಾಲ-ಇವೆಲ್ಲವನ್ನೂ ವಿಮರ್ಶಿಸಿ ತಿಳಿದು ವಿವಾಹಿತ ಪತಿ-ಪತ್ನಿಯರು ಸಂಸರ್ಗಮಾಡುವುದರಿಂದ ಉತ್ತಮ ಸಂತಾನ ಜನಿಸುತ್ತದೆ. ಮನಸ್ಸಿಗೆ ಬಂದಾಗ ಅಥವಾ ಸ್ತ್ರೀಯು ಋತುಮತಿಯಾಗುತ್ತಲೇ ಪಶುಗಳಂತೆ ವ್ಯವಹಾರ ಮಾಡುವುದರಿಂದ ಹಾನಿಯೇ ಉಂಟಾಗುತ್ತದೆ.

ಸಂತಾನವಾಗದಿರುವ ಪರಿಸ್ಥಿತಿಯಲ್ಲಿ ಪತಿ-ಪತ್ನಿಯರಿಬ್ಬರ ಶರೀರಗಳನ್ನು ವೈದ್ಯಕೀಯ ಪರೀಕ್ಷೆಗೆ ಒಳಪಡಿಸಬೇಕು ಮತ್ತು ಗರ್ಭಾಧಾನ ಕಾರ್ಯದಲ್ಲಿ ಅಡ್ಡಿಯಾಗಿರಬಹುದಾದ ರೋಗವು ಕಂಡುಬಂದಲ್ಲಿ ಅದರ ಚಿಕಿತ್ಸೆ ಮಾಡಿಸಬೇಕು. ರೋಗವಿಲ್ಲದಿದ್ದು ಪುತ್ರನ ಅಭಿಲಾಷೆ ಪ್ರಬಲವಾಗಿದ್ದಲ್ಲಿ (ಸಂಸಾರ ಬಂಧನದಿಂದ ಮುಕ್ತರಾಗಲು ಪುತ್ರನ ಆವಶ್ಯಕತೆಯೇನೂ ಇಲ್ಲ, ಸಂತಾನದ ಮೋಹದಿಂದಲಾದರೋ ಬಂಧನವು ಹೆಚ್ಚುತ್ತದೆ) ಹರಿವಂಶಪುರಾಣವನ್ನು ಶ್ರದ್ಧಾ-ಭಕ್ತಿಪೂರ್ವಕವಾಗಿ, ಮನೋಯೋಗ ಪೂರ್ವಕವಾಗಿ ಶ್ರವಣ ಮಾಡಬೇಕು. ಯಥಾಶಕ್ತಿ ದಕ್ಷಿಣೆಯನ್ನು ಕೊಟ್ಟು ಸಾತ್ತ್ವಿಕ ಪ್ರವೃತ್ತಿಯ ವಯೋವೃದ್ಧನೂ, ಸದಾಚಾರಿಯೂ ಮತ್ತು ಭಗವಂತನಲ್ಲಿ ವಿಶ್ವಾಸಿಯೂ ಆಗಿರುವ ಪವಿತ್ರನಾದ ಬ್ರಾಹ್ಮಣನ ಮುಖದಿಂದ ಕಥೆಯನ್ನು ಶ್ರವಣಮಾಡುವುದರಿಂದ ಸುಪುತ್ರನು ಜನಿಸುವುದು ದೊಡ್ಡ ವಿಷಯವೇನೂ ಅಲ್ಲ. ಇದಕ್ಕಾಗಿ, 'ಸಂತಾನಗೋಪಾಲ' ಮಂತ್ರದ ಜಪವನ್ನು ಸಹ ಮಾಡಲಾಗುತ್ತದೆ. ಆ ಮಂತ್ರವು ಹೀಗಿದೆ:-

**ದೇವಕೀಸುತ ಗೋವಿಂದ ವಾಸುದೇವ ಜಗತ್ಪತೇ ।**
**ದೇಹಿ ಮೇ ತನಯಂ ಕೃಷ್ಣ ತ್ವಾಮಹಂ ಶರಣಂ ಗತಃ ॥**

ಈ ಮಂತ್ರದ ಜಪ ಮಾಡುವುದಾದರೆ ನಂಬಿಕೆ ಮತ್ತು ಶ್ರದ್ಧಾ ಪೂರ್ವಕವಾಗಿ ಪತಿ-ಪತ್ನಿಯರಿಬ್ಬರೂ ಮಾಡಬೇಕು. ಪ್ರಾತಃಕಾಲ ಸ್ನಾನ ಮಾಡಿ ನಿತ್ಯಕರ್ಮ (ಪುರುಷನು ಸಂಧ್ಯಾವಂದನಾದಿ, ಸ್ತ್ರೀಯು ನಿಯಮಿತವಾದ ದೈನಂದಿನ ಜಪ) ಮಾಡಿದ ನಂತರ ತುಳಸೀಮಾಲೆಯನ್ನು ಧರಿಸಿ, ಸಂತಾನ ಗೋಪಾಲ ಮಂತ್ರವನ್ನು ಜಪಿಸಬೇಕು. ಜಪದ ಸಮಯದಲ್ಲಿ ಎದುರಿಗೆ ತೊಳೆದು ಶುದ್ಧೀಕರಿಸಿದ ಪವಿತ್ರವಾದ ಜಗುಲಿಯ ಮೇಲೆ ಅಥವಾ ಗೋಡೆಯಮೇಲೆ ಭಗವಾನ್ ಶ್ರೀಕೃಷ್ಣನ ಚಿತ್ರಪಟವನ್ನು ಇಟ್ಟು ಭಗವದ್ಭಕ್ತಿ ಭಾವಗಳಿಂದ ಅದನ್ನು ಪೂಜಿಸಬೇಕು. ಪೂಜೆಮಾಡುವಾಗ ಚಂದನ, ಪುಷ್ಪ, ಧೂಪ, ದೀಪ, ನೈವೇದ್ಯಗಳನ್ನರ್ಪಿಸಿ ಜಲದಿಂದ ಆಚಮನ ಮಾಡಿಸಬೇಕು. ಮತ್ತೆ ಮುಖಶುದ್ಧಿಗಾಗಿ ತಾಂಬೂಲ ಅಥವಾ ಏಲಕ್ಕಿ ಅರ್ಪಿಸಬೇಕು. ಕರ್ಪೂರಾರತಿಯನ್ನು ಬೆಳಗಿಸಿ, ಮಂತ್ರ-ಪುಷ್ಪ ಅರ್ಪಿಸಿ ಪ್ರಾರ್ಥನೆ ಮಾಡಬೇಕು. ಪೂಜೆಯ ಸಾಮಗ್ರಿಗಳೆಲ್ಲವೂ ಶುದ್ಧವಾಗಿರಬೇಕು. ಅನಂತರ ಭಗವಂತನಲ್ಲಿ ಕಾತರಭಾವದಿಂದ ಪ್ರಾರ್ಥಿಸಬೇಕು. ಭಗವಂತನ ಕೃಪಾಪ್ರಸಾದದಿಂದ ನಮಗೆ ಸತ್ಪುತ್ರ ಪ್ರಾಪ್ತಿಯಾಗುವುದೆಂಬ ವಿಶ್ವಾಸವಿರಬೇಕು. ಪ್ರಾರ್ಥನೆ ಹೀಗಿರಬೇಕು - ದಯಾಮಯ, ಭಗವಂತಾ! ನಮಗೆ ಪುತ್ರ ಸಂತಾನವನ್ನು ಕರುಣಿಸು. ಆ ಪುತ್ರನು ಸುಯೋಗ್ಯನೂ, ದೀರ್ಘ ಜೀವಿಯೂ, ಸುಂದರನೂ, ಸಚ್ಚರಿತ್ರನೂ, ಮೇಧಾವಿಯೂ, ಸುಖಜೀವಿಯೂ ಮತ್ತು ಭಗವದ್ಭಕ್ತನೂ ಆಗಿರಲಿ.

ಈ ಪ್ರಾರ್ಥನಾ ಕ್ರಮದ ನಂತರ ತುಳಸೀಮಾಲೆಯನ್ನು ಹಿಡಿದು ಮಂತ್ರವನ್ನು ಜಪಿಸಲು ಪ್ರಾರಂಭಿಸಬೇಕು. ಪತ್ನಿಗೆ ಸಾಧ್ಯವಾಗದಿದ್ದಲ್ಲಿ ಪತಿಯೇ ಮಾಡಬಹುದು. ಪ್ರತಿದಿನ ೫೫ ಸಲ ಮಂತ್ರವನ್ನು ಅವಶ್ಯವಾಗಿ ಜಪಿಸಬೇಕು. ಈ ಪ್ರಕಾರವಾಗಿ ಒಂದು ತಿಂಗಳ ಪರ್ಯಂತ ಜಪಿಸಿದರೆ ಮಂತ್ರ ಸಿದ್ಧಿಯಾಗಿಬಿಡುತ್ತದೆ. ಇದಾದ ನಂತರ ಪ್ರತಿದಿನ ಸಾಧ್ಯವಾದಷ್ಟು ಶ್ರದ್ಧಾ ವಿಶ್ವಸಪೂರ್ವಕ ಜಪವನ್ನು ಮುಂದುವರಿಸಬೇಕು. ಮಂತ್ರಸಿದ್ಧಿಯಾದ ನಂತರ ಪತ್ನಿಯ ಋತುಸ್ನಾನವಾದಾಗ ಪುತ್ರನ ಪ್ರಾಪ್ತಿಗಾಗಿಯೇ (ಕಾಮ ವಿಕಾರಕ್ಕೆ ವಶರಾಗಿ ಅಲ್ಲ) ಯುಗ್ಮ ರಾತ್ರಿಯಲ್ಲಿ ಗರ್ಭಾಧಾನ ಮಾಡಬೇಕು.

ಗರ್ಭಾಧಾನದ ಕಾಲದ ಸಂಬಂಧದಲ್ಲಿ ಇರುವ ಶಾಸ್ತ್ರದ ವ್ಯವಸ್ಥೆಯನ್ನು ಇಲ್ಲಿ ಸಂಕ್ಷೇಪವಾಗಿ ಬರೆಯಲಾಗುತ್ತದೆ. ಲಗ್ನ, ಸೂರ್ಯ ಮತ್ತು ಚಂದ್ರರು ಪಾಪಯುಕ್ತರು ಮತ್ತು ಪಾಪಮಧ್ಯಗತರಾಗದಿರುವಾಗ ಸಪ್ತಮ ಸ್ಥಾನದಲ್ಲಿ ಪಾಪಗ್ರಹವಿಲ್ಲದಿರುವಾಗ, ಅಷ್ಟಮಸ್ಥಾನದಲ್ಲಿ ಮಂಗಳ ಮತ್ತು ನಾಲ್ಕರಲ್ಲಿ ಪಾಪಗ್ರಹವಿಲ್ಲದಿರುವಾಗ, ರಾಶಿ, ಲಗ್ನ ಹಾಗೂ ಲಗ್ನದ ನಾಲ್ಕನೆಯ, ಐದನೆಯ, ಏಳನೆಯ, ಒಂಭತ್ತನೆಯ ಮತ್ತು ದಶಮಸ್ಥಾನಗಳು ಶುಭಗ್ರಹಯುಕ್ತವಾಗಿದ್ದಲ್ಲಿ, ಮೂರನೆಯ, ಆರನೆಯ ಮತ್ತು ಹನ್ನೊಂದನೆಯ ಸ್ಥಾನಗಳು ಪಾಪಯುಕ್ತವಾದಲ್ಲಿ 'ಗಂಡ' ಸಮಯವನ್ನು ತ್ಯಾಗಮಾಡಿ ಯುಗ್ಮರಾತ್ರಿಯಲ್ಲಿ ಪುರುಷನ ಚಂದ್ರಾದಿಗಳು ಶುದ್ಧವಾಗಿದ್ದಾಗ ಗರ್ಭಾಧಾನ ಮಾಡಬೇಕು.*

ಋತುವಾದ ಮೊದಲ ದಿನದಿಂದ ಹದಿನಾರನೇ ದಿನದವರೆಗೆ ಋತುಕಾಲ ವೆಂದು ತಿಳಿಯಲಾಗಿದೆ. ಇವುಗಳಲ್ಲಿ ಮೊದಲನೆಯ, ಎರಡನೆಯ, ಮೂರನೆಯ, ನಾಲ್ಕನೆಯ, ಹನ್ನೊಂದನೆಯ ಮತ್ತು ಹದಿಮೂರನೇ ರಾತ್ರಿಯನ್ನುಳಿದು ಯುಗ್ಮ ರಾತ್ರಿಗಳಲ್ಲಿ ಯಾವ ರಾತ್ರಿಯಲ್ಲಿಯಾದರೂ ಗರ್ಭಾಧಾನಮಾಡಬಹುದು. ಜ್ಯೇಷ್ಠ

---

* **ಪಾಪಸಂಯುತಮಧ್ಯಗೇಷು ದಿನಕೃಲ್ಲಗ್ನಕ್ಷಪಾಸ್ವಾಮಿಷು**
**ತದ್ದ್ಯೂನೇಷ್ವಶುಭೋಜ್ಝಿತೇಷು ಧಿಕುಜೇ ಚ್ಛಿದ್ರೇ ವಿಪಾಪೇ ಸುಖೇ ।**
**ಸದ್ಯುಕ್ತೇಷು ತ್ರಿಕೋಣಕಂಟಕವಿಧೂಷ್ವಾಯತ್ರಿಷಷ್ಠಾನ್ವಿತೇ**
**ಪಾಪೇ ಯುಗ್ಮನಿಶಾಸ್ವಗಂಡಸಮಯೇ ಪುಂಶುದ್ಧಿತಃ ಸಂಗಮಃ ॥**

ಅಶ್ವಿನೀ, ಮಘಾ ಮತ್ತು ಮೂಲ ನಕ್ಷತ್ರದಲ್ಲಿ ಪ್ರಥಮ ಮೂರು ಗಂಡ ಮತ್ತು ರೇವತೀ, ಆಶ್ಲೇಷ, ಜ್ಯೇಷ್ಠ ನಕ್ಷತ್ರದಲ್ಲಿ ಉಳಿದ ಐದು ಗಂಡಗಳೆಂದು ತಿಳಿಯಲಾಗುತ್ತದೆ. ಮೂಲದ ಆದಿಯು ಗಂಡವೆಂದೂ ಮತ್ತು ಜ್ಯೇಷ್ಠದ ಉಳಿದ ಐದು ಗಂಡಗಳ ಹೆಸರು ದಿವಾಗಂಡವೆಂದಿವೆ. ಮಘಾದ ಮೊದಲ ಮೂರು ದಂಡಗಳು ಮತ್ತು ಆಶ್ಲೇಷದ ಐದು ದಂಡಗಳ ಹೆಸರು ರಾತ್ರಿ ಗಂಡವೆಂದಾಗಿದೆ. ಅಶ್ವಿನಿಯ ಮೊದಲ ಮೂರು ಗಂಡಗಳು ಮತ್ತು ರೇವತಿಯ ಉಳಿದ ಗಂಡಗಳ ಹೆಸರು ಸಂಧ್ಯಾಗಂಡ ಎಂದಾಗಿದೆ.

ಮೂಲ, ಮಘ, ಆಶ್ಲೇಷ, ರೇವತಿ, ಕೃತ್ತಿಕೆ, ಅಶ್ವಿನಿ, ಉತ್ತರ-ಫಲ್ಗುಣೀ, ಉತ್ತರಾಷಾಢ ಮತ್ತು ಉತ್ತರ ಭಾದ್ರಪದ ನಕ್ಷತ್ರ ಹಾಗೂ ಪರ್ವ ತಿಥಿಗಳು, ಚತುರ್ದಶಿ, ಅಮಾವಾಸ್ಯೆ, ಪೌರ್ಣಿಮೆ, ಅಷ್ಟಮಿ, ಏಕಾದಶೀ, ವ್ಯತಿಪಾತ, ಸಂಕ್ರಾಂತಿ, ಇಷ್ಟಜಯಂತೀ ಮುಂತಾದ ಪರ್ವಗಳನ್ನು ತ್ಯಾಗಮಾಡಿ ಗರ್ಭಾಧಾನ ಮಾಡಬೇಕು.

ಮನುವಿನ ಹೇಳಿಕೆಯಂತೆ ಹದಿನಾರು ರಾತ್ರಿಗಳು ಋತುಕಾಲವಾಗಿವೆ. ಇವುಗಳ ಪೈಕಿ ರಕ್ತಸ್ರಾವದ ಮೊದಲ ನಾಲ್ಕು ರಾತ್ರಿಗಳು ಅತ್ಯಂತ ನಿಂದನೀಯ. ಈ ನಾಲ್ಕು, ಹನ್ನೊಂದು ಮತ್ತು ಹದಿಮೂರನೇ ರಾತ್ರಿ-ಹೀಗೆ ಆರು ರಾತ್ರಿಗಳಲ್ಲಿ ಸಂಸರ್ಗ ನಿಷಿದ್ಧವಾಗಿದೆ. ಉಳಿದ ಹತ್ತು ರಾತ್ರಿಗಳಲ್ಲಿ ಆರನೆಯ, ಎಂಟನೆಯ ಮತ್ತು ಹತ್ತನೆಯ ಯುಗ್ಮರಾತ್ರಿಗಳಲ್ಲಿ ಗರ್ಭಾಧಾನವಾದಲ್ಲಿ ಪುತ್ರನೂ ಹಾಗೂ ಐದು, ಏಳು ಮುಂತಾದ ಅಯುಗ್ಮರಾತ್ರಿಗಳಲ್ಲಿ ಆದಲ್ಲಿ ಕನ್ಯೆಯೂ ಜನಿಸುವಳೆಂದು ಹೇಳಲಾಗಿದೆ. ಋತುಕಾಲದ ನಿಂದಿತವಾದ ಆರು ರಾತ್ರಿಗಳು ಮತ್ತು ಅನಿಂದಿತವಾದ ಹತ್ತು ರಾತ್ರಿಗಳಲ್ಲಿ ಯಾವುದಾದರೂ ಎಂಟು ರಾತ್ರಿಗಳು - ಹೀಗೆ ಹದಿನಾಲ್ಕು ರಾತ್ರಿಗಳನ್ನು ಬಿಟ್ಟು ಉಳಿದ ಪರ್ವವರ್ಜಿತ ಎರಡು ರಾತ್ರಿಗಳಲ್ಲಿ ಸ್ತ್ರೀ-ಸಂಸರ್ಗ ಮಾಡುವವನ ಬ್ರಹ್ಮಚರ್ಯಕ್ಕೆ ಹಾನಿಯುಂಟಾಗುವುದಿಲ್ಲ. ಅವನು ಗೃಹಸ್ಥಾಶ್ರಮದಲ್ಲಿದ್ದೂ ಸಹ ಬ್ರಹ್ಮಚಾರಿಯೇ ಆಗಿದ್ದಾನೆ.

ಈ ವಿಷಯದಲ್ಲಿ ರಜೋದರ್ಶನದ ಸಮೀಪವರ್ತಿ ರಾತ್ರಿಗಳಲ್ಲಿ ಉತ್ತರೋತ್ತರ ರಾತ್ರಿಗಳು ಹೆಚ್ಚು ಪ್ರಶಸ್ತವಾಗಿವೆ. ಹದಿನೇಳನೇ ರಾತ್ರಿಯಿಂದಾರಂಭಿಸಿ ಪುನಃ ರಜೋದರ್ಶನದ ನಾಲ್ಕನೆಯ ರಾತ್ರಿಯವರೆಗೆ ಸರ್ವಥಾ ಸಂಯಮವನ್ನಾಚರಿಸಬೇಕು. ಭೋಗದ ಸಂಖ್ಯೆಯು ಎಷ್ಟು ಕಡಿಮೆಯಾಗುವುದೋ ಅಷ್ಟೇ ವೀರ್ಯದ ಸ್ವಾಸ್ಥ್ಯ, ಪವಿತ್ರತೆ ಮತ್ತು ಶಕ್ತಿಯು ಹೆಚ್ಚುವುದು. ಅದರಲ್ಲಿಯೇ ಹೆಚ್ಚು ಸುಖವು ಪ್ರಾಪ್ತವಾಗುವುದಲ್ಲದೆ ಸಂತಾನವು ಸ್ವಸ್ಥ, ಪುಷ್ಟ, ಧರ್ಮಶೀಲ, ಮೇಧಾವಿ ಹಾಗೂ ಸಂವರ್ಧನ ಶೀಲವಾಗುವುದು.

ಇದೇ ಪ್ರಕಾರವಾಗಿ ಕಾಲಕ್ಕೂ ಮಹತ್ತ್ವ ಇದೆ. ಹಗಲಿನಲ್ಲಿ ಗರ್ಭಾದಾನವು ಸರ್ವಥಾ ನಿಷಿದ್ಧವಾದುದು. ಹಗಲಿನ ಗರ್ಭಾಧಾನದಿಂದ ಹುಟ್ಟುವ ಸಂತಾನವು ಅಧಮ ಮತ್ತು ದುರಾಚಾರಿಯಾಗುತ್ತದೆ. ಸಂಧ್ಯಾಕಾಲದ ರಾಕ್ಷಸೀ ವೇಳೆಯಲ್ಲಿ ಘೋರದರ್ಶನವೂ ಭಯಂಕರವೂ ಆದ ರಾಕ್ಷಸ ಹಾಗೂ ಭೂತ-ಪ್ರೇತ-ಪಿಶಾಚಾದಿಗಳು ಸಂಚರಿಸುತ್ತಿರುತ್ತವೆ. ಇದೇ ಸಮಯದಲ್ಲಿ ಭಗವಂತನಾದ ಭವಾನೀಪತಿಯೂ ಸಹ ಭೂತಗಳಿಂದ ಸುತ್ತುವರಿಯಲ್ಪಟ್ಟು ಸುತ್ತಾಡುತ್ತಿರುತ್ತಾನೆ. ದಿತಿಯು ಆಗ್ರಹ ಪೂರ್ವಕವಾಗಿ ಸಂಧ್ಯಾಕಾಲದಲ್ಲಿ ತನ್ನ ಸ್ವಾಮೀ

ಮಹಾತ್ಮಾ ಕಶ್ಯಪರ ಮೂಲಕ ಗರ್ಭಾಧಾನ ಮಾಡಿಸಿದ್ದರಿಂದ ಅವಳ ಗರ್ಭದಿಂದ ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪುರಂತಹ ಮಹಾನ್ ದಾನವರು ಹುಟ್ಟಿದ್ದರು. ರಾತ್ರಿಯ ಮೂರನೇ ಜಾವದಲ್ಲಿ ಹರಿಭಕ್ತನೂ, ಧರ್ಮಪರಾಯಣನೂ ಆಗುವ ಸಂತಾನವುಂಟಾಗುತ್ತದೆ. ಗರ್ಭಾಧಾನ ವೇಳೆಯಲ್ಲಿ ಶುದ್ಧ ಮತ್ತು ಸಾತ್ತ್ವಿಕ ವಿಚಾರಗಳು ಮನಸ್ಸನ್ನು ಆವರಿಸಿರಬೇಕು. ಗರ್ಭಾಧಾನದ ಸಮಯದಲ್ಲಿ ರಜೋವೀರ್ಯಗಳ ಮಿಶ್ರಣ ಕಾಲದಲ್ಲಿ ಮನಸ್ಸಿನಲ್ಲಿ ಯಾವ ಭಾವನೆಗಳಿರುವವೋ ಅದೇ ಭಾವನೆಗಳು ಪೂರ್ವಕರ್ಮದ ಫಲವನ್ನು ಸಮನ್ವಯಗೊಳಿಸುತ್ತ ಗರ್ಭಸ್ಥನಾದ ಬಾಲಕನಲ್ಲಿ ಪ್ರಕಟವಾಗುತ್ತವೆಂದು ಚರಕಸಂಹಿತೆಯ ಶರೀರ ಅಷ್ಟಮ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಎಂತಹ ಧರ್ಮಪರಾಯಣ, ಶೂರ, ವಿದ್ವಾನ್ ಮತ್ತು ತೇಜಸ್ವಿ ಸಂತಾನ ಬೇಕೋ ಅಂತಹ ಭಾವನೆಗಳನ್ನು ಮನಸ್ಸಿನಲ್ಲಿ ನೆಲೆಗೊಳಿಸಿಕೊಳ್ಳುವುದಲ್ಲದೆ ಋತುಸ್ನಾನದ ನಂತರ ಪ್ರತಿದಿನವೂ ಅಂತಹುದೇ ವಸ್ತುಗಳನ್ನು ನೋಡಿ ಚಿಂತಿಸುತ್ತಿರಬೇಕು. ಮಹರ್ಷಿ ಚರಕರ ಪ್ರಕಾರ ಪುಷ್ಟವಾದ, ಬಲಶಾಲಿಯಾದ ಮತ್ತು ಪರಾಕ್ರಮಿಯಾದ ಪುತ್ರನನ್ನು ಬಯಸುವ ಸ್ತ್ರೀಯು ಋತುಸ್ನಾನಾನಂತರ ಪ್ರತಿದಿನ ಬೆಳಗ್ಗೆ ಬಿಳಿಯ ಬಣ್ಣದ ಗೂಳಿಯನ್ನು ನೋಡಬೇಕು. ಇದರಂತೆ ಸ್ತ್ರೀಯು ಮೊಟ್ಟಮೊದಲು ಯಾರನ್ನು ನೋಡುತ್ತಾಳೆಯೋ ಅವರದೇ ಸಂಸ್ಕಾರ ಅವಳ ಚಿತ್ತವನ್ನು ಪ್ರವೇಶಿಸುತ್ತವೆ. ಮತ್ತೆ ಅಂತಹ ಸಂತಾನವೇ ಜನಿಸುತ್ತದೆ ಎನ್ನುವುದನ್ನು ನಮ್ಮ ಶಾಸ್ತ್ರಗಳು ಹೇಳುತ್ತವೆ. ಇದು ವೈಜ್ಞಾನಿಕವಾಗಿ ಪ್ರಮಾಣೀಕೃತವಾಗಿರುವ ವಿಷಯವಾಗಿದೆ.

ಓರ್ವ ಅಮೇರಿಕನ್ ಸ್ತ್ರೀಯ ಕೋಣೆಯಲ್ಲಿ ಒಬ್ಬ ಹಬ್ಶೀ ಜನಾಂಗದ ಪುರುಷನ ಚಿತ್ರವನ್ನು ನೇತುಹಾಕಲಾಗಿತ್ತು. ಅವಳು ಋತುಸ್ನಾನದ ನಂತರ ಮೊಟ್ಟಮೊದಲು ಅದನ್ನು ನೋಡಿದ್ದಳಲ್ಲದೆ, ಗರ್ಭಕಾಲದಲ್ಲಿಯೂ ಪ್ರತಿದಿನವೂ ಅದನ್ನು ನೋಡುತ್ತಿದ್ದಳು. ಇದರ ಪ್ರಭಾವವೆಷ್ಟಾಯಿತೆಂದರೆ- ಗರ್ಭಸ್ಥ ಬಾಲಕನ ಮುಖ-ಚಹರೆಯು ಹಬ್ಶೀಯ ಮುಖದಂತೆಯೇ ಆಯಿತು. ಒಬ್ಬ ಬ್ರಾಹ್ಮಣ ಸ್ತ್ರೀಯು ಋತುಸ್ನಾನಾನಂತರ ದುಷ್ಟಸ್ವಭಾವದ ಪಠಾಣನನ್ನು ನೋಡಿದ್ದರಿಂದ ಅವಳ ಮಗ ಬ್ರಾಹ್ಮಣ ಸಂಸ್ಕಾರಗಳಿಂದ ಜಾರಿ ಪಠಾಣರ ಸ್ವಭಾವವನ್ನು ಪಡೆದವನಾದನು. ಋತುಸ್ನಾನಮಾಡಿದ ಮೇಲೆ ಸ್ತ್ರೀಗೆ ಪತಿಯು ಸಿಗದಿದ್ದಲ್ಲಿ ಅವಳು ಕಾಮವಶಳಾಗಿ ಒಮ್ಮೊಮ್ಮೆ ಸ್ವಪ್ನದಲ್ಲಿ ಪುರುಷ ಸಮಾಗಮ ಮಾಡುತ್ತಾಳೆಂದೂ, ಆ ಸಮಯದಲ್ಲಿ ತನ್ನದೇ ವೀರ್ಯ ರಜದೊಡನೆ ಸೇರಿಕೊಂಡು ಜರಾಯುವಿನಲ್ಲಿ ಪ್ರವೇಶಿಸುವುದರಿಂದ ಅವಳು ಗರ್ಭವತಿಯಾಗುತ್ತಾಳೆಂದು

'ಸುಶ್ರುತ-ಶರೀರಸ್ಥಾನ' ದ ಎರಡನೇ ಅಧ್ಯಾಯದಲ್ಲಿ ಬರೆದಿದೆ. ಆದರೆ ಆ ಗರ್ಭದಲ್ಲಿ ಪತಿಯ ವೀರ್ಯದ ಅಭಾವದ ಕಾರಣ ಅಸ್ಥಿ ಮುಂತಾದುವು ಇರುವುದಿಲ್ಲ. ಅದು ಕೇವಲ ಮಾಂಸದ ಮುದ್ದೆ ಕುಂಬಳಕಾಯಿಯಂತಿರುತ್ತದೆ ಅಥವಾ ಚೇಳು, ಹಾವು, ತೋಳ ಮುಂತಾದ ಆಕಾರವುಳ್ಳ ವಿಕೃತಜೀವಿಗಳು ಇಂತಹ ಗರ್ಭದಿಂದ ಹುಟ್ಟುತ್ತವೆ. ಋತುಕಾಲದಲ್ಲಿ ನಾಯಿಗಳು, ತೋಳಗಳು, ಆಡುಗಳು ಮೊದಲಾದ ಪ್ರಾಣಿಗಳ ಮೈಥುನ ಕ್ರಿಯೆಯನ್ನು ನೋಡಿದರೂ ಅದೇ ಭಾವಕ್ಕೆ ಅನುಗುಣವಾದ ಸ್ವಪ್ನಗಳು ರಾತ್ರಿಯಲ್ಲಿ ಉಂಟಾಗಿ ಇಂತಹ ವಿಕೃತ ಜೀವಿಗಳು ಗರ್ಭದಲ್ಲಿ ನಿರ್ಮಾಣವಾಗುತ್ತವೆ.

ಇದಲ್ಲದೆ ಗರ್ಭವತಿಯಾದ ಸ್ತ್ರೀಯು ಗರ್ಭಕಾಲದಲ್ಲಿ ಬಹಳ ಎಚ್ಚರಿಕೆಯಿಂದ ಸದ್ವಿಚಾರ, ಸತ್ಸಂಗ, ಸತ್-ಆಲೋಚನೆ, ಸದ್ಗ್ರಂಥಗಳ ಅಧ್ಯಯನ ಮತ್ತು ಪ್ರಶಸ್ತ ಹಾಗೂ ಶುಭಪ್ರದವಾದ ದೃಶ್ಯಗಳನ್ನು ನೋಡಬೇಕು. ಗರ್ಭಕಾಲದಲ್ಲಿ ಪ್ರಹ್ಲಾದನ ತಾಯಿ ಕಯಾಧೂ ದೇವರ್ಷಿ ನಾರದರ ಆಶ್ರಮದಲ್ಲಿದ್ದು ದಿನವೂ ಹರಿಚರ್ಚೆಯನ್ನು ಕೇಳುತ್ತಿದ್ದಳು. ಆದ್ದರಿಂದ ಅವಳ ಮಗ ಪ್ರಹ್ಲಾದನು ಮಹಾನ್ ಹರಿಭಕ್ತನಾದನು. ಸುಭದ್ರೆಯ ಗರ್ಭದಲ್ಲಿಯೇ ಅಭಿಮನ್ಯುವು ತನ್ನ ತಂದೆ ಅರ್ಜುನನೊಂದಿಗೆ ತಾಯಿಯ ಸಂಭಾಷಣೆಯಿಂದಲೇ ಚಕ್ರವ್ಯೂಹವನ್ನು ಭೇದಿಸುವ ಕಲೆಯನ್ನು ಕಲಿತಿದ್ದನು.

❑❑

## ೮. ಸರ್ವಶ್ರೇಷ್ಠ ಸಂತಾನ-ಪ್ರಾಪ್ತಿಯ ನಿಯಮಗಳು

ಪ್ರಾಣಿಗಳನ್ನು ಹಿಂಸಿಸದಿರುವುದು, ಯಾರನ್ನೂ ಶಪಿಸದಿರುವುದು, ಸುಳ್ಳುಹೇಳದಿರುವುದು, ಉಗುರು ಮತ್ತು ರೋಮಗಳನ್ನು ಕತ್ತರಿಸದಿರುವುದು, ಅಪವಿತ್ರವಾದ ಮತ್ತು ಅಶುಭವಾದ ವಸ್ತುವನ್ನು ಸ್ಪರ್ಶಿಸದಿರುವುದು, ನೀರಿನಲ್ಲಿ ಮುಳುಗುಹಾಕಿ ಸ್ನಾನ ಮಾಡದಿರುವುದು, ಕೋಪಿಸದಿರುವುದು, ದುಷ್ಟರೊಡನೆ ಸಂಭಾಷಿಸದಿರುವುದು, ಒಗೆಯದ ಬಟ್ಟೆ ಮತ್ತು ನಿರ್ಮಾಲ್ಯ-ಮಾಲೆಯನ್ನು ಧರಿಸದಿರುವುದು, ಎಂಜಲಾದ, ಇರುವೆ ತಿಂದ ಮಾಂಸಯುಕ್ತವಾದ, ಅಪವಿತ್ರ ಸ್ತ್ರೀಯಿಂದ ತರಲಾದ ಮತ್ತು ಋತುಮತಿಯ ದೃಷ್ಟಿಗೆ ಬಿದ್ದ ಭೋಜನವನ್ನು ಮಾಡದಿರುವುದು, ಭೋಜನಮಾಡಿ ಕೈತೊಳೆಯದೆ, ಕೇಶಬಂಧನ ಮಾಡದೆ, ವಾಣಿಯಲ್ಲಿ ಸಂಯಮವನ್ನು ತಾರದೆ, ವಸ್ತ್ರಗಳಿಂದ ಅಂಗಾಂಗಗಳನ್ನು ಮುಚ್ಚಿಕೊಳ್ಳದೆ

ಮತ್ತು ಸಂಧ್ಯಾಕಾಲದಲ್ಲಿ ಮನೆಯಿಂದ ಹೊರಗೆ ತಿರುಗಾಡಬಾರದು. ಕಾಲುಗಳನ್ನು ತೊಳೆಯದೆ, ಒದ್ದೆ ಕಾಲುಗಳನ್ನಿಡುತ್ತ ಮತ್ತು ಉತ್ತರ ಅಥವಾ ಪಶ್ಚಿಮದಿಕ್ಕಿಗೆ ತಲೆಮಾಡಿ ಮಲಗಬಾರದು.

ನಗ್ನಳಾಗಿ, ಬೇರೆಯಾರೊಡನೆ ಹಾಗೂ ಸಂಧ್ಯಾಕಾಲದಲ್ಲಿಯೂ ಮಲಗಬಾರದು. ಪ್ರಾತಃಕಾಲ ಭೋಜನ ಮಾಡುವುದಕ್ಕೆ ಮುಂಚಿತವಾಗಿ ಒಗೆದ ಬಟ್ಟೆಧರಿಸಿ, ಪವಿತ್ರಳಾಗಿ, ಸಮಸ್ತ ಮಂಗಳದ್ರವ್ಯಗಳನ್ನು ಧರಿಸಿ, ಪ್ರತಿದಿನ ಹಸು, ಬ್ರಾಹ್ಮಣ, ಭಗವಂತನಾದ ನಾರಾಯಣ ಮತ್ತು ಭಗವತೀ ಲಕ್ಷ್ಮೀದೇವಿಯ ಪೂಜೆಯನ್ನು ಅವಶ್ಯವಾಗಿ ಮಾಡಬೇಕು. ಮಾಲೆ, ಚಂದನ, ಭೋಜನಸಾಮಗ್ರಿ ಮೊದಲಾದವುಗಳಿಂದ ಪತಿಯನ್ನು ಪೂಜಿಸಿ, ಪೂಜೆಯ ನಂತರ ಪತಿಯನ್ನು ತನ್ನ ಹೃದಯದಲ್ಲಿ ಧ್ಯಾನಿಸಬೇಕು.

ಗರ್ಭಕಾಲದಲ್ಲಿ ಈ ರೀತಿ ಆಚರಣೆ ಮಾಡುವುದರಿಂದ ನಿಶ್ಚಯವಾಗಿಯೂ ತೇಜಸ್ವಿಯೂ, ಮೇಧಾವಿಯೂ, ಶೂರನೂ ಹಾಗೂ ಧಾರ್ಮಿಕ ಪ್ರವೃತ್ತಿಯುಳ್ಳವನೂ ಆದ ಪುತ್ರನು ಜನಿಸುವನು.

❑❑

## ೯. ಗರ್ಭಿಣಿಯರಿಗೆ ಆಹಾರ-ವಿಹಾರ

ಹುಟ್ಟಲಿರುವ ಸಂತಾನದ ಆರೋಗ್ಯ ಮತ್ತು ಸ್ವಭಾವವು ತಾಯಿಯ ಶಾರೀರಿಕ-ಮಾನಸಿಕ ಸ್ಥಿತಿ-ವಿಶೇಷವಾಗಿ ಅವಳ ಗರ್ಭಾವಸ್ಥೆಯ ಸಮಯದಲ್ಲಿನ ಆಹಾರ-ವಿಹಾರ-ಚಿಂತನೆಯನ್ನು ಅವಲಂಬಿಸುತ್ತದೆ. ಗರ್ಭಧಾರಣೆಯಾದ ನಂತರ ಸ್ತ್ರೀಯು ಬಹಳ ಜಾಗರೂಕತೆಯಿಂದ ಆವಶ್ಯಕವಾದ ಕೆಲವು ನಿಯಮಗಳನ್ನು ಪಾಲಿಸಬೇಕು. ಈ ದಿನಗಳಲ್ಲಿ ಸ್ತ್ರೀಯರು ಈ ಸಂಬಂಧದಲ್ಲಿ ಬಹಳ ಅಜಾಗರೂಕರಾಗಿರುತ್ತಾರೆ. ಈ ಕಾರಣದಿಂದಾಗಿಯೇ ಗರ್ಭಪಾತದ ಸಂಖ್ಯೆಯು ಹೆಚ್ಚುತ್ತಿದೆಯಲ್ಲದೆ ಸ್ತ್ರೀಯರಿಗೆ ಬರಬಹುದಾದ ರೋಗಗಳೂ ಹೆಚ್ಚುತ್ತಿವೆ. ತಾಯಿ ತಿನ್ನುವ ಆಹಾರವು ಪರಿಪಾಕವಾದ ಮೇಲೆ ಅದರ ಸಾರದಿಂದ ಉಂಟಾಗುವ ರಸದ ಒಂದು ಅಂಶವು ಮೊಲೆಹಾಲಿನ ರೂಪದಲ್ಲಿ ಪರಿಣತವಾಗುತ್ತದೆ. ಮತ್ತು ಇನ್ನೊಂದಂಶವು ರಕ್ತದ ರೂಪದಲ್ಲಿ ಪರಿವರ್ತಿತವಾಗಿ ಗರ್ಭವನ್ನು ಪೋಷಿಸುತ್ತದೆ. ಮಾತೆಯ ಈ ಆಹಾರ-ರಸದ ನೆರವಿನಿಂದಲೇ ಗರ್ಭದಲ್ಲಿರುವ ಶಿಶುವು ವೃದ್ಧಿಸುತ್ತದೆ ಹಾಗೂ ಪುಷ್ಟವಾಗಿ ಬೆಳೆಯುತ್ತದೆ. ಆದಕಾರಣ ಮಾತೆಯಾಗುವವಳು ಸುಪಥ್ಯವನ್ನು ಸೇವಿಸುತ್ತ

ಗರ್ಭಿಣಿಯರುಗಳಿಗೆ ವಿಧಿಸಲಾಗಿರುವ ನಿಯಮಗಳನ್ನು ಪಾಲಿಸಿದರೆ ಸಂತಾನವು ಸಹಜವಾಗಿ ಹೃಷ್ಟ-ಪುಷ್ಟವಾಗಿ ಬೆಳೆಯುತ್ತದೆಯಲ್ಲದೆ ಅದರ ಪ್ರಸವವೂ ಸುಖಪೂರ್ವಕವಾಗುತ್ತದೆ. ಹಾಗೆ ಮಾಡದಿದ್ದಲ್ಲಿ ಮಾತೆಗೆ ಕಷ್ಟವಾಗುವುದೇ ಅಲ್ಲದೆ ಸಂತಾನವು ಜೀವಿಸಿರುವವರೆಗೂ ರೋಗದಿಂದ ಕೂಡಿರುತ್ತದೆ.

## ಆಹಾರ

ಗರ್ಭಿಣಿಯಾದ ಸ್ತ್ರೀಗೆ ರುಚಿಕರವಾದ, ಶುದ್ಧವಾದ, ಹಗುರವಾದ, ಹೆಚ್ಚು ಭಾಗವು ಮಧುರ ಮತ್ತು ಜಠರಾಗ್ನಿಯನ್ನು ಬಲಪಡಿಸುವ (ಶುಂಠಿ, ಹಿಪ್ಪಲಿ, ಮೆಣಸು, ಓಮ) ದ್ರವ್ಯಗಳ ಸಂಯೋಗದಿಂದ ಮಾಡಿದ್ದಾಗಿರುವ ಆಹಾರವನ್ನು ಉಣಬಡಿಸಬೇಕು. ಅಗಿಯಲು ಕಷ್ಟಕರವಾದ ಪದಾರ್ಥಗಳನ್ನು ಅವಳು ಸೇವಿಸಬಾರದು. ಚರಕ-ಸುಶ್ರುತದಲ್ಲಿ ಗರ್ಭಿಣಿಯರಿಗೆ ಸಿಹಿಪದಾರ್ಥಗಳನ್ನು ತಿನ್ನಲು ಅನುಮತಿಯನ್ನು ಕೊಡಲಾಗಿದೆ. ಸಿಹಿಪದಾರ್ಥಗಳೆಂದಾಗ ಹಾಲು, ತುಪ್ಪ, ಬೆಣ್ಣೆ, ಅಕ್ಕಿ, ಜೋಳ, ಗೋಧಿ, ಹೆಸರು ಮೊದಲಾದ ಧಾನ್ಯ; ಮುಳ್ಳುಸೌತೆ, ತೆಂಗು ಪರಂಗಿ ಹಣ್ಣು, ಮಾಗಿದ ಟೊಮೆಟೋ ಮೊದಲಾದ ಹಣ್ಣುಗಳೆಂದೂ; ದ್ರಾಕ್ಷಿ, ಖರ್ಜೂರ ಮೊದಲಾದ ತಿಂಡಿ, ತಿನಿಸು ಮತ್ತು ಸೋರೆಕಾಯಿ, ಕುಂಬಳಕಾಯಿ ಮುಂತಾದ ತರಕಾರಿಯೆಂದೂ ತಿಳಿಯಬೇಕು. ಇವುಗಳನ್ನು ಜೀರ್ಣವಾಗುವಷ್ಟು ಮಾತ್ರ ಸೇವಿಸಬೇಕು.

ಗರ್ಭಿಣಿಯರಿಗೆ ಹಾಲು ಸರ್ವೋತ್ತಮ ಆಹಾರವಾಗಿದೆ. ಮೊದಲನೆಯ ಹಾಗೂ ಎರಡನೆಯ ಮಾಸಗಳಲ್ಲಿ ಅನ್ನವನ್ನೂ ಮತ್ತು ಇತರೆ ಸಮಯಗಳಲ್ಲಿ ಮಿತವಾಗಿ ಚೆನ್ನಾಗಿ ಕುದಿಸಿರುವ ಹಾಲನ್ನು ಸೇವಿಸಬೇಕು. ಪ್ರತಿದಿನ ಮೂರು-ನಾಲ್ಕು ಸಲ ಸೇರಿ ಏನಿಲ್ಲವೆಂದರೂ ಒಂದು ಸೇರು ಹಾಲು ಕುಡಿಯುವುದು ಒಳ್ಳೆಯದು. ಮೂರನೆಯ ಮಾಸದಲ್ಲಿ ಜೇನುತುಪ್ಪ ಮತ್ತು ತುಪ್ಪಗಳನ್ನು ಬೆರೆಸಿ ಮತ್ತು ನಾಲ್ಕನೆಯ ಮಾಸದಲ್ಲಿ ಹಾಲು ಮತ್ತು ಬೆಣ್ಣೆಯೊಡನೆ ಅನ್ನವನ್ನು ಊಟಮಾಡಬೇಕು. ಐದನೆಯ ಮಾಸದಲ್ಲಿಯೂ ಹಾಲು-ತುಪ್ಪದಿಂದ ಕೂಡಿದ ಭೋಜನವನ್ನು ಮಾಡಬೇಕು. ಆರನೇ ಮತ್ತು ಏಳನೇ ಮಾಸಗಳಲ್ಲಿ ನೆಗ್ಗಲು ಮುಳ್ಳನ್ನು ತುಪ್ಪದಲ್ಲಿ ಬೇಯಿಸಿ ಅಗತ್ಯವಾದಷ್ಟನ್ನು ಕುಡಿಯಬೇಕು. ಏಳನೆಯ ತಿಂಗಳಿನಲ್ಲಿ ಹೊಟ್ಟೆಯ ಚರ್ಮವು ಬಿರಿಯುವುದೆಂದೂ, ಶರೀರದಲ್ಲಿ ನವೆಯುಂಟಾಗುವುದೆಂದೂ ಚರಕದಲ್ಲಿ ಹೇಳಿದೆ. ಈ ಸಮಯದಲ್ಲಿ ಬೋರೆಯಕಾಯಿ, ಶತಾವರೀಬೇರು, ವಿದಾರೀಗೆಡ್ಡೆ ಮೊದಲಾದುವನ್ನು ಬೆಣ್ಣೆಯಲ್ಲಿ ಕುದಿಸಿ-ಎರಡು ತೊಲಾದಷ್ಟನ್ನು ಗರ್ಭಿಣಿಯರಿಗೆ ಕುಡಿಸಬೇಕು, ಹೊಟ್ಟೆ ಮತ್ತು ಎದೆಯಮೇಲೆ ಚಂದನವನ್ನು ಲೇಪಿಸಬೇಕು. ಅದಿಲ್ಲವಾದರೆ ಕವರೀವೃಕ್ಷದ ಎಲೆಗಳನ್ನು

ಎಳ್ಳೆಣ್ಣೆಯಲ್ಲಿ ಬೇಯಿಸಿ ಎಣ್ಣೆಯನ್ನು ಶರೀರದ ಮೇಲೆ ಹಚ್ಚಬೇಕು. ಶರೀರವು ಹೆಚ್ಚು ಬಿರಿದು ನವೆಯು ಅಧಿಕವಾದಲ್ಲಿ ಮಾಲತಿ ಪುಷ್ಪ ಮತ್ತು ಅತಿಮಧುರವನ್ನು ನೀರಿನಲ್ಲಿ ಕುದಿಸಿ ಆ ನೀರಿನಿಂದ ಶರೀರವನ್ನು ತೊಳೆಯಬೇಕು. ಎಂಟನೆಯ ಮಾಸದಲ್ಲಿ ಹಾಲಿನಲ್ಲಿ ಬೇಯಿಸಿ ಬಾರ್ಲಿ ಮತ್ತು ಸಬ್ಬಕ್ಕಿ ಸ್ವಲ್ಪ ತುಪ್ಪಬೆರೆಸಿ ಕೊಡಬೇಕು. ಗರ್ಭಿಣಿಯರಿಗೆ ಮಲಶುದ್ಧಿಯಾಗಿ, ವಾಯುವು ಸರಳವಾಗಿರಲೆಂದು ಹಾಲಿನಲ್ಲಿ ಶತಾವರೀ ಬೆರೆಸಿಕೊಡಬೇಕು ಮತ್ತು ಅಗತ್ಯವಾದಲ್ಲಿ ಶತಾವರೀ, ವಿದಾರೀಗೆಡ್ಡೆ, ನೆಗ್ಗಲುಮುಳ್ಳು ಮೊದಲಾದುವನ್ನು ಎಳ್ಳೆಣ್ಣೆಯಲ್ಲಿ ಬೇಯಿಸಿ ಆ ತೈಲದಿಂದ ಪಿಚಕಾರಿ ಕೊಡಿಸಬಹುದು. ಗರ್ಭಿಣಿಯು ಉಪವಾಸ ಮಾಡಬಾರದು. ಚರಕ-ಸುಶ್ರುತದಲ್ಲಿ ಹೇಳಿರುವುದನ್ನು ಗಮನಿಸಿದರೆ ಗರ್ಭಿಣಿಗೆ ಹಾಲು ಮತ್ತು ಹಗುರವಾದ ಭೋಜನವು ಉತ್ತಮವಾದುದೆಂದು ತಿಳಿದು ಬರುತ್ತದೆ.

ಗರ್ಭಿಣಿಯ ಹೊಟ್ಟೆ ಚೊಕ್ಕಟವಾಗಿ ಮೂತ್ರವಿಸರ್ಜನೆಯು ಸರಳವಾಗಿ, ಅಡೆ-ತಡೆಗಳಿಲ್ಲದಂತೆ ಆಗುವುದರ ಕಡೆಗೆ ವಿಶೇಷ ಗಮನ ಕೊಡುವುದು ಅತ್ಯಗತ್ಯ. ಮಾಗಿದ ಪರಂಗಿ ಹಣ್ಣು, ಟೊಮೇಟೋ, ಮುಳ್ಳುಸೌತೆ, ಮೋಸಂಬೀ ಹಣ್ಣು, ಸೇಬು ಮತ್ತು ಹಸಿರು ತರಕಾರಿಗಳನ್ನು ಉಪಯೋಗಿಸುವುದರಿಂದ ಮಲಬದ್ಧತೆ ಆಗದೆ ರಕ್ತವೂ ಶುದ್ಧಿಯಾಗುತ್ತದೆ. ಹಗಲು-ರಾತ್ರಿಯಲ್ಲಿ ಕಡೆಯಪಕ್ಷ ನಾಲ್ಕೈದು ಬಾರಿ ಮೂತ್ರವಿಸರ್ಜನೆಯಾಗಬೇಕು ಇಲ್ಲದಿದ್ದರೆ, ಮೂತ್ರವಿಸರ್ಜನೆ ಕಮ್ಮಿಯಾಗು ತ್ತಿರುವುದಾಗಿ ತಿಳಿದು ನೀರು ಮತ್ತು ಹಾಲನ್ನು ಹೆಚ್ಚಾಗಿ ಕುಡಿಯಲು ಕೊಡಬೇಕು. ಹಸಿಹಾಲಿನ ಜೊತೆಗೆ ಅಷ್ಟೇ ಪ್ರಮಾಣದಲ್ಲಿ ನೀರನ್ನು ಬೆರೆಸಿ ಬೆಳಗ್ಗೆ-ಸಾಯಂಕಾಲ ಒಂದೊಂದು ಬಟ್ಟಲು ಕುಡಿಯುವುದರಿಂದ ಮೂತ್ರವು ಸ್ವಚ್ಛ ಹಾಗೂ ವಿಸರ್ಜನೆಯು ಸರಾಗವಾಗಿ ಆಗುತ್ತದೆ.

ಗರ್ಭಿಣಿಯಾದವಳು ಒರಟಾದ ಭೋಜನವನ್ನು, ಹೆಚ್ಚು ಮಸಾಲೆ, ಕೆಂಪು ಮೆಣಸಿನಕಾಯಿ ಮತ್ತು ಹೆಚ್ಚು ಬಿಸಿಯಾದ ಪದಾರ್ಥಗಳನ್ನು ತಿನ್ನಬಾರದು. ಹಳಸಲಾದ, ಕೊಳೆತಿರುವ ಮತ್ತು ಒಣಗಿನ ಪದಾರ್ಥಗಳನ್ನಂತೂ ಸರ್ವಥಾ ತಿನ್ನಬಾರದು. ಊಟ ಮಾಡುವಾಗ ಆಹಾರವನ್ನು ಚೆನ್ನಾಗಿ ಅಗಿದಗಿದು ತಿನ್ನಬೇಕಲ್ಲದೆ, ಸಂಧ್ಯಾಕಾಲದ ಭೋಜನವನ್ನು ಏಳು ಗಂಟೆಗೆ ಮುಂಚಿತವಾಗಿ ಮಾಡಬೇಕು. ಈ ದಿನಗಳಲ್ಲಿ ಚಹಾಸೇವನೆ ಸಾಮಾನ್ಯವಾಗಿ ಹೋಗಿದೆ. ಸ್ತ್ರೀಯರು ಇದನ್ನು ವಿಶೇಷವಾಗಿ ಉಪಯೋಗಿಸುತ್ತಾರೆ. ಆದರೆ ಗರ್ಭಾವಸ್ಥೆಯಲ್ಲಿ ಚಹಾಸೇವನೆ ಬಹಳ ಹಾನಿಕರ. ಅದನ್ನು ಸೇವಿಸಲೇಬೇಕೆಂಬ ಸ್ಥಿತಿಯಿದ್ದಲ್ಲಿ ಸ್ವಲ್ಪ ಚಹಕ್ಕೆ ಹೆಚ್ಚುಹಾಲನ್ನು ಸೇರಿಸಿ

ಕುಡಿಯಲಿ. ಎಲೆ-ಅಡಿಕೆಯನ್ನೂ ಸಹ ಸೇವಿಸದಿರುವುದು ಉತ್ತಮ. ಎಲೆಯ ಜೊತೆಯಲ್ಲಿ ಹೊಗೆಸೊಪ್ಪು ಅಥವಾ ಜರ್ದಾ ಅಗಿಯಲೇಬಾರದು. ಇದ್ದಲು, ಹೆಂಚಿನಚೂರು, ಮಣ್ಣುಹೆಂಟೆಗಳನ್ನು ತಿನ್ನಲೇಬಾರದು. ಈ ಪದಾರ್ಥಗಳನ್ನು ತಿನ್ನುವುದರಿಂದ ಪ್ರಸವವಾಗುವಾಗ ನೋವಾಗುತ್ತದೆ, ಇರುಳುಗಣ್ಣು ಉಂಟಾಗುತ್ತದೆ. ಮತ್ತು ಗರ್ಭಕ್ಕೆ ನಷ್ಟವುಂಟಾಗುತ್ತದೆ. ಸಾಮಾನ್ಯವಾಗಿ ಮಕ್ಕಳು ದುರ್ಬಲರೂ, ನೇತ್ರರೋಗಿಗಳೂ ಮತ್ತು ಕುರುಡರೂ ಆಗುವ ಸಂಭವವಿದೆ. ಗರ್ಭಧಾರಣೆ ಯಾದಾಗಿನಿಂದ ಮೊದಲನೆಯ ಮತ್ತು ಎರಡನೆಯ ಮಾಸಗಳಲ್ಲಿ ೫ ರಿಂದ ೧೦ ಗ್ರಾಂಗಳಷ್ಟು ಸೋಡಾ-ಬೈಕಾರ್ಬ್-ಅನ್ನು ದಿನಕ್ಕೆ ಎರಡು ಬಾರಿಯಂತೆ ಕೊಡುವುದರಿಂದ ಗರ್ಭಸ್ಥ ಸಂತಾನವು ಪುತ್ರನಾಗುತ್ತದೆಯೆಂದು ಅನುಭವಿಗಳು ಅಭಿಪ್ರಾಯಪಡುತ್ತಾರೆ. ಜರ್ಮನಿಯಲ್ಲಿ ಇದರ ಪ್ರಯೋಗವನ್ನು ಮಾಡಲಾಗಿತ್ತು.

## ವಿಹಾರ

ಗರ್ಭಿಣಿಯಾದವಳು ಮೊದಲ ದಿನದಿಂದಲೇ ಸದಾ ಹರ್ಷಚಿತ್ತಳಾಗಿ, ಪವಿತ್ರವಾದ ಅಲಂಕಾರಗಳು ಮತ್ತು ಸ್ವಚ್ಛ-ಶುಭ್ರವಾದ ವಸ್ತ್ರಗಳಿಂದ ಭೂಷಿತಳಾಗಿ ಶಾಂತಿ ಮತ್ತು ಮಂಗಳಕಾರ್ಯಗಳಲ್ಲಿ ನಿರತಳಾಗಿ, ದೇವತೆಗಳು ಹಾಗೂ ಹಿರಿಯರಲ್ಲಿ ಭಕ್ತಿಯಿಂದಿರಬೇಕು ಎಂಬುದಾಗಿ ಸುಶ್ರುತದಲ್ಲಿ ಹೇಳಲಾಗಿದೆ. ಈ ಸಮಯದಲ್ಲಿ ಬಹಳ ಎಚ್ಚರಿಕೆಯಿಂದ ನಡೆಯಬೇಕು. ಇಲ್ಲವಾದರೆ ಅಕಸ್ಮಾತ್ ಕಾಲುಜಾರಿ ಬೀಳುವುದರಿಂದ ಗರ್ಭಪಾತವಾಗಬಹುದು. ಸದಾ ಶುದ್ಧಾಚಾರದಿಂದಿರಬೇಕು. ಗರ್ಭಿಣಿಯರು ಭಕ್ತರ, ಮಹಾಪುರುಷರ, ಸಂತರ ಮತ್ತು ಶೂರ-ವೀರರ ಜೀವನಚರಿತ್ರೆ ಹಾಗೂ ಹರಿಕಥೆ ಮುಂತಾದುವನ್ನು ಕೇಳಬೇಕು. ಇದರಿಂದ ಬಹಳ ಲಾಭವಾಗುತ್ತದೆ. ಗರ್ಭಿಣಿಯು ಒರಟಾದ ಬಟ್ಟೆಗಳನ್ನು ತೊಡಬಾರದು. ಸೀರೆ ಮತ್ತು ಅಂಗವಸ್ತ್ರಾದಿಗಳು ಬಿಗಿಯಾಗದೆ ಸಡಿಲವಾಗಿರಬೇಕು. ಬಟ್ಟೆ ಹಾಸಿಗೆ ಮತ್ತು ಕುಳಿತುಕೊಳ್ಳುವ ಆಸನಗಳು ಚೊಕ್ಕಟವಾಗಿಯೂ ಮೃದುವಾಗಿಯೂ ಇರಬೇಕು. ಹಾಸಿಗೆಯು ಬಹಳ ಎತ್ತರದಲ್ಲಿರಬಾರದು. ಹಾಸಿಗೆಯ ಮೇಲೆ ಮೆತ್ತನೆಯ ದಿಂಬಿರಬೇಕು. ಶರೀರವು ತಡೆಯುವಷ್ಟು ಎಂದರೆ ಹಿತವಾಗುವಂತಹ ಬಿಸಿ ನೀರಿನಲ್ಲಿ ಸ್ನಾನಮಾಡಬೇಕು. ರೋಮಾವಳಿಯ ರಂಧ್ರಗಳು ತೆರೆದಿರಲೆಂದು ಶರೀರವನ್ನು ಯಾವಾಗಲೂ ಸ್ವಚ್ಛವಾಗಿಡಬೇಕು. ಈ ದಿನಗಳಲ್ಲಿ ಎತ್ತರ ಹಿಮ್ಮಡಿಯುಳ್ಳ ಚಪ್ಪಲಿ ಉಪಯೋಗವು ಶಿಕ್ಷಿತರಾದ ಮಹಿಳೆಯರಲ್ಲಿ ವಿಶೇಷವಾಗುತ್ತಿದೆ. ಇದು ಬಹು ಹಾನಿಕರ. ಇದರಿಂದಾಗಿ

ಸ್ನಾಯುಗಳ ಮೇಲೆ ಒತ್ತಡವುಂಟಾಗುತ್ತದೆ, ಕಾಲು ಸೆಳೆತ ಪ್ರಾರಂಭವಾಗುತ್ತದೆ. ಮತ್ತು ನಡೆಯುವಾಗ ಕಾಲು ಸೊಟ್ಟಗೂ ಆಗುವುದುಂಟು. ಇಂತಹುದನ್ನು ಧರಿಸಬಾರದು. ಗರ್ಭಾವಸ್ಥೆಯಲ್ಲಂತೂ ಧರಿಸಲೇಬಾರದು. ಮೆತ್ತಗಿರುವ, ಸಪಾಟವಾಗಿರುವ ಉಬ್ಬು ಹಿಮ್ಮಡಿಯಿಲ್ಲದಿರುವ ದೇಶೀಯ ಚಪ್ಪಲಿಯನ್ನು ಉಪಯೋಗಿಸಬೇಕು.

ಗರ್ಭಿಣಿಯು ಭೋಜನಾನಂತರ ಸ್ವಲ್ಪ ವೇಳೆ ವಿಶ್ರಾಂತಿ ತೆಗೆದುಕೊಳ್ಳಬೇಕು, ಆದರೆ ಹಗಲಿನಲ್ಲಿ ಮಲಗಬಾರದು. ಅಂದರೆ ಹಗಲೆಲ್ಲ ಪೂರ್ತಿ ಒಂದೇ ಸಮನೆ ಕುಳಿತಿರಬೇಕೆಂದಲ್ಲ, ಸ್ವಲ್ಪ ಪರಿಶ್ರಮವನ್ನೊಳಗೊಂಡ ಮನೆಗೆಲಸಗಳನ್ನು ಮಾಡುತ್ತಿರಬೇಕು. ಪ್ರತಿದಿನ ಹಗುರವಾದ ಬೀಸುವಕಲ್ಲಿನಲ್ಲಿ ಸ್ವಲ್ಪ ಹಿಟ್ಟು ಬೀಸುವುದು ಆರೋಗ್ಯಕ್ಕೆ ಒಳ್ಳೆಯದು. ಮನೆಯ ಅಂಗಳದಲ್ಲಾಗಲೀ, ಛಾವಣಿಯ ಮೇಲಾಗಲೀ ಸ್ವಲ್ಪ ಹೊತ್ತು ಶುದ್ಧವಾದ ವಾಯುವಿನಲ್ಲಿ ತಿರುಗಾಡುವುದು ಹಿತಕರವಾದುದು. ಕೆಲಸದಾಳುಗಳು ಇದ್ದಲ್ಲಿ ಸಹ ಪ್ರತಿದಿನ ಸ್ವಲ್ಪ ಶಾರೀರಿಕ ಪರಿಶ್ರಮ ಅವಶ್ಯವಾಗಿ ಮಾಡಬೇಕು.

## ಮಾಡಬಾರದ ಎಂಟು ಕಾರ್ಯಗಳು

೧. ಮೈಥುನವನ್ನು ಮಾಡಲೇಬಾರದು.

೨. ಮಲ-ಮೂತ್ರಗಳ ವೇಗವನ್ನು ತಡೆದುಕೊಳ್ಳಬಾರದು.

೩. ತೀವ್ರವೇಗದಿಂದ ಚಲಿಸುವ ವಾಹನಗಳನ್ನು ಹತ್ತಬಾರದು.

೪. ನೆಗೆಯುವುದು - ಹಾರುವುದು ಅಥವಾ ಓಡುವುದು ಕುಣಿಯುವುದು ಮಾಡಬಾರದು. ಶರೀರವನ್ನು ನುಲಿಯದಿರುವುದು ಮತ್ತು ಸೊಟ್ಟಸೊಟ್ಟಗೆ ಹೊರಳದಿರುವುದು.

೫. ಭಾರವನ್ನು ಎತ್ತಬಾರದು.

೬. ಆಯಾಸವಾಗುವಷ್ಟು ಕೆಲಸಮಾಡಬಾರದು.

೭. ಹಗಲು ಮಲಗಬಾರದು, ರಾತ್ರಿ ಎಚ್ಚರವಾಗಿರಬಾರದು.

೮. ಮನಸ್ಸು ಖಿನ್ನವಾಗಬಹುದಾದ ಯಾವ ಕಾರ್ಯವನ್ನೂ ಮಾಡಬಾರದು.

ಗರ್ಭದ ಕಡೆಯ ಎರಡು ಮಾಸಗಳಲ್ಲಿ ಗರ್ಭಿಣಿಗೆ ವಿಶೇಷವಾಗಿ ವಿಶ್ರಾಂತಿಯ ಆವಶ್ಯಕತೆಯಿರುತ್ತದೆ; ಏಕೆಂದರೆ ಮಗುವಿನ ತೂಕವು ಮೂರುವರೆಯಿಂದ ಏಳುವರೆ ಪೌಂಡ್‌ಗಳಷ್ಟು ಇರುತ್ತದೆ.

ಇವುಗಳಾದರೋ ಪ್ರಧಾನವಾಗಿವೆ. ಇದಲ್ಲದೆ ಕೆಳಗೆ ನಮೂದಿಸಲಾಗಿರುವ ಕಾರ್ಯಗಳನ್ನು ಸಹ ಮಾಡಬಾರದು. ಸದಾ ಮಗುಚಿಕೊಂಡು ಮಲಗಿರುವುದು, ಬಹಳ ಜೋರಾಗಿ ಮಾತನಾಡುವುದು ಅಥವಾ ನಗುವುದು, ಕುಕ್ಕರಗಾಲಿನ ಮೇಲೆ ಕೂತುಕೊಳ್ಳುವುದು, ಬಹಳ ಮೆಟ್ಟಿಲುಗಳನ್ನು ಹತ್ತುವುದು, ಒಂಟಿಯಾಗಿ ಎಲ್ಲಿಗಾದರೂ ಹೋಗುವುದು ಅಥವಾ ಮಲಗುವುದು, ಕೋಪ-ಶೋಕ-ಭಯ ಪಡುವುದು, ದುರ್ಗಂಧ, ಅಸಹ್ಯಕರ ದೃಶ್ಯ ಅಥವಾ ಪದಾರ್ಥಗಳನ್ನು ಮೂಸುವುದು, ನೋಡುವುದು, ಜನಶೂನ್ಯವಾದ ಮನೆಯಲ್ಲಿರುವುದು, ಹೆಚ್ಚು ಎಣ್ಣೆಯನ್ನು ಉಜ್ಜುವುದು ಅಥವಾ ಅರಿಶಿನ-ತೈಲ ಮುಂತಾದವುಗಳಿಂದ ಶರೀರವನ್ನು ಮಾಲೀಸು ಮಾಡುವುದು. ಕೆಂಪು ಬಣ್ಣದ ಸೀರೆಯನ್ನುಡುವುದು ಮತ್ತು ಬೇರೆ ಸ್ತ್ರೀಗೆ ಪ್ರಸವವಾಗುವಾಗ ಅವಳ ಬಳಿ ಇರುವುದು-ಇವುಗಳನ್ನು ಮಾಡಿದಲ್ಲಿ ಗರ್ಭಕ್ಕೆ ಹಾನಿಯಾಗುವ ಸಂಭವವಿದೆ. ಗರ್ಭಧಾರಣೆಯಾದನಂತರ ಏಳನೆಯ ತಿಂಗಳಿನಿಂದ ಹಿಡಿದು ಬಾಲಕನ ಪ್ರಸವವಾಗುವ ಸಮಯದವರೆಗೆ ಸ್ತನಗಳನ್ನು ಚೆನ್ನಾಗಿ ನೋಡಿಕೊಳ್ಳಬೇಕು. ಸ್ತನಗಳನ್ನು ಚೆನ್ನಾಗಿ ತೊಳೆಯಬೇಕಲ್ಲದೆ ತೊಟ್ಟುಗಳ ಸುತ್ತ ತುಪ್ಪವನ್ನು ಸವರಬೇಕು. ಇದಲ್ಲದೆ ದಿನದಲ್ಲಿ ನಾಲ್ಕಾರುಬಾರಿ ಮೃದುವಾಗಿ, ಲಘುವಾಗಿ ಕೈಯಿಂದ ಎಳೆಯಬೇಕು. ಹೀಗೆ ಮಾಡುವುದರಿಂದ ಸ್ತನದ ತೊಟ್ಟುಗಳು ಮಗುವಿನ ಬಾಯಿಗೆ ಹದವಾಗಿ ಸಿಗಲು ಅನುಕೂಲವಾಗುತ್ತದೆ.

□□

## ೧೦. ಪ್ರಸೂತಿ ಗೃಹವು ಹೇಗಿರಬೇಕು?

ಪ್ರಸೂತಿ ಗೃಹವು ಸ್ವಚ್ಛವಾಗಿಯೂ ಸುಂದರವಾಗಿಯೂ ಇರಬೇಕು. ಅದರೊಳಕ್ಕೆ ಸೂರ್ಯನ ಕಿರಣಗಳು ಹಾಗೂ ಮಂದಗತಿಯಲ್ಲಿ ಗಾಳಿಯು ಬಂದು ಹೋಗುವಂತಿರಬೇಕು. ಪ್ರಸೂತಿ ಗೃಹದೊಳಗಾಗಲಿ, ಸುತ್ತಮುತ್ತಲಲ್ಲಾಗಲಿ ತೇವವಿರಬಾರದು. ಅಕ್ಕ-ಪಕ್ಕದಲ್ಲಿ ಕೊಳಕು ನೀರಿನ ನಾಲೆಗಳಿರಬಾರದು. ಪಾಯಿಖಾನೆಯ ದುರ್ಗಂಧ ಬರದಂತಿದ್ದು, ಮನೆಯೊಳಗೆ ಮತ್ತು ಹೊರಗೆ ಗೋಡೆಗಳಿಗೆ ಸುಣ್ಣ ಹೊಡೆದಿರಬೇಕು. ಕೋಣೆಯಲ್ಲಿ (ಅನಾವಶ್ಯಕವಾದ) ಸಾಮಾನುಗಳಿದ್ದಲ್ಲಿ ಅವುಗಳನ್ನು ತೆಗೆಯಬೇಕು. ಚಳಿಗಾಲವಾಗಿದ್ದಲ್ಲಿ, ಹಗಲು-ರಾತ್ರಿ ಅಗ್ಗಿಷ್ಟಿಕೆಯನ್ನು ಇಡದೆ, ಕೋಣೆಯು ಆವಶ್ಯಕತಾನುಸಾರವಾಗಿ ಬೆಚ್ಚಗಿರುವಂತೆ ವ್ಯವಸ್ಥೆಮಾಡಬೇಕು. ಸ್ತ್ರೀಯರು ಸಾಮಾನ್ಯವಾಗಿ ಹಗಲು-ರಾತ್ರಿ ಅಗ್ಗಿಷ್ಟಿಕೆಯನ್ನು ಇಟ್ಟು

ಅದರೊಳಕ್ಕೆ ಸೌದೆ-ಬೆರಣಿಗಳನ್ನು ಹಾಕಿ ಉರಿಸುತ್ತಿರುತ್ತಾರೆ. ಕೆಲವು ಮನೆಗಳಲ್ಲಿ ಒಂದು ಕಡೆ ಅಗ್ಗಿಷ್ಟಿಕೆಯು ಉರಿಯುತ್ತಿರುತ್ತದೆಯಾದರೆ ಇನ್ನೊಂದೆಡೆ ಸೀಮೆಎಣ್ಣೆಯ ಲಾಂದ್ರವು ಉರಿಯುತ್ತಿದ್ದು ಕಿಟಕಿ ಬಾಗಿಲುಗಳನ್ನು ಮುಚ್ಚಿರುತ್ತಾರೆ. ಇದರ ಪರಿಣಾಮವಾಗಿ ಎರಡರ ಹೊಗೆಯು ಸೇರಿಕೊಂಡು ಒಂದು ಬಗೆಯ ವಿಷಗಾಳಿ ಉತ್ಪನ್ನವಾಗುತ್ತದೆ. ಹೀಗಾದಾಗ ಅಲ್ಲಿರುವವರು ಉಸಿರು ಕಟ್ಟಿದಂತಾಗಿ ಮರಣಕ್ಕೀಡಾಗುವುದುಂಟು. ಇದು ಬಹಳ ಕೆಟ್ಟವಿಷಯವಾದ್ದರಿಂದ ಹೀಗಾಗುವುದನ್ನು ತಪ್ಪಿಸಬೇಕು. ಪ್ರಸೂತಿಗೃಹದಲ್ಲಿ ಸೀಮೆಎಣ್ಣೆಯ ದೀಪವನ್ನು ಉರಿಸದೆ ಅದಕ್ಕೆ ಬದಲಾಗಿ ಎಳ್ಳೆಣ್ಣೆಯ ದೀಪವನ್ನು ಉರಿಸಬೇಕು. ಇದರ ಜ್ಯೋತಿಯು ತಣ್ಣಗಿರುವುದರಿಂದ ಮಗುವು ಸ್ವಸ್ಥವಾಗಿರುವುದಲ್ಲದೆ ಅದರ ಕಣ್ಣುಗಳು ಅಪಾಯದಿಂದ ಪಾರಾಗುತ್ತವೆ. ಪ್ರಸೂತಿಗೃಹವನ್ನು ಧೂಪ, ಚಂದನ ಮೊದಲಾದ ದ್ರವ್ಯಗಳಿಂದ ಸುಗಂಧಪೂರಿತವಾಗಿಡಬೇಕು. ಪ್ರಸವವಾಗುವುದಕ್ಕೆ ಮುಂಚೆ ಅಲ್ಲಿ ಶಾಂತಿಪಾಠ, ಹವನ, ಗೋವು ಮತ್ತು ಬ್ರಾಹ್ಮಣನ ಆವಾಹನೆ ಮತ್ತು ಪೂಜೆ, ಅಗ್ನಿ ಹಾಗೂ ವರುಣದೇವರ ಪೂಜೆಯನ್ನು ಮಾಡಿಸಿ, ನಂತರ ಬ್ರಾಹ್ಮಣರಿಗೆ ಮಂಗಳಕರವಾದ ವಸ್ತುಗಳನ್ನು ದಾನಮಾಡಿ ಸ್ವಸ್ತಿವಾಚನಮಾಡಿಸಿದರೆ ಬಹಳ ಉತ್ತಮ.

ಬುದ್ಧಿವಂತರೂ, ಅನುಭವಿಗಳೂ, ಸಾಧ್ವಿ ಮತ್ತು ಸದಾಚಾರಿಣಿಯರೂ ಆದ ಸ್ತ್ರೀಯರು ಅಲ್ಲಿದ್ದು ಗರ್ಭಿಣಿಗೆ ಮಧುರವಾಣಿಯಿಂದ ಧೈರ್ಯವನ್ನು ಹೇಳಿ, ಹರ್ಷವನ್ನುಂಟುಮಾಡುವ ಮಾತುಗಳನ್ನಾಡಿ ಆಶೀರ್ವದಿಸಿ, ಮಧುರ ಸ್ವರದಿಂದ ಭಗವಂತನ ನಾಮ-ಕೀರ್ತನೆಯನ್ನು ಮಾಡಿದಲ್ಲಿ ಪ್ರಸೂತಿಗೃಹವು ಮಂಗಳಕರವಾಗುತ್ತದೆ. ಪ್ರಸವಸ್ಥಾನದಲ್ಲಿ ಕಾಕಜಂಘಾ, ಕಾರೆಕಾಯಿ, ಕೋಶಾತಕೀ, ಬೃಹತೀ ಮತ್ತು ಅತಿಮಧುರ ಮೊದಲಾದ ಬೇರುಗಳನ್ನು ಅರೆದು ಬಂದ ರಸದಿಂದ ಸಾರಿಸಬೇಕು. ಇದರಿಂದ ಬಾಲಕನ ರಕ್ಷಣೆಯಾಗುವುದಲ್ಲದೆ ರೋಗಾದಿಗಳು ಸಹಜವಾಗಿ ಪ್ರವೇಶಿಸುವುದಿಲ್ಲ.

ಬಾಣಂತಿಯನ್ನು ಮಲಗಿಸಲು ಮಂಚವನ್ನು ಉಪಯೋಗಿಸಬೇಕು. ಅದರಲ್ಲಿ ತಿಗಣೆ, ಸೊಳ್ಳೆ, ಮೊದಲಾದ ಹುಳುಹುಪ್ಪಟೆಗಳಿರಬಾರದು. ಸ್ವಚ್ಛವಾದ ಹಾಗೂ ಮೃದುವಾದ ಹಾಸಿಗೆ ಇರಬೇಕು. ಒಗೆದಿರುವ ಸ್ವಚ್ಛವಾದ ಹೊದಿಕೆಯಿರಬೇಕು. ಹಾಸಿಗೆಯ ಮೇಲೆ ಅತಿ ಎತ್ತರವಲ್ಲದ ತಲೆದಿಂಬಿರಬೇಕು. ಪ್ರಸವವಾಗುವುದಕ್ಕೆ ಮುಂಚೆಯೇ ಗರ್ಭಿಣಿಗಾಗಿ ಒಳ್ಳೆಯ ಮತ್ತು ಅನುಭವಿ ದಾದಿಯನ್ನು ನೋಡಿ ಉಚಿತವಾದ ವ್ಯವಸ್ಥೆ ಮಾಡಿದರೆ ಉತ್ತಮ. ಪ್ರಸೂತಿ ಗೃಹದಲ್ಲಿ ಕೆಳಗೆ ನಮೂದಿಸಿರುವ ಪದಾರ್ಥಗಳು ಮುಂಚಿತವಾಗಿಯೇ ಇರಬೇಕು-

೧. ಒಳ್ಳೆಯ ಮಂಚ ಅಥವಾ ಮಣೆ.

೨. ಮೇಣಗಪ್ಪಡ.

೩. ಪ್ರಸೂತಿಗಾಗಿ ಎರಡು ದಪ್ಪ ದ್ರವವನ್ನು ಹೀರುವ ಪ್ಯಾಡ್‌ಗಳು.

೪. ಹೊಟ್ಟೆಯಮೇಲೆ ಸುತ್ತುವುದಕ್ಕೆ ಬೇಕಾದ ಬೆಚ್ಚನೆಯ ಹಾಗೂ ದಪ್ಪನಾದ ಬಟ್ಟೆ

೫. ಒಂದು ಅಥವಾ ಎರಡು ಅಂಗವಸ್ತ್ರಗಳು.

೬. ನೀರನ್ನು ಹೀರುವ ಹತ್ತಿ, (ಸಾಧಾರಣ ಹತ್ತಿಯನ್ನು ಬೈಕಾರ್ಬೋನೇಟ್ ಆಫ್ ಸೋಡಾ ಮತ್ತು ನೀರಿನಲ್ಲಿ ಕುದಿಸುವುದರ ಮೂಲಕ ಇದನ್ನು ಮನೆಯನಲ್ಲಿಯೇ ತಯಾರಿಸಬಹುದು.)

೭. ಒರೆಸುವುದಕ್ಕೆ ಉಪಯೋಗಿಸಲು ಒಗೆದ ಬಟ್ಟೆಗಳು.

೮. ಶುದ್ಧವಾದ ಹತ್ತಿಯ ಮಡಿಕೆ.

೯. ಹರಳೆಣ್ಣೆ.

೧೦. ಶುದ್ಧವಾದ ದೇಶೀ ಸಾಬೂನು.

೧೧. ಹೊಟ್ಟೆಯಮೇಲೆ ಪಟ್ಟಿಯನ್ನು ಸುತ್ತಲು ಅನುಕೂಲವಾಗುವಂತೆ ಕೆಲವು ಪಿನ್ನುಗಳು.

೧೨. ಮಗುವಿಗೆ ಹೊದೆಸಲು ಮೆತ್ತನೆಯ ಉಣ್ಣೆಯಬಟ್ಟೆ ಕಂಬಳಿ ಅಥವಾ ಬೇರೆ ಯಾವದಾದರೂ ಬೆಚ್ಚನೆಯ ಬಟ್ಟೆ

೧೩. ಸ್ವಚ್ಛವಾದ ಬಿಸಿನೀರಿನಲ್ಲಿ ಕುದಿಸಿದ ಹರಿತವಾದ ಚಾಕು ಅಥವಾ ಕತ್ತರಿ.

೧೪. ಹೊಕ್ಕಳ ಹುರಿಗಾಗಿ ಬಿಸಿನೀರಿನಲ್ಲಿ ಕುದಿಸಲಾದ ರೇಶ್ಮೆದಾರ.

೧೫. ಡೆಟಾಲ್ - ಜಂತುನಾಶಕ ಔಷಧದ ಸೀಸೆ.

೧೬. ಎಲಿಗೆಂಟ್ ಮಿಕ್ಟ್ಚರ್ ಬಾಟ್ಲು.

೧೭. ಒಂದು ಪೌಂಡು ಬೋರಿಕ್ ಆಸಿಡ್.

೧೮. ಮೂರು-ನಾಲ್ಕು ಬಟ್ಟಲುಗಳು.

೧೯. ಅಗತ್ಯವಿದ್ದಷ್ಟು ಬಿಸಿ ಮತ್ತು ತಣ್ಣೀರು ಬೇರೆಬೇರೆಯಾಗಿ.

೨೦. ಮಗುವಿನ ಕಣ್ಣುಗಳನ್ನು ಸ್ವಚ್ಛಮಾಡುವ ಸಲುವಾಗಿ ಬೋರಿಕ್ ಲೋಶನ್ ಔಷಧಿ.

ಪ್ರಸವವಾಗುವ ಸಮಯದಲ್ಲಿ ಬಹಳ ಎಚ್ಚರಿಕೆಯಿಂದ ಕೆಲಸ ಮಾಡಬೇಕು. ಇಲ್ಲವಾದಲ್ಲಿ ಬಾಣಂತಿ-ಮಗುವಿನ ಪ್ರಾಣಕ್ಕೆ ಅಪಾಯವಾಗಬಹುದು. ಆ ಸಮಯದಲ್ಲಿ ಮನಸ್ಸಿನಲ್ಲೇ ಭಗವನ್ನಾಮ-ಜಪ ಮತ್ತು ಭಗವಂತನ ಪ್ರಾರ್ಥನೆಯನ್ನು ಮಾಡುತ್ತಿರಬೇಕು. ಆ ಸಮಯದಲ್ಲಿ ಯಾವ ಸ್ತ್ರೀಗೆ ಪ್ರಸೂತಿಯಲ್ಲಿ ಅನುಕಂಪವಿಲ್ಲವೋ ಅಥವಾ ಯಾರು ಅವಳ ದ್ವೇಷಿಗಳೋ ಅಂತಹವರು ಅಲ್ಲಿರಬಾರದು. ಹಾಗೆ ಇದ್ದಪಕ್ಷದಲ್ಲಿ ಮಗುವಿಗೆ ಹಾನಿ ಹಾಗೂ ಬಾಣಂತಿಗೆ ಹಿಸ್ಟೀರಿಯಾ ಅಥವಾ ಪ್ರೇತಬಾಧೆಯಂತಹ ರೋಗವುಂಟಾಗಬಹುದು.

ಪ್ರಸವವಾದನಂತರ ತಾಯಿ ಮತ್ತು ಮಗುವಿನ ಆರೋಗ್ಯವನ್ನು ಬಹು ಎಚ್ಚರಿಕೆಯಿಂದ ರಕ್ಷಿಸಬೇಕು. ಈ ಸಮಯದಲ್ಲಿ ತಾಯಿಗೆ ಮಾನಸಿಕ ಹಾಗೂ ಶಾರೀರಿಕ ವಿಶ್ರಾಂತಿಯು ಸಾಕಷ್ಟು ದೊರಕಬೇಕು. ಪ್ರಸವವಾದ ನಂತರ ಸುಮಾರು ಹತ್ತು ದಿನಗಳವರೆಗೆ ರಕ್ತಸ್ರಾವ ಅಥವಾ ಬೇರೆಯದೇ ಆದ ಪ್ರವಾಹೀ ದ್ರವ್ಯಗಳು ಸ್ರವಿಸುತ್ತಿರುತ್ತವೆ. ಆದ್ದರಿಂದ ಜಂತುನಾಶಕ ಡೆಟ್ಟಾಲ್ ಮುಂತಾದುವುಗಳನ್ನು ಉಪಯೋಗಿಸಬೇಕು. ಇದರಿಂದ ದುರ್ಗಂಧ ಉಂಟಾಗುವುದಿಲ್ಲ. ಜಂತುನಾಶಕ ಔಷಧಿಯಲ್ಲಿ ಕುದಿಸಿದ ಚಿಕ್ಕ ಅಂಗವಸ್ತ್ರ ಅಥವಾ ಶುದ್ಧವಾದ ಹತ್ತಿಯ ದಪ್ಪವಾದ ಮಡಿಕೆಯಿಂದ ಯೋನಿಯನ್ನು ಮುಚ್ಚಬೇಕು ಮತ್ತು ಇವುಗಳನ್ನು ಆಗಾಗ ಬದಲಾಯಿಸಬೇಕು. ತಾಯಿಯು ಮಗುವಿಗೆ ಹಾಲನ್ನು ಕುಡಿಸಲು ಪ್ರಾರಂಭಿಸಿದರೆ ಗರ್ಭಾಶಯವು ತತ್‌ಕ್ಷಣವೇ ತನ್ನ ಸಾಧಾರಣ ಸ್ಥಿತಿಗೆ ಮರಳುತ್ತದೆ. ಅದು ಸಾಮಾನ್ಯ ಸ್ಥಿತಿಗೆ ಬರಲು ಸುಮಾರು ೪೫ ದಿನಗಳು ಹಿಡಿಯಬಹುದು. ಆದರೆ ಕಿಬ್ಬೊಟ್ಟೆಯು ಹತ್ತು ದಿನಗಳ ಅವಕಾಶದಲ್ಲಿ ಸಾಮಾನ್ಯ ಸ್ಥಿತಿಗೆ ಬಂದುಬಿಡುತ್ತದೆ. ಆದ್ದರಿಂದ ತಾಯಿಗೆ ಅನೇಕ ವಾರಗಳ ಕಾಲ ವಿಶ್ರಾಂತಿಯ ಅಗತ್ಯವಿರುತ್ತದೆ. ಆದರೆ ಯಾವಾಗಲೂ ಹಾಸಿಗೆಯಲ್ಲಿಯೇ ಬಿದ್ದುಕೊಂಡಿರಬಾರದು. ಕುಳಿತುಕೊಂಡಿರುವುದು ಒಳ್ಳೆಯದು. ತೈಲದಿಂದ ಲಘುವಾಗಿ ಮಾಲಿಶ್ ಮಾಡುವುದರಿಂದ ನರಗಳು ಸಾಮಾನ್ಯ ಸ್ಥಿತಿಗೆ ಬರಲು ಅನುಕೂಲವಾಗುತ್ತದೆ.

ಕೋಣೆಯನ್ನು ಸ್ವಚ್ಛಮಾಡಿ ಚೊಕ್ಕಟವಾಗಿಡಬೇಕು. ಅದರಲ್ಲಿ ಮಲ-ಮೂತ್ರವಿರಬಾರದು. ಪಾತ್ರೆಗಳನ್ನು ತೊಳೆದು ಸದಾಸ್ವಚ್ಛವಾಗಿರುವಂತೆ ನಿಗಾವಹಿಸಬೇಕು. ಬಾಣಂತಿ-ಮಗುವಿನ ಬಟ್ಟೆಗಳು ರಕ್ತ, ಮಲ, ಮೂತ್ರಾದಿಗಳಲ್ಲಿ

ತೊಯ್ಯದಂತೆ ಎಚ್ಚರಿಕೆ ವಹಿಸಬೇಕು. ಮನೆಯ ಅಂಗಳ ಸ್ವಚ್ಛವಾಗಿರಲಿ. ಪ್ರಾತಃಕಾಲ ಹಾಗೂ ಸಂಜೆ ವೇಳೆಯಲ್ಲಿ ಬೇವು, ಗುಗ್ಗುಳ ಮತ್ತು ಧೂಪ ಮುಂತಾದ ಸುಗಂಧ ದ್ರವ್ಯಗಳ ಧೂಪವನ್ನು ಉರಿಸಬೇಕು. ಮಧ್ಯಾಹ್ನದ ವೇಳೆಯಲ್ಲಿ ಬಿಸಿಲು-ಕೋಣೆಯೊಳಕ್ಕೆ ಬರುವಂತೆ ಎಚ್ಚರಿಕೆ ವಹಿಸಬೇಕು. ಅಲ್ಲಿ ಒಳ್ಳೆ ಮಾತುಗಳನ್ನು ಆಡಬೇಕು ಎಂದರೆ ವಾತಾವರಣವು ಸಂಪೂರ್ಣವಾಗಿ ಸಾತ್ವಿಕವಾಗಿರಬೇಕು. ಹೀಗೆ ಎಚ್ಚರಿಕೆ ವಹಿಸಿದಲ್ಲಿ ಮಗು-ಬಾಣಂತಿಯರು ಆರೋಗ್ಯವಾಗಿರುವುದಲ್ಲದೆ ಅವರ ಮನಸ್ಸಿನ ಮೇಲೆ ಆಗುವ ಪ್ರಭಾವವು ಸುಂದರವಾಗಿರುತ್ತದೆ.

ಪ್ರಸವವಾದ ನಂತರ ಎರಡನೇ ದಿನದಿಂದ ಪ್ರಾರಂಭಿಸಿ ಒಂದು ವಾರಕಾಲ ತಾಯಿಗೆ ದಶಮೂಲದ ಕಷಾಯ ಕುಡಿಸಿದಲ್ಲಿ ತಾಯಿ ಮತ್ತು ಮಗುವಿನ ಸ್ವಾಸ್ಥ್ಯದ ಮೇಲೆ ಒಳ್ಳೆಯ ಪರಿಣಾಮವುಂಟಾಗುತ್ತದೆ.

ಪ್ರಸವವಾಗುವ ಸಮಯದಲ್ಲಿ ಬಹಳ ನೋವಾಗುವುದು, ಪ್ರಸವವಾಗುವುದಿಲ್ಲ- ಆಗ ಕೈಮೋಮಿಲಾ ೧೨ ಎಂಬ ಹೋಮಿಯೋಪತಿ ಔಷಧಕೊಟ್ಟಲ್ಲಿ ಹೆರಿಗೆ ಸುಸೂತ್ರವಾಗಿ ಆಗುತ್ತದೆ. ಹಾಗೆ ಒಂದು ಸಾರಿ ಆಗದಿದ್ದಲ್ಲಿ ಮತ್ತೊಮ್ಮೆ ಕೊಟ್ಟರಂತೂ ಆಗಿಯೇ ತೀರುತ್ತದೆ. ಇನ್ನೂ ಹೂವು ಮೂಡದಿರುವ ಹುಣಿಸೇ ಮರದ ಬೇರನ್ನು ಅಥವಾ ಕರೀಜಾಲಿಯ ಬೇರನ್ನು ತಲೆಯ ಮುಂದುಗಡೆಯಿಂದ ಕೂದಲುಗಳಿಗೆ ಕಟ್ಟಿಸಿದರೆ ಸಹಜವಾಗಿ ಪ್ರಸವವಾಗುತ್ತದೆ. ಆದರೆ ಮಗುವು ಹೊರಗೆ ಬರುತ್ತಿದ್ದಂತೆಯೇ ಕೂದಲುಗಳ ಸಹಿತ ಬೇರುಗಳನ್ನು ಕತ್ತರಿಸಿಬಿಡಬೇಕು. ಬಂಗಾಳದಲ್ಲಿ ಸಾಧಾರಣ ಮಾಕಾಲ್ ಎಂಬ ಗಿಡವಿರುತ್ತದೆ. ಅದರ ಬೇರನ್ನು ಸೊಂಟಕ್ಕೆ ಕಟ್ಟಿದರೂ ತತ್‌ಕ್ಷಣ ಪ್ರಸವವಾಗುತ್ತದೆ. ಆದರೆ ಪ್ರಸವವಾದ ಮರುಘಳಿಗೆಯಲ್ಲಿ ಅದನ್ನು ಬಿಚ್ಚಿಬಿಡಬೇಕು. ಆಲದಮರದ ಎಲೆಯಮೇಲೆ ಕೆಳಗೆ ತಿಳಿಸಲಾಗಿರುವ ಯಂತ್ರ ಹಾಗೂ ಮಂತ್ರವನ್ನು ಬರೆದು ಗರ್ಭಿಣಿಯ ಹಣೆಯಮೇಲೆ ಇರಿಸುವುದರಿಂದಲೂ ಸುಖಪೂರ್ವಕವಾಗಿ ಹೆರಿಗೆಯಾಗುವುದು ಕಂಡುಬಂದಿದೆ. ಮಂತ್ರವು ಹೀಗಿದೆ-

**ಅಸ್ತಿ ಗೋದಾವರೀ ತೀರೇ ಜಂಭಲಾ ನಾಮ ರಾಕ್ಷಸೀ ।**
**ತಸ್ಯಾಃ ಸ್ಮರಣಮಾತ್ರೇಣ ವಿಶಲ್ಯಾ ಗರ್ಭಿಣೀ ಭವೇತ್ ॥**

ಯಂತ್ರ

| | | | |
|---|---|---|---|
| ೧ | ೮ | ೯ | ೧೪ |
| ೧೧ | ೧೨ | ೩ | ೬ |
| ೭ | ೨ | ೧೫ | ೮ |
| ೧೩ | ೧೦ | ೫ | ೪ |

ಕೆಳಗೆ ತಿಳಿಸಲಾಗಿರುವ ಮಂತ್ರದಿಂದ ಅಭಿಮಂತ್ರಿತವಾದ ಜಲವನ್ನು ಕುಡಿಸುವುದರಿಂದಲೂ ಎಲ್ಲ ಬಾಧೆಗಳೂ ದೂರವಾಗಿ ಸುಖಪ್ರಸವವಾಗುತ್ತದೆ ಮತ್ತು ಮಗು-ಬಾಣಂತಿಯವರಿಗೆ ಮಂಗಳವಾಗುತ್ತದೆ.

**ಅಚ್ಯುತಾನಂತಗೋವಿಂದ ನಾಮೋಚ್ಚಾರಣ ಭೇಷಜಾತ್ ।**
**ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್ ॥**

❑❑

# ೧೧. ಎರಡು ಪ್ರಸವಗಳ ನಡುವೆ ಅಂತರವೆಷ್ಟಿರಬೇಕು?

ಈ ದಿನಗಳಲ್ಲಿ ಸ್ತ್ರೀಯರು ಮತ್ತು ಮಕ್ಕಳು ಒಂದೇ ಸಮನೆ ರೋಗಗಳಿಗೆ ತುತ್ತಾಗುತ್ತಿದ್ದಾರೆ ಮತ್ತು ಅವರ ಮರಣವೂ ಹೆಚ್ಚುತ್ತಿರುವುದಕ್ಕೆ ಅಸಂಯಮವು ಒಂದು ಪ್ರಧಾನ ಕಾರಣವಾಗಿದೆ. ವಿಷಯಭೋಗದ ಅತಿಶಯವಾದ ಆಸೆಯು ಪುರುಷನಿಗೆ ಘಾತಕವಾಗಿರುವಂತೆಯೆ ಸ್ತ್ರೀಗೂ ಸಹ ಹೆಚ್ಚು ಹಾನಿಕಾರಕ. ಅಧಿಕ ವಿಷಯ ಸೇವನೆಯಿಂದ ಸ್ತ್ರೀಯರಿಗೆ ಮಲಬದ್ಧತೆ, ಉದರಪೀಡೆ, ಗರ್ಭಾಶಯ ದಿಂದ ಬಿಳಿ ಅಥವಾ ಕೆಂಪು ಬಣ್ಣದ ದ್ರವವು ಸ್ರವಿಸುವುದು, ದುರ್ಬಲತೆ,

ಯೋನಿಭ್ರಂಶ, ತಲೆಶೂಲೆ, ಕ್ಷಯ ಮತ್ತು ಪ್ರಸೂತಿಗೆ ಸಂಬಂಧಿಸಿದ ವಿವಿಧ ರೋಗಗಳುಂಟಾಗುತ್ತವೆ. ಚಿಕ್ಕವಯಸ್ಸಿನ ವಧುಗಳಂತೂ ಹಗಲು-ರಾತ್ರಿ ತಲೆಶೂಲೆ, ಹಸಿವಾಗದಿರುವಿಕೆ, ಮನಸ್ಸಿನ ತಳಮಳ, ಬಿಳಿದ್ರವ-ಸ್ರಾವ ಹೊಟ್ಟೆಮತ್ತು ಕಿಬ್ಬೊಟ್ಟೆನೋವು ಮುಂತಾದ ರೋಗಗಳಿಂದಾಗಿ ಅನವರತ ಪೀಡೆಯನ್ನು ಅನುಭವಿಸುತ್ತಿರುವುದಕ್ಕೆ ಅತಿಶಯ ವಿಷಯಭೋಗವೇ ಕಾರಣವಾಗಿದೆ. ಅಧಿಕ ವಿಷಯಭೋಗದಿಂದಾಗಿ ಗರ್ಭಸ್ರಾವವಂತೂ ಆಗಿಯೇ ತೀರುತ್ತದೆ; ಇದರ ಜೊತೆಗೆ ಸಂತಾನವು ದುರ್ಬಲ, ಅಲ್ಪಜೀವಿ, ರೋಗಿ, ಮಂದಬುದ್ಧಿ, ಚರಿತ್ರಹೀನ, ಅಧರ್ಮಿ ಆಗುತ್ತದೆ. ಸಂತಾನಗಳಲ್ಲಿ ವಿಕಾಸ ಮತ್ತು ಸಂವರ್ಧನ ಶಕ್ತಿ ಸಹ ಬಹಳ ಕಡಿಮೆಯಾಗುವುದು ಕಂಡುಬಂದಿದೆ.

ಅತಿಶಯ ವಿಷಯಭೋಗದಿಂದಾಗಿ ಸ್ತ್ರೀಯರಿಗೆ ವಿವಿಧ ರೋಗಗಳುಂಟಾಗುತ್ತವೆ. ಅವರ ಯೌವನ ಅಕಾಲದಲ್ಲಿಯೇ ನಷ್ಟವಾಗುತ್ತದೆ. ಮತ್ತು ಕೆಲವೇ ವರ್ಷಗಳಲ್ಲಿ ಯೌವನಾವಸ್ಥೆಯಲ್ಲಿಯೇ ಮುದುಕಿಯರಾಗುತ್ತಾರೆ. ಧಾರ್ಮಿಕ ಕಾರ್ಯಗಳಲ್ಲಿ ರುಚಿಯಿಲ್ಲದಾಗಿ ಶರೀರವು ಆಲಸ್ಯ ಪೂರಿತವಾಗುತ್ತದೆ. ಅಗ್ನಿಯಲ್ಲಿ ತುಪ್ಪವನ್ನು ಹಾಕುವುದರಿಂದ ಅಗ್ನಿಯು ಧಗಧಗನೆ ಉರಿಯುವಂತೆ ಅತಿಯಾದ ಭೋಗದಿಂದಾಗಿ ಭೋಗಕಾಮನೆಯು ಹೆಚ್ಚುತ್ತಿರುತ್ತದೆ. ದಾಂಪತ್ಯ ಸುಖದಲ್ಲಿ ಕೊರತೆಯುಂಟಾಗಿ ಆಯುಸ್ಸು ಕ್ಷೀಣಿಸುತ್ತದೆ. ಸದಾ ರೋಗಿಯಾಗಿರುವ ಕಾರಣ ಮನೆಯಲ್ಲಿ ಪತಿ ಮೊದಲಾದವರ ನಿಂದೆಗಳಿಗೆ ಗುರಿಯಾಗಿ ಮಾನಸಿಕ ಪೀಡೆಯು ವೃದ್ಧಿಯಾಗುತ್ತದೆ. ಆದ್ದರಿಂದ ದಂಪತಿಗಳು ನಿರೋಗತೆ, ಧಾರ್ಮಿಕತೆ, ಉತ್ತಮ ಆರೋಗ್ಯದ ಸಂತಾನ ಮತ್ತು ದೀರ್ಘಾಯುಷ್ಯದ ಸಲುವಾಗಿ ಹೆಚ್ಚು-ಹೆಚ್ಚಾಗಿ ಸಂಯಮವನ್ನು ಆಚರಿಸಬೇಕು. ವಿಷಯ-ಸೇವನೆಯು ವಿಷಯ-ಸುಖಕ್ಕಾಗಿ ಅಲ್ಲ, ಸಂತಾನೋತ್ಪತ್ತಿ ರೂಪೀ ಧರ್ಮಪಾಲನೆಗಾಗಿ, ಆದ್ದರಿಂದ ಧರ್ಮಾನುಕೂಲವಾದ ವಿಷಯ-ಸೇವನೆಯೇ ಕರ್ತವ್ಯವೆಂದು ಭಗವಂತನು ಹೇಳಿದ್ದಾನೆ-

**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ।**

ಹೇ ಅರ್ಜುನ! ಪ್ರಾಣಿಗಳಲ್ಲಿ ಧರ್ಮಕ್ಕೆ ಅವಿರುದ್ಧವಾದ ಕಾಮವು ನಾನಾಗಿದ್ದೇನೆ, ಎಂದು ಗೀತೆಯಲ್ಲಿ ಹೇಳಿದ್ದಾನೆ. ಇದೇ ದೃಷ್ಟಿಯಿಂದ ಶಾಸ್ತ್ರಾನುಸಾರ ಋತುಕಾಲದಲ್ಲಿ ತೀರಾಕಡಿಮೆ ಸಂಸರ್ಗಮಾಡಬೇಕು. ಗರ್ಭಾಧಾನವಾದ ನಂತರ ವಿಷಯ-ಸಂಸರ್ಗವನ್ನು ಸಂಪೂರ್ಣವಾಗಿ ನಿಲ್ಲಿಸಿಬಿಡಬೇಕು.

ಪ್ರಸವವಾದನಂತರ ಮಗುವು ಸ್ತನಪಾನ ಮಾಡುತ್ತಿರುವವರೆಗೆ ವಿಷಯ-ಭೋಗ ಮಾಡಲೇಬಾರದು. ಸುಮಾರು ೧ ವರ್ಷ ೯ ತಿಂಗಳವರೆಗೆ ಸ್ತನಪಾನ ಮಾಡಿಸುವುದು ಒಳ್ಳೆಯದು. ಸ್ವಸ್ಥಳಾದ ಮಾತೆಯ ಸ್ನೇಹವಾದ ಸ್ತನಪಾನ ಮಾಡುವ ಭಾಗ್ಯವು ಲಭಿಸಿದ ಮಕ್ಕಳ ಜೀವನವು ಪೂರ್ಣವಾಗಿರುತ್ತದೆ. ಅಸಂಯಮದಿಂದ ಉಂಟಾಗುವ ವಿಘ್ನವಿಲ್ಲವಾದರೆ, ಮಾತೆಯ ಆರೋಗ್ಯವು ಚೆನ್ನಾಗಿದ್ದಲ್ಲಿ ೨೧ ತಿಂಗಳವರೆಗೆ ಸ್ತನಗಳಲ್ಲಿ ಸಾಕಷ್ಟು ಹಾಲು ಬರುತ್ತಿರುತ್ತದೆ. ಸ್ತನಪಾನವನ್ನು ನಿಲ್ಲಿಸಿದ ಮೇಲೆ ಅಷ್ಟೆ ತಿಂಗಳಗಳ ಕಾಲ ಸ್ತ್ರೀಗೆ ವಿಶ್ರಾಂತಿ ಸಿಗುವ ನಿಮಿತ್ತವಾಗಿ ಸಂಭೋಗ ಮಾಡಬಾರದು. ಇದಾದನಂತರ ದೀರ್ಘಜೀವಿಯಾದ ಸಂತಾನ ನಿರ್ಮಾಣಕ್ಕೆ ಯೋಗ್ಯವಾದ ಸ್ಥಿತಿಯುಂಟಾಗಲು ಮತ್ತೆ ಒಂದೂವರೆ ವರ್ಷಗಳ ಅವಕಾಶವಿರಬೇಕು. ಈ ರೀತಿ ಸಂತಾನೋತ್ಪತ್ತಿಯಾದ ನಂತರ ಸುಮಾರು ೫ ವರ್ಷಗಳ ಕಾಲ ಸಂಯಮದಿಂದಿರುವುದು ಹಿತಕರವಾಗಿದೆ.

ಶಿಶುವು ಸ್ತನಪಾನ ಮಾಡುವುದನ್ನು ನಿಲ್ಲಿಸಿದೊಡನೆಯೇ ಸಂಭೋಗದಲ್ಲಿ ತೊಡಗುವುದು ಅಧಮ. ಸ್ತನಪಾನವನ್ನು ನಿಲ್ಲಿಸಿದ ನಂತರ ಅಷ್ಟೇ ಸಮಯದ ನಂತರ ತೊಡಗುವುದು ಸರ್ವಶ್ರೇಷ್ಠ ಹೀಗೆ ಮಾಡುವುದು ಸಾಧ್ಯವಾಗದಿರುವಲ್ಲಿ ಒಂದು ಸಂತಾನವು ಜನಿಸಿದ ನಂತರ ಇನ್ನೊಂದರ ಜನನದ ನಡುವೆ ಐದು ವರ್ಷಗಳ ಅಂತರವಂತೂ ಇರಲೇಬೇಕು. ಹೀಗೆ ಮಾಡುವುದಾದಲ್ಲಿ, ಹತ್ತು ತಿಂಗಳು ಮುಂಚೆಯೇ ಸಂಭೋಗ ಮಾಡಬಹುದಾಗಿದೆ.

ಸಂಯಮಶೀಲರಾದ ಮಾತಾಪಿತೃಗಳ ಪವಿತ್ರವಾದ ಉದ್ದೇಶದಿಂದ ಪ್ರೇರಿತವಾದ ಸಂಸರ್ಗದಿಂದಲೇ ಸತ್ ಸಂತಾನದ ಉತ್ಪತ್ತಿ ಸಂಭವ. ಹದಿನಾರನೇ ವರ್ಷದಿಂದ ಮೂವತ್ತೈದು ವರ್ಷ ವಯಸ್ಸಿನ ಅವಧಿಯಲ್ಲಿ ಮೂರು ಅಥವಾ ನಾಲ್ಕು ಸಂತಾನಗಳಾದಲ್ಲಿ ಒಳ್ಳೆಯದು. ಇದರಿಂದ ಶ್ರೇಷ್ಠ ಸಂತಾನಗಳು ಜನಿಸುವುದು ಮಾತ್ರವಲ್ಲ, ತಂದೆತಾಯಿ ಸಹ ಸುಖವಾಗಿರುವರು. ದುರ್ಬಲ ಸಂತಾನಗಳು ಹೆಚ್ಚಾದಷ್ಟೂ ಅವುಗಳನ್ನು ಸಾಕುವುದು ಶ್ರಮವೂ, ಕ್ಲೇಶಕರವೂ, ವ್ಯಯಪೂರಿತವೂ, ಸದಾ ರೋಗಿಗಳಾಗಿರುವುದೂ ಮತ್ತು ಅಕಾಲ ಮರಣದ ಸಂತಾಪವೂ ಅಧಿಕವಾಗುತ್ತದೆ. ಹೆಚ್ಚು ಸಂತಾನಗಳಾದಲ್ಲಿ ಅವುಗಳ ಲಾಲನೆ-ಪಾಲನೆ ಎಚ್ಚರಿಕೆ ಹಾಗೂ ಪ್ರೀತಿಪೂರ್ವಕವಾಗಿ ಆಗುವುದಿಲ್ಲ, ಕಾಲವೆಲ್ಲ ಇದರಲ್ಲಿಯೇ ವ್ಯಯವಾಗಿ ಯಾವುದೇ

ಶುಭಕಾರ್ಯ, ಲೋಕಸೇವೆ, ದೇಶಸೇವೆ ಮತ್ತು ಮಾನವ ಜೀವನದ ಪರಮಧ್ಯೇಯವಾದ ಭಗವದ್ಭಕ್ತಿಗಾಗಿ ಸತ್ಸಂಗ, ತೀರ್ಥಯಾತ್ರೆ, ಭಜನೆ ಮುಂತಾದ ಕಾರ್ಯಗಳಿಗೆ ಸಮಯ ದೊರಕುವುದಿಲ್ಲ. ಇದು ಬಹಳ ಹಾನಿಕರ ಸಂಗತಿ. ಏಕೆಂದರೆ ಇದರಿಂದ ಮಾನವ ಜೀವನವು ಸರ್ವಥಾ ಅಸಫಲವಾಗುತ್ತದೆ.

ಇದಲ್ಲದೆ ಅನೇಕ ಅಯೋಗ್ಯ ಸಂತಾನಗಳಾಗುವುದರ ಬದಲು ಒಂದೆರಡು ಯೋಗ್ಯ ಸಂತಾನಗಳು ಜನಿಸುವುದು ಮಹತ್ತ್ವವುಳ್ಳದ್ದಾಗಿದೆ. ಮಳೆಯ ಹುಳುಗಳು ಒಮ್ಮೆಲೇ ಲಕ್ಷ ಸಂಖ್ಯೆಯಲ್ಲಿ ಹುಟ್ಟುತ್ತವೆ ಮತ್ತು ಸರ್ಪಿಣಿಯು ಇನ್ನೂರು-ಇನ್ನೂರೈವತ್ತರಷ್ಟು ಸಂಖ್ಯೆಯಲ್ಲಿ ಮರಿಗಳಿಗೆ ಜನ್ಮವೀಯುತ್ತದೆ. ಆದರೆ ಅದು ಅದರ ಅಧಿಕಾಂಶವನ್ನು ತಾನೇ ತಿಂದು ಹಾಕುತ್ತದೆ. ಹೆಣ್ಣು ನಾಯಿಯು ಐದಾರು ಮರಿಗಳಿಗೆ ಜನ್ಮಕೊಡುತ್ತದೆ. ಆದರೆ ಅವರ ಮಹತ್ತ್ವವೇನು? ಮಹಾರಾಜಾ ರಾಘವೇಂದ್ರ ಶ್ರೀರಾಮಚಂದ್ರ ತನ್ನ ತಾಯಿಯ ಒಬ್ಬನೇ ಮಗನಾಗಿದ್ದನು, ಭೀಷ್ಮರು ಒಬ್ಬರೇ, ಶಂಕರಾಚಾರ್ಯರೂ ಒಬ್ಬರೇ ಇದ್ದರು. ಆದರೆ ಅವರುಗಳ ಮಹತ್ತ್ವವನ್ನು ವರ್ಣಿಸಲಾದೀತೇ? ಮಹತ್ತ್ವವು ಗುಣದಲ್ಲಿದೆ, ಸಂಖ್ಯೆಯಲ್ಲ. ವಸ್ತುತಃ ಮಹತ್ತ್ವಪೂರ್ಣ ಮತ್ತು ಸಫಲ ಸಂತಾನವೆಂದರೆ ಭಗವದ್ಭಕ್ತನೇ ಸರಿ. ಇಲ್ಲವಾದಲ್ಲಿ ಪಶುಸಂತಾನದಂತೆ ಮಾನವ-ಸ್ತ್ರೀಯೂ ಸಹ ಪಶುಸಂತಾನವನ್ನೇ ಹಡೆಯುತ್ತಾಳೆ- ಸುಪುತ್ರನನ್ನಲ್ಲ.ಶ್ರೀ ತುಳಸೀದಾಸರು ಈ ರೀತಿ ಹೇಳುತ್ತಾರೆ-

**ಪುತ್ರವತೀ ಜುಬತೀ ಜಗ ಸೋಈ ।**
**ರಘುಪತಿ ಭಗತು ಜಾಸು ಸುತ ಹೋಈ ॥**
**ನತರು ಬಾಂಝು ಭಲಿ ಬಾದಿ ಬಿಆನೀ ।**
**ರಾಮ ಬಿಮುಖ ಸುತ ತೇ ಹಿತ ಜಾನೀ ॥**

ಲಕ್ಷ್ಮಣನು ರಾಮನ ಜೊತೆಯಲ್ಲಿ ವನಕ್ಕೆ ಹೊರಡುವ ಸಂದರ್ಭದಲ್ಲಿ ಅವನ ತಾಯಿ ಸುಮಿತ್ರೆಯು ಹೀಗೆ ಹೇಳುತ್ತಾಳೆ-

ರಾಮಚಂದ್ರನ ಭಕ್ತನು ಯಾರಿಗೆ ಪುತ್ರನಾಗಿದ್ದಾನೋ ಆ ಯುವತಿಯೇ ನಿಜವಾದ ಪುತ್ರವತಿಯಾಗಿದ್ದಾಳೆ. ರಾಮನಿಗೆ ವಿಮುಖನಾದ ಸುತನು ಹುಟ್ಟುವುದಕ್ಕಿಂತ ಬಂಜೆಯಾಗಿರುವುದೇ ಒಳ್ಳೆಯದು.

□□

# ೧೨. ಮಕ್ಕಳ ಜೀವನ-ನಿರ್ಮಾಣವು ತಾಯಿಯ ಕೈಯಲ್ಲಿದೆ

ಕೋಮಲವಾದ ವಸ್ತುವಿನ ಮೇಲೆ ಪ್ರಭಾವವು ಅತ್ಯಂತ ಶೀಘ್ರವಾಗುವುದಲ್ಲದೆ ಅದು ಸ್ಥಾಯಿಯಾಗಿರುತ್ತದೆ. ಚಿಕ್ಕದಾದ ಕೋಮಲವಾದ ಸಸಿಯನ್ನು ಮಾಲಿಯು ತಾನು ಇಷ್ಟಪಟ್ಟಂತೆ ಬಗ್ಗಿಸಿ ಬಿಡುತ್ತಾನೆ; ಮಣ್ಣಿನಿಂದ ಕುಂಬಾರನು ತನ್ನ ಇಚ್ಛೆಗನುಸಾರ ಪಾತ್ರೆಯನ್ನು ರೂಪಿಸುತ್ತಾನೆ. ಇದೇ ಬಾಲಕರಿಗೂ ಅನ್ವಯಿಸುತ್ತದೆ. ಅವರ ಪ್ರಕೃತಿ, ಅವರ ಬುದ್ಧಿ ಅವರ ಸ್ವಭಾವ, ಮೆದುಳು, ಹೃದಯ ಮೊದಲಾದವುಗಳು ಎಷ್ಟು ಕೋಮಲ ಮತ್ತು ಸರಳವಾಗಿರುತ್ತವೆಯೆಂದರೆ ಅವುಗಳ ಮೇಲೆ ನೀವು ಯಾವ ಸಂಸ್ಕಾರಗಳ ಪ್ರಭಾವ ಬೇಕೋ ಅದನ್ನು ಉಂಟುಮಾಡಬಲ್ಲಿರಿ. ನಿಮಗೆ ಇದರಲ್ಲಿ ಪರಿಶ್ರಮವೇನೂ ಆಗುವುದಿಲ್ಲ. ಬಿಳಿಯ ವಸ್ತ್ರಕ್ಕೆ ಯಾವ ಬಣ್ಣವನ್ನಾದರೂ ಪರಿಶ್ರಮವಿಲ್ಲದೆ ಸುಲಭವಾಗಿ ಬಳಿಯಬಹುದಲ್ಲವೆ? ಹಾಗೆಯೇ ಮಕ್ಕಳ ಹೃದಯವೂ ಕೂಡ. ಅಲ್ಲಿ ಯಾವ ಸಂಸ್ಕಾರಗಳನ್ನಾದರೂ ಉಂಟುಮಾಡಿ ವೃದ್ಧಿಪಡಿಸಬಹುದಾಗಿದೆ. ಬಿಳಿಯ ವಸ್ತ್ರಕ್ಕೆ ಹೇಗೆ ಯಾವ ಬಣ್ಣವೂ ಇರುವುದಿಲ್ಲವೋ, ಮಕ್ಕಳ ಹೃದಯವೂ ಹಾಗೆಯೇ ಸ್ವಚ್ಛವಾಗಿರುತ್ತದೆ. ಆದ್ದರಿಂದ ಈ ಅವಸ್ಥೆಯಲ್ಲಿ ಬಾಲಕರ ಶಿಕ್ಷಣಾದಿಗಳ ಮೇಲೆ ಗಮನ ಹರಿಸುವುದು ಪರಮ ಆವಶ್ಯಕವಾಗಿದೆ.

ಅನುಕರಣ ಶಕ್ತಿಯು ಮಕ್ಕಳಲ್ಲಿ ಜನ್ಮಜಾತವಾದುದರಿಂದ, ಅನುಕರಣ ಪ್ರವೃತ್ತಿಯಿಂದಲೇ ಅವರ ಶಿಕ್ಷಣ ಪ್ರಾರಂಭವಾಗುತ್ತದೆ. ಮಕ್ಕಳ ಬಾಲ್ಯಾವಸ್ಥೆಯು ಪ್ರಧಾನವಾಗಿ ಮಾತೆಯ ಮಡಿಲಿನಲ್ಲಿ ಕಳೆಯುತ್ತದೆ. ಅದು ತಿನ್ನುವುದು, ಆಡುವುದು, ಮಲಗುವುದು – ಎಲ್ಲ ತಾಯಿಯ ಮಡಿಲಿನಲ್ಲಿಯೇ. ಆದ ಕಾರಣ ಅದರ ಜೀವನದ ನಿರ್ಮಾಣ ತಾಯಿ ಕೈಯಲ್ಲೇ ಇದೆ. ಅವಳು ಇಚ್ಛಿಸಿದರೆ ತನ್ನ ಆಚರಣೆಗಳ ಮೂಲಕ ಮಗುವನ್ನು ಸದಾಚಾರಿ, ದೈವ ಭಕ್ತ, ಕರ್ತವ್ಯಪರಾಯಣ, ಶಾಂತ, ಧೀರ, ವೀರ ಹಾಗೂ ಗಂಭೀರನಾಗಿ ಮಾಡಬಲ್ಲಳು. ಅದಿಲ್ಲವೇ-ಅವನನ್ನು ಕಳ್ಳನೂ, ಲಫಂಗನೂ, ಪಾಪಿಯೂ, ಕಾಮಿಯೂ, ಕ್ರೋಧಿಯೂ, ಹೇಡಿಯೂ, ಡಾಂಭಿಕನೂ ಮುಂತಾದ ರೂಪಗಳಲ್ಲಿ ರೂಪಿಸಬಲ್ಲಳು. ವಿಶ್ವದ ಇತಿಹಾಸದಲ್ಲಿ ಇದುವರೆಗೆ ಎಷ್ಟು ಮಹಾಪುರುಷರಾಗಿ ಹೋಗಿದ್ದಾರೋ ಎಲ್ಲರೂ ಮಾತೆಯ ಕೊಡುಗೆಯೆಂದೇ ಹೇಳಬಹುದು.

ಮಾತೆಯ ಹೃದಯ ಸ್ನೇಹಮಯವಾದುದು. ಅವಳು ತನ್ನ ಸಾತ್ತ್ವಿಕ ಸ್ನೇಹದ ಮೂಲಕ ಮಗುವಿನ ಜೀವನದಲ್ಲಿ ಸರಸತೆಯನ್ನು ಉಂಟುಮಾಡುತ್ತಾಳೆ; ಆದರೆ ಒಳ್ಳೆಯದು-ಕೆಟ್ಟದ್ದು ಎಲ್ಲ ವಸ್ತುವಿಗೂ ಒಂದು ಎಲ್ಲೆಯಿದೆ. ಸ್ನೇಹವೂ ವಿವೇಕದ ಎಲ್ಲೆಯನ್ನು ಮೀರಿತೆಂದರೆ ಮುಂದೆ ಅದು ಘಾತುಕವಾಗುತ್ತದೆ. ಮಕ್ಕಳು ಕೆಡುವುದಕ್ಕೆ ಹೆಚ್ಚಾಗಿ ಇದೇ ಕಾರಣ. ವಿವಾಹವಾದ ಅನೇಕ ವರ್ಷಗಳ ನಂತರ ಸಂತಾನವಾಗುವುದು ಅಥವಾ ಅನೇಕ ಸಂತಾನಗಳು ಸತ್ತನಂತರ ಪುತ್ರನ ಜನನವಾಗುವುದು ಅಥವಾ ಅನೇಕ ಪುತ್ರಿಯರು ಜನಿಸಿದ ನಂತರ ಪುತ್ರನು ಜನಿಸುವುದು ಅಥವಾ ಒಬ್ಬ ಮಗನು ಜನಿಸಿದ ನಂತರ ಮತ್ತಾವ ಸಂತಾನವೂ ಆಗದಿರುವುದು, ಹಣದ ಪ್ರಾಬಲ್ಯವುಂಟಾದಾಗ ಸ್ವಾಭಾವಿಕವಾಗಿ ತಂದೆ-ತಾಯಿಯರು (ವಿಶೇಷವಾಗಿ ಮಾತೆಯು) ಮಗುವನ್ನು ಎಷ್ಟು ಪ್ರೀತಿಸುತ್ತಾಳೆಂದರೆ, ಮಗುವು ಹಗಲು-ರಾತ್ರಿ ಅವಳ ಮಡಿಲಲ್ಲಿ ಆಡುತ್ತಿರುವುದು ಕಂಡು ಬರುತ್ತದೆ. ಅದಕ್ಕೆ ನೆಲವನ್ನು ಮುಟ್ಟುವ ಅವಕಾಶವೇ ಸಿಗುವುದಿಲ್ಲ. ಇದರ ಪರಿಣಾಮವಾಗಿ ಮಗುವಿನ ಆರೋಗ್ಯ ಕೆಡುವುದಲ್ಲದೆ, ದುರ್ಬಲವಾಗಿ ಅದು ಹೆಳವನಂತಾಗುತ್ತದೆ. ಮಕ್ಕಳು ಹಟಮಾರಿಗಳಾಗುವುದಕ್ಕೂ ಈ ಅತಿಯಾದ ಸ್ನೇಹ ಪ್ರೀತಿಗಳು ಕಾರಣ. ಕೆಲವು ಮಾತೆಯರು ಸ್ನೇಹದ ಕಾರಣದಿಂದಾಗಿ ಮಕ್ಕಳನ್ನು ಶಿಕ್ಷಣಕ್ಕಾಗಿ ತಮ್ಮಿಂದ ಬೇರ್ಪಡಿಸುವುದಿಲ್ಲ. ಅವರು ನನ್ನ ಕಂದನ ವಯಸ್ಸಾದರೂ ಎಷ್ಟು? ಇನ್ನೂ ಹುಡುಗಾಟ ಹೋಗಿಲ್ಲ. ಇಡೀ ಜೀವನವೇ ಅವನ ಮುಂದಿದೆ, ಓದಿಕೊಳ್ಳುತ್ತಾನೆ, ಆತುರವೇನು? ಹಾಗೆ ಓದಲಿಲ್ಲ ಎಂದರೂ ಹಾನಿಯೇನು? ಯಾರಲ್ಲಿಯೂ ಭಿಕ್ಷೆ ಬೇಡ ಬೇಕಾಗಿಲ್ಲವಲ್ಲ! ದೇವರು ಕೊಟ್ಟಿದ್ದಾನೆ. ಇದರಿಂದಲೇ ಮಗುವು ಶಿಕ್ಷಣದಿಂದ ವಂಚಿತನಾಗುತ್ತಾನೆ ಮತ್ತು ಮುಂದೆ ಕಷ್ಟಕ್ಕೀಡಾಗುತ್ತಾನೆ. ಇನ್ನೇನು ಆಗಬಹುದೆಂದರೆ ಮಗನು ಕುಸಂಗದ ಕಾರಣ ಅಥವಾ ಬಾಲಚಪಲತೆಯಿಂದಾಗಿ ಬಗೆಬಗೆಯ ಅನುಚಿತ ಕಾರ್ಯಗಳನ್ನು ಮಾಡತೊಡಗುತ್ತಾನೆ. ಅಂದರೆ, ಮನೆಯ ಹೊರಗೆ ಅಲೆಮಾರಿಯಾಗಿ ಅಲೆಯುವುದು, ಗಾಳಿಪಟ ಹಾರಿಸುವುದು, ಪಕ್ಷಿಗಳು -ಜಂತುಗಳನ್ನು ಕಲ್ಲಿನಿಂದ ಹೊಡೆದು ಹಿಂಸಿಸುವುದು, ಇರುವೆ ಮೊದಲಾದವುಗಳನ್ನು ಕೈಯಿಂದ ಅಥವಾ ಕಾಲಿನಿಂದ ತಿಕ್ಕಿ ಸಾಯಿಸುವುದು, ಬೀಡಿ ಸೇದುವುದು, ಅಶ್ಲೀಲವಾದ ಶಬ್ದಗಳನ್ನಾಡುವುದು, ಮನೆಯಿಂದ ಹಣವನ್ನು ಕದ್ದು ಹೊರಗೆ ತಿಂಡಿ

ಪದಾರ್ಥಗಳನ್ನು ಕೊಂಡು ತಿನ್ನುವುದು- ಹೀಗೆ ಅನುಚಿತ ವ್ಯವಹಾರಗಳಲ್ಲಿ ತೊಡಗುತ್ತಾರೆ. ಇದರ ಅರಿವು ತಂದೆ-ತಾಯಿಗಳಿಗಿದ್ದರೂ ಮಗುವಿನ ಮೇಲಿನ ಸ್ನೇಹದಿಂದಾಗಿ ಅವರು ಅವನಿಗೆ ಏನೂ ಹೇಳುವುದಿಲ್ಲ; ಇಷ್ಟೇ ಅಲ್ಲ, ಬದಲಾಗಿ ಅವನ ಈ ಚೇಷ್ಟೆಗಳಿಂದ ಪ್ರಸನ್ನರಾಗುತ್ತಾರೆ. ಇದು ಘಾತುಕವಾದುದು. ಹೀಗೆ ಮಾಡುವುದು ಮಗುವಿನ ಬಗೆಗೆ ಸ್ನೇಹವೆನಿಸುವುದಿಲ್ಲ, ಅನ್ಯಾಯವೆನಿಸುತ್ತದೆ. ಇದರ ಪರಿಣಾಮವಾಗಿ ಮಗುವಿನ ಜೀವನ ಹಾಳಾಗುತ್ತದೆ.

ಪ್ರಕೃತಿಯ ಭೇದಗಳಿಗನುಗುಣವಾಗಿ ಇಂದಿನ ಕೆಲವು ಮಾತೆಯರಲ್ಲಿ ವಾತ್ಸಲ್ಯ-ಸ್ನೇಹಗಳ ಅಭಾವವಿರುವುದು ಕಂಡು ಬರುತ್ತದೆ. ಅಜ್ಞಾನಕ್ಕೆ ವಶರಾಗಿಯೋ ಅಥವಾ ಫ್ಯಾಶನ್‌ನ ಗುಲಾಮರಾಗಿಯೋ ಅವರು ತಮ್ಮ ವ್ಯಕ್ತಿಗತ ಐಶಾರಾಮಗಳಿಗೆ ಪ್ರಧಾನತೆಯನ್ನು ಕೊಡುತ್ತಾರೆ, ಮಕ್ಕಳ ಕಡೆಗೆ ಅಷ್ಟಾಗಿ ಗಮನಕೊಡುವುದಿಲ್ಲ. ಫ್ಯಾಶನ್ನಿನ ಗೊಂಬೆಗಳಾಗಿರುವ, ಇಂದಿನ ಶಿಕ್ಷಿತರೆಂದೆನಿಸಿಕೊಳ್ಳುವ ಕೆಲವು ನಾರಿಯರು ಸ್ತ್ರೀ-ಪುರುಷರ ಸಂಬಂಧವನ್ನು ಪಾಶವಿಕ ಮನೋವಿಕಾರದ ಪೂರ್ತಿಗಾಗಿರುವ ಸಾಧನಮಾತ್ರವೆಂದು ತಿಳಿದು, ಜನ್ಮಕೊಟ್ಟ ಕ್ಷಣದಿಂದಲೇ ಮಗುವನ್ನು ತಮ್ಮಿಂದ ಬೇರೆ ಮಾಡಿಬಿಡುತ್ತಾರೆ. ಮಗುವಿಗೆ ಹಾಲುಣಿಸುವುದು, ಲಾಲನೆ-ಪಾಲನೆ, ಶಿಕ್ಷಣ ನೀಡುವುದು ಮೊದಲಾದ ಎಲ್ಲ ಕಾರ್ಯಗಳೂ ದಾದಿಯ ಪಾಲಾಗುತ್ತವೆ. ಮಗುವಿನ ಜೀವನ ಯಾವ ರೀತಿಯಲ್ಲಿ ಸಾಗುತ್ತಿದೆಯೆನ್ನುವುದರ ಚಿಂತೆಯೂ ತಾಯಿಯಾದವಳಿಗಿರುವುದಿಲ್ಲ. ದಾದಿಯ ಭರವಸೆಯಿಂದಿರುವುದರಿಂದ ಅವರ ಎಲ್ಲ ರೀತಿಯ ಅವಗುಣಗಳು ಅನುಕರಣ ಶೀಲರಾದ ಮಕ್ಕಳಲ್ಲಿ ಬಂದುಬಿಡುತ್ತವೆ ಮತ್ತು ಮಗುವಿನ ಜೀವನ ಹಾಳಾಗುತ್ತದೆ. ಶ್ರೀಮಂತರ ಮಕ್ಕಳು ಕೆಡುವುದಕ್ಕೆ ಇದು ಒಂದು ದೊಡ್ಡ ಕಾರಣವಾಗಿದೆ.

ಎಷ್ಟೋ ತಾಯಿಯರು ಮಕ್ಕಳಿಗೆ ತಿನಿಸಿ-ಕುಡಿಸಿ ಅವರನ್ನು ಶಾಲೆಗೆ ಕಳುಹಿಸಿಬಿಟ್ಟರೆ ತಮ್ಮ ಕರ್ತವ್ಯವು ಮುಗಿಯಿತೆಂದು ತಿಳಿಯುತ್ತಾರೆ. ಮಗುವು ಶಾಲೆಯಲ್ಲಿ ಏನನ್ನು ಕಲಿಯುತ್ತದೆ, ಯಾರ ಸಂಪರ್ಕದಲ್ಲಿರುತ್ತದೆ, ಎಂತಹ ಹುಡುಗರೊಡನೆ ಶಾಲೆಗೆ ಹೋಗಿ-ಬರುತ್ತದೆ. ಮತ್ತು ಎಲ್ಲಿ ಏನೇನು ಮಾಡುತ್ತದೆ-ಇವೇ ಮೊದಲಾದವುಗಳನ್ನು ತಿಳಿಯಲು ಶ್ರಮವಹಿಸುವುದಿಲ್ಲ. ಇದರಿಂದಾಗಿ ತಾಯಿಗೇನೋ ಸ್ವಲ್ಪ ಅವಕಾಶವೂ ಮತ್ತು ಮಾನಸಿಕ ಸಮಾಧಾನವೂ ದೊರಕುವುದೇನೋ ನಿಜ. ಆದರೆ ಮಗುವಿನ

ಜೀವನ-ಧಾರೆ ಯಾವ ದಿಕ್ಕಿನಲ್ಲಿ ಹರಿಯುತ್ತಿದೆಯೆಂಬ ಅರಿವು ತಾಯಿಗಿರುವುದಿಲ್ಲ. ಅವಳು ಮಗುವು ಶಿಕ್ಷಿತನೂ, ಸುಸಂಸ್ಕೃತನೂ ಆಗಲೆಂದು ಅವನನ್ನು ಸ್ಕೂಲಿಗೆ ಕಳುಹಿಸುತ್ತಾಳೆ. ಆದ್ದರಿಂದ ಅವನ ಸುಧಾರಣೆಯಾಗುತ್ತಿದೆಯೆಂದೇ ತಿಳಿದಿರುತ್ತಾಳೆ; ಆದರೆ ನಿಜವಾಗಿ ಆಗುತ್ತಿರುವುದು ಮಗುವಿನ ಅಧಃಪತನ. ಇಂದಿನ ಶಿಕ್ಷಣದ ಯಾವ ದುಷ್ಪರಿಣಾಮ ಪ್ರತ್ಯಕ್ಷವಾಗಿದೆಯೋ, ಮತ್ತದರಿಂದ ಏನು ಚರಿತ್ರಪತನವಾಗುತ್ತಿದೆಯೋ- ಅದನ್ನು ನೋಡಿದಾಗ ಮಗುವನ್ನು ಸ್ಕೂಲಿಗೆ ಸೇರಿಸಿದ ತರುವಾಯದಿಂದ ತಂದೆ-ತಾಯಿಯರ ಜವಾಬ್ದಾರಿಯು ಇನ್ನೂ ಅಧಿಕವಾಗುತ್ತದೆಯೆನ್ನುವುದು ಸ್ಪಷ್ಟವಾಗುತ್ತದೆ, ಏಕೆಂದರೆ ಈ ಹಂತದಲ್ಲಿಯೇ ಮಕ್ಕಳು ವಿಪತ್ತಿಗೊಳಗಾಗುವ ಸಾಧ್ಯತೆಯಿರುವುದು ಹೆಚ್ಚಾಗಿ ಕಾಣುತ್ತದೆ. ಆದ್ದರಿಂದ ತಂದೆ-ತಾಯಿಯರು ಮಕ್ಕಳನ್ನು ಸ್ಕೂಲಿಗೆ ಸೇರಿಸಿಬಿಟ್ಟರೆ ತಮ್ಮ ಜವಾಬ್ದಾರಿ, ಕರ್ತವ್ಯಗಳು ಮುಗಿದುವೆಂದು ತಿಳಿಯಬಾರದು. ಬಾಲಕನ ಕಡೆಗೆ ಹೆಚ್ಚು ಸತರ್ಕರಾಗಿರಬೇಕು.

ತಂದೆ-ತಾಯಿಯರು ಮಕ್ಕಳನ್ನು ತೀರ ಅನುಶಾಸನದಲ್ಲಿಡುವುದು ಅವರ ಪತನಕ್ಕಿರುವ ಮೂರನೆಯ ಕಾರಣವಾಗಿದೆ. ದೊಡ್ಡಮರದ ನೆರಳಿನಲ್ಲಿರುವ ಸಸಿಯು ಬೆಳೆಯುವುದಿಲ್ಲ. ಹಾಗೆ ಬೆಳೆದರೂ ಹೇಗೆ ತೆರೆದ ಸ್ಥಾನದಲ್ಲಿ ಬೆಳೆಯಬೇಕೋ ಆ ರೀತಿಯಲ್ಲಂತೂ ಬೆಳೆಯುವುದಿಲ್ಲ. ಮಕ್ಕಳಿಗೂ ಇದು ಅನ್ವಯಿಸುತ್ತದೆ. ಹೆಚ್ಚು ಅನುಶಾಸನ ಎಲ್ಲಿರುತ್ತದೆಯೋ, ಸಣ್ಣ ಸಣ್ಣ ವಿಷಯಗಳಿಗೆ ಗದರಿಸಿ-ಬೆದರಿಸಲಾಗುತ್ತದೆಯೋ ಅಲ್ಲಿಯೇ, ಅವುಗಳ ಜೀವನವು ಕಳೆಗುಂದಲು ಪ್ರಾರಂಭವಾಗುತ್ತದೆ; ವಿಕಾಸೋನ್ಮುಖವಾದ ಪ್ರತಿಭೆ ನಷ್ಟವಾಗುತ್ತದೆ. ಮೊಗ್ಗು ಅರಳುವ ಮುನ್ನವೇ ಒಣಗಿಹೋಗುತ್ತದೆ. ಇದರ ಪರಿಣಾಮವಾಗಿ ಮಗುವು ಹೇಡಿಯೂ ಮತ್ತು ದುರ್ಬಲನೂ ಆಗುತ್ತಾನಲ್ಲದೆ ತನ್ನ ಚಾರಿತ್ರ್ಯಬಲವನ್ನು ಕಳೆದುಕೊಳ್ಳುತ್ತಾನೆ ಅಥವಾ ಹಟಮಾರಿಯಾಗಿ ಯಾರ ಮಾತನ್ನೂ ಲಕ್ಷ್ಯಕ್ಕೆ ತೆಗೆದುಕೊಳ್ಳುವುದಿಲ್ಲ. ಆದ್ದರಿಂದ ತಂದೆ - ತಾಯಿಯರು ಬಾಲಕನನ್ನು ಸಂಯಮದಲ್ಲಿರಿಸಲಿ ಆದರೆ ಹೆಚ್ಚು ಬೆದರಿಸುವುದು, ಗದರಿಸುವುದು ಸರಿಯಲ್ಲ. ಬಾಲಪ್ರವೃತ್ತಿಯ ಸ್ವಾಭಾವಿಕತೆ, ಸರಳತೆಯನ್ನೂ ತುಳಿದುಹಾಕಬಾರದು. ಏನನ್ನು ಹೇಳಬೇಕೋ, ತಿಳಿಸಬೇಕೋ ಅದನ್ನು ಸರಿಯಾದ ಕಾಲದಲ್ಲಿ ಪ್ರೇಮಪೂರ್ವಕವಾಗಿ ತಿಳಿಸಬೇಕು. ಹಾಗೆ ಅವಶ್ಯಕವಾದಲ್ಲಿ ಪ್ರೇಮದಿಂದ ಲಘುವಾಗಿ ಗದರಿಸಲಿ. ಇಲ್ಲವಾದಲ್ಲಿ ಘಾತದ ಬದಲು ಪ್ರತಿಘತವೇ ಆಗುವುದು ಸ್ವಾಭಾವಿಕ. ಗಿಡದ

ರಕ್ಷಣೆಗೆ ಬೇಲಿಯು ಹೇಗೆ ಆವಶ್ಯಕವೋ ಮತ್ತು ದೀಪ ಪ್ರಕಾಶವನ್ನು ಕೊಡಲು ಆವರಣವು ಹೇಗೆ ಬೇಕಾಗಿದೆಯೋ ಅದೇ ಪ್ರಕಾರವಾಗಿ ಪ್ರೇಮಪೂರ್ಣವಾದ ಮತ್ತು ವಿವೇಕದಿಂದ ಕೂಡಿದ ಅನುಶಾಸನವು ಆವಶ್ಯಕ. ವಿವೇಕಪೂರ್ಣವಾದ ಅನುಶಾಸನದಲ್ಲಿ ಮಕ್ಕಳನ್ನಿಟ್ಟು ಬೆಳೆಸಿದರೆ, ಆ ಬಗೆಯ ಸ್ವಾತಂತ್ರ್ಯದಿಂದ ಮಗುವಿನ ಗುಪ್ತ ಶಕ್ತಿಗಳ ವಿಕಾಸವಾಗುವಂತೆ ಬೇರೆ ಪ್ರಾಕಾರದಿಂದ ಆಗುವುದಿಲ್ಲ.

ಆಚರಣೆಯ ಶಕ್ತಿಯು ಅಪಾರವಾಗಿದೆ. ಆಚರಣೆಯ ಮೌನ ವ್ಯಾಖ್ಯಾನದಿಂದ ಮಾಡಲಾಗುವ ಮಹತ್ಕಾರ್ಯವನ್ನು, ಹೆಸರಾಂತ ಸುಧಾರಕ ವಿದ್ವಾಂಸರು ಹಗಲು-ರಾತ್ರಿ ಉಪದೇಶಿಸುತ್ತ, ಗಂಭೀರ ಹಾಗೂ ವಿವೇಚನಾ ಪೂರ್ಣ ಲೇಖನಗಳನ್ನು ಬರೆದು ಹಾಗೂ ಬೇರೆ ಪ್ರಕಾರದ ಶಿಕ್ಷಣ ವಿಧಿ ಗಳನ್ನನುಸರಿಸಿ ಮಾಡಲಾರರು. ಆಚರಣೆಯು ಒಂದು ಬಗೆಯ ದಿವ್ಯಶಕ್ತಿಯಾಗಿದೆ. ಅದು ಇತರರನ್ನು ತಮ್ಮ ಕರ್ತವ್ಯ-ನಿರ್ವಹಣೆಗೆ ಪ್ರೇರೇಪಿಸುತ್ತದೆ. ಇನ್ನು ಮಕ್ಕಳಂತೂ ಸ್ವಭಾವದಿಂದಲೇ ಅನುಕರಣೆ ಮಾಡುವವರಾಗಿರುತ್ತಾರೆ. ಆದ್ದರಿಂದ ತಂದೆ-ತಾಯಿಗಳು ತಮ್ಮ ಮಕ್ಕಳನ್ನು ಏನಾಗಬೇಕೆಂದು ಬಯಸುವರೋ, ಅದಕ್ಕನುಗುಣವಾಗಿ ತಾವು ಸ್ವತಃ ಆಚರಿಸಬೇಕು. (ಅವರ ಆಚರಣೆಯ ಆದರ್ಶಪ್ರಾಯವಾಗಿದ್ದರೆ ಮಾತ್ರ ಮಕ್ಕಳು ಅನುಕರಣಶಕ್ತಿಯಿಂದ ಗ್ರಹಿಸಿ ಆ ಆದರ್ಶಗಳನ್ನು ತಮ್ಮದಾಗಿಸಿಕೊಳ್ಳಬಲ್ಲರು.) ಲೋಹದ ಮೂರ್ತಿಗಳನ್ನು ಮಾಡಲು ಅಚ್ಚಿನ ಅಗತ್ಯವಿರುತ್ತದೆ. ಮಕ್ಕಳನ್ನು ಜೀವನದ ಅಚ್ಚಿನಲ್ಲಿ ಎರಕ ಹುಯ್ಯುವುದಕ್ಕೆ ಅವರ ತಂದೆ-ತಾಯಿಯರ ಜೀವನವೇ ಅಚ್ಚಿನ ಪಾತ್ರವನ್ನು ವಹಿಸುತ್ತದೆ. ಮಕ್ಕಳನ್ನು ಹೊಡೆಯುವುದು, ರೇಗುವುದು, ಬೇಸರಿಸುವುದು ಮುಂತಾದವುಗಳಿಂದ ಅವರನ್ನು ಸದಾಚಾರಿಗಳಾಗಿ ಮಾಡಲಾಗುವುದಿಲ್ಲ. ಸ್ವತಃ ತಾವು ಸದಾಚಾರಿಗಳಾಗುವುದರಿಂದ ಮಾತ್ರವೇ ಅವರನ್ನು ಸದಾಚಾರ ಸಂಪನ್ನರಾಗಿ ಮಾಡುವುದು ಸಾಧ್ಯ. ಸಂಯಮ ರಹಿತವಾದ ತಂದೆ-ತಾಯಿಯರು ತಮ್ಮ ಮಕ್ಕಳು ಪೂರ್ಣ ಸದಾಚಾರಿಗಳಾಗುವರೆಂದು ಆಶಿಸುವುದಾದರೆ ಅದು ದುರಾಶೆ ಮಾತ್ರವಾಗಿದೆ. ಆದಕಾರಣ ತಂದೆ-ತಾಯಿಯರು ಕಾಯಾ, ವಾಚಾ ಹಾಗೂ ಮನಸಾ - ಸಂಯಮ ಸಂಪನ್ನರಾಗಿದ್ದು ಎಚ್ಚರಿಕೆಯಿಂದ ಸದಾಚಾರ ಪರಾಯಣರಾಗಬೇಕು.

ಸಂತತಿಯು ಯೋಗ್ಯವಾಗಬೇಕಾದರೆ ತಾಯಿಯು ಸುಶಿಕ್ಷಿತಳಾಗಿರ ಬೇಕಾದುದು ಪರಮ ಆವಶ್ಯಕ. ಏಕೆಂದರೆ, ಸುಶಿಕ್ಷಿತಳೂ ಮತ್ತು ಚತುರಳೂ ಆದ

ಸ್ತ್ರೀ ಇರುವ ಮನೆಯ ಮಕ್ಕಳು ಚತುರರೂ, ಗುಣವಂತರೂ ಆಗಿರುವುದು ಕಂಡುಬಂದಿದೆ. ಹೆಣ್ಣುಮಕ್ಕಳ ಜೀವನವಂತೂ ಸಂಪೂರ್ಣವಾಗಿ ತಾಯಿಯನ್ನೇ ಅವಲಂಬಿಸಿದೆ.

ಈಗಾಗಲೇ ಉಲ್ಲೇಖಿಸಿರುವಂತೆ ಮಕ್ಕಳ ಹೃದಯದ ಮೇಲೆ ಚಿಕ್ಕ ಚಿಕ್ಕ ಘಟನೆಗಳ ಪ್ರಭಾವ ಬಹುಶೀಘ್ರವಾಗಿ ಬೀಳುತ್ತದೆ. ಸಾಮಾನ್ಯರಾಗಿ ಮಾತೆಯರು ಮಕ್ಕಳಲ್ಲಿ ಹೆದರುವ ಅಭ್ಯಾಸವನ್ನುಂಟುಮಾಡುವುದು ಕಂಡುಬಂದಿದೆ. ಹಾಲನ್ನು ಕುಡಿಯದಿರುವಾಗ, ಅಂಗಿಯನ್ನು ತೊಡದಿದ್ದಾಗ, ರಾತ್ರಿ ಬಹಳ ಹೊತ್ತು ಎಚ್ಚರವಾಗಿದ್ದಾಗ, ಕಾರಣವಿಲ್ಲದೆ ಅಳಲು ಪ್ರಾರಂಭಿಸಿದಾಗ ಅಥವಾ ಹೀಗೆಯೇ ಬೇರೇನಾದರೂ ಮಾಡತೊಡಗಿದಾಗ ಅವರು ಅದಕ್ಕೆ ಭೂತ, ಕಳ್ಳ, ಗೊಗ್ಗಯ್ಯ ಮೊದಲಾದವುಗಳ ಹೆದರಿಕೆಯನ್ನು ಪ್ರಯೋಗಿಸುತ್ತಾರೆ. ಇದರ ಪರಿಣಾಮವಾಗಿ ಮಗುವಿನದು ಹೆದರುವ ಸ್ವಭಾವವಾಗಿ ಬಿಡುತ್ತದೆ. ಈ ಭಯವು ಜೀವನ ಪರ್ಯಂತವಿದ್ದುಬಿಡುವ ಸಂಭವವಿರುತ್ತದೆ.

ಮಗುವಿನ ಓದು-ಬರಹ ಶಿಕ್ಷಣದ ಭಾರವೂ ತಾಯಿಯ ಮೇಲಿರಬೇಕು. ಶಾಲೆಗೆ ಸೇರುವವರೆಗೆ ಮಕ್ಕಳು ಆಡುತ್ತಲೇ ಇರುತ್ತಾರೆ, ಅವರಿಗೆ ಶಬ್ದಜ್ಞಾನ ವಾಗುವುದಿಲ್ಲವೆನ್ನುವುದು ಅನುಭವದ ಮಾತಾಗಿದೆ. ಇದು ಬಹಳ ಕೆಟ್ಟದ್ದು. ಮಗುವಿಗೆ ಪ್ರಜ್ಞೆಯುಂಟಾಗುತ್ತಲೇ ತಂದೆ-ತಾಯಿಯರು ಬಾಯಿ-ಪಾಠವನ್ನು ಪ್ರಾರಂಭಿಸಬೇಕು. ಯೂರೋಪ್ ದೇಶದಲ್ಲಿ ವಸ್ತುಪಾಠದ ಮುಖಾಂತರ ಮಕ್ಕಳಿಗೆ ಶಿಕ್ಷಣ ಕೊಡಲಾಗುತ್ತದೆ. ಮಕ್ಕಳಿಗೆ ಆಟಿಕೆಗಳೆಂದರೆ ಇಷ್ಟವಾದ್ದರಿಂದ ಆಟಿಕೆಗಳ ರೂಪದಲ್ಲಿ ಮರ ಅಥವಾ ಲೋಹದ ದಪ್ಪ ದಪ್ಪವಾದ ಅಕ್ಷರಗಳನ್ನು ಮಾಡಿ, ಅವುಗಳನ್ನು ತೋರಿಸುವುದರ ಮೂಲಕ ಬಾಲಕರಿಗೆ ವರ್ಣ-ಪರಿಚಯ ಮಾಡಿಸಲಾಗುತ್ತದೆ. ಭಾರತದಲ್ಲಿಯೂ ಈ ವಿಧಾನದ ಪ್ರಚಾರ ಪ್ರಾರಂಭವಾಗಿದೆ.

ಸಾಮಾನ್ಯವಾಗಿ ನಮ್ಮ ದೇಶದ ಹುಡುಗರು ವ್ಯಾವಹಾರಿಕ ಶಿಕ್ಷಣದಲ್ಲಿ ಶೂನ್ಯರಾಗುವುದು ಕಂಡು ಬಂದಿರುವ ವಿಷಯ. ದೊಡ್ಡವರಾಗಿ, ಶಿಕ್ಷಿತ ರಾದನಂತರವೂ ಅವರಲ್ಲಿ ಈ ಶಿಕ್ಷಣದ ಕೊರತೆ ಉಳಿದುಕೊಂಡಿರುತ್ತದೆ. ಇದರ ಜವಾಬ್ದಾರಿಯೂ ತಂದೆ-ತಾಯಿಯರದೇ ಆಗಿದೆ. ಅವರು ಸ್ನೇಹ ವಶರಾಗಿ ಮಗುವಿನಲ್ಲಿ ಕೆಟ್ಟ ಅಭ್ಯಾಸಗಳು ನೆಲೆಸಲು ಅನುವು ಮಾಡಿಕೊಡುತ್ತಾರೆ. ಮಗುವು ಹೊತ್ತು ಮೀರಿ ನಿದ್ರಿಸುತ್ತಿರುತ್ತದೆ, ಚಿಂದಿ - ಪಂದಿ ಬಟ್ಟೆಗಳನ್ನು ಕೂಡಾ

ಹಾಕುತ್ತಿರುತ್ತದೆ, ಪುಸ್ತಕಗಳನ್ನು ಹರಿದು ಹಾಕುತ್ತದೆ, ಎಲ್ಲೆಂದರಲ್ಲಿ ಉಗುಳುತ್ತದೆ, ಅಶ್ಲೀಲವಾದ ಮಾತುಗಳನ್ನಾಡುತ್ತದೆ, ಹತ್ತು ಜನರ ನಡುವೆ ಹೋಗಿ ಸೇರಲು ಸಂಕೋಚ ಪಡುತ್ತದೆ, ಏನಾದರೂ ಕೇಳಿದರೆ ಅಂಜಿಕೆ ಪಡುತ್ತದೆ ಹಾಗೂ ಹೇಗಾದರೂ ಓಡಿಹೋಗಲು ಪ್ರಯತ್ನಿಸುತ್ತದೆ ಅಥವಾ ಹಿರಿಯರನ್ನು ಅನಾದರಿಸುತ್ತದೆ, ಉದ್ದೇಶವಿಲ್ಲದೆ ಹರಟುತ್ತದೆ, ಮಾತನಾಡುತ್ತಿರುವ ವಯೋವೃದ್ಧರ ನಡುವೆ ತೂರಿ ಹೋಗುತ್ತದೆ, ಹೇಳಿದರೂ ಕೇಳದೆ ಅಣಕಿಸುತ್ತದೆ. ಆದರೂ ಅವರು ಏನೂ ಹೇಳುವುದಿಲ್ಲ, ಇದರ ಪರಿಣಾಮವಾಗಿ ಮಗುವಿನ ಸ್ವಭಾವ ಹಾಗೆಯೇ ಆಗುತ್ತದೆ ಮತ್ತದು ಜೀವನಪರ್ಯಂತ ದಡ್ಡ ಮತ್ತು ಉದ್ದಂಡನಾಗಿರುತ್ತದೆ. ಆದ್ದರಿಂದ ತಂದೆ-ತಾಯಿ ಸದಾ ಮಗುವು ಶಿಷ್ಟಾಚಾರ ಮತ್ತು ಸದಾಚಾರ ಸಂಪನ್ನನಾಗುವುದರ ಕಡೆಗೆ ಗಮನ ಕೊಡಬೇಕು.

ತಂದೆ-ತಾಯಿಯರು ತಮ್ಮ ಮಕ್ಕಳಲ್ಲಿ ಧಾರ್ಮಿಕ ಶಿಕ್ಷಣದ ಬೀಜವನ್ನು ಬಾಲ್ಯಾವಸ್ಥೆಯಲ್ಲಿಯೇ ಬಿತ್ತಬೇಕು. ಪ್ರತಿದಿನ ಬೆಳಗ್ಗೆ-ಸಂಜೆ ಮಕ್ಕಳನ್ನು ಜೊತೆಯಲ್ಲಿ ಕೂರಿಸಿಕೊಂಡು ಭಗವಂತನ ಗುಣಕೀರ್ತನ ಮಾಡುವುದು, ಭಗವಂತನನ್ನು ಕುರಿತ ಲಲಿತವಾದ ಪದಗಳನ್ನು ಹಾಡುವುದು ಹಾಗೂ ಭಗವಂತನ ದರ್ಶನಾರ್ಥವಾಗಿ ಮಂದಿರಕ್ಕೆ ಕರೆದುಕೊಂಡು ಹೋಗುವುದು- ಇವೇ ಮುಂತಾದುವು ಯೋಗ್ಯವಾದ ನೇರವಾದ ಉಪಾಯಗಳಾಗಿವೆ. ಮಕ್ಕಳಲ್ಲಿ ಕಥೆಗಳನ್ನು ಕೇಳುವ ಪ್ರವೃತ್ತಿಯು ಸಹಜವಾಗಿರುವದರಿಂದ ಅವರಿಗೆ ಭಕ್ತರ ಸಂಬಂಧವಾದ ಸುಂದರ ಹಾಗೂ ಆದರ್ಶ ಕಥೆಗಳನ್ನು ಹೇಳುವುದರ ಮೂಲಕ ಅವರಂತೆಯೇ ಆಗಬೇಕೆನ್ನುವ ಇಚ್ಛೆಯನ್ನುಂಟುಮಾಡಬೇಕು. ಮಕ್ಕಳ ಕೈಯಿಂದ ಪಶು-ಪಕ್ಷಿಗಳಿಗೆ ಮತ್ತು ದೀನರಿಗೆ ಅನ್ನ ಮತ್ತು ರೊಟ್ಟಿ ಮೊದಲಾದ ತಿನಿಸುಗಳನ್ನು ಕೊಡಿಸುವುದರಿಂದ ಅವರ ಹೃದಯದಲ್ಲಿ ದಯಾಭಾವ ಉಂಟಾಗಲು ಸಾಧ್ಯವಾಗುತ್ತದೆ. ಇದೇ ಪ್ರಕಾರ ಯೋಗ್ಯವಾದ ಆಚರಣೆಗಳ ಮುಖಾಂತರ ಹಾಗೂ ಸ್ಪಷ್ಟವಾಗಿ ತಿಳಿಯ ಹೇಳುವುದರ ಮೂಲಕ, ಯಾವ ರೀತಿಯ ಮುಚ್ಚು-ಮರೆಯಿಲ್ಲದೆ ಇರುವುದು ಯಾರ ವಸ್ತುವನ್ನೂ ಅವರಾಗಿಕೊಡದೆ ತೆಗೆದುಕೊಳ್ಳದಿರುವುದು, ವ್ಯರ್ಥವಾಗಿ ಜಗಳ ಕಾಯದಿರುವುದು, ಎಲ್ಲರನ್ನು ಆದರಿಸುವುದು, ಪ್ರೇಮದಿಂದ ನಗುತ್ತಾ ಮಾತನಾಡುವುದು ಮೊದಲಾದುವುಗಳ ಶಿಕ್ಷಣವೂ ಸಹ ಮಕ್ಕಳಿಗೆ ಬಾಲ್ಯದಿಂದಲೇ ತಂದೆ-ತಾಯಿಯವರ ಮೂಲಕ ದೊರಕಬೇಕು.

ಪರಿವಾರ, ಸಮಾಜ, ದೇಶ ಮತ್ತು ವಿಶ್ವದ ಭವಿಷ್ಯವು ಬಾಲಕರನ್ನು ಅವಲಂಬಿಸಿರುತ್ತದೆ. ಆದ್ದರಿಂದ ಅವರನ್ನು ಸುಶಿಕ್ಷಿತರನ್ನಾಗಿ ಮಾಡುವುದು ಎಷ್ಟು ಆವಶ್ಯಕ ಎಂಬುದನ್ನು ಹೇಳುವ ಅಗತ್ಯವಿಲ್ಲ. ತಾಯಿಯರು ತಮ್ಮ ಸ್ವರೂಪವನ್ನು ತಿಳಿದು ತಮ್ಮ ಕರ್ತವ್ಯಗಳಲ್ಲಿ ತೊಡಗಬೇಕು. ಒಬ್ಬ ವಿದ್ವಾಂಸನು ಹೇಳುವುದೇನೆಂದರೆ - ಒಬ್ಬ ಒಳ್ಳೆಯ ತಾಯಿಯು ನೂರಾರು ಶಿಕ್ಷಕರುಗಳಿಗೆ ಸಮಳು. ಅವಳು ಪರಿವಾರದ ಜನರ ಮನಸ್ಸನ್ನು ಆಕರ್ಷಿಸುವ ಸೂಜಿಗಲ್ಲು ಹಾಗೂ ಅವರ ಕಣ್ಣುಗಳ ಧ್ರುವ ತಾರೆಯಾಗಿದ್ದಾಳೆ.

□□

# ೧೩. ಯಾರೊಡನೆ ಹೇಗೆ ವ್ಯವಹರಿಸ ಬೇಕು?

ಅತ್ತೆ-ಮಾವ:-ಹಿಂದೂಶಾಸ್ತ್ರದ ಪ್ರಕಾರ ಅತ್ತೆ-ಮಾವಂದಿರು ವಾಸ್ತವವಾಗಿ ತಂದೆ-ತಾಯಿಗಿಂತ ಹೆಚ್ಚು ಪೂಜಾರ್ಹರು ಮತ್ತು ಶ್ರದ್ಧೆಗೆ ಪಾತ್ರರು. ಏಕೆಂದರೆ ಅವರು ಆತ್ಮನಿಗಿಂತಲೂ ಹೆಚ್ಚು ಪ್ರಿಯನಾದ ಪತಿಗೆ ಜನ್ಮಕೊಡುವ ತಂದೆ-ತಾಯಿಯರಾಗಿರುತ್ತಾರೆ. ತನ್ನ ಕೈಯಾರೆ ಅವರ ಸೇವೆ ಮಾಡುವುದು, ಅವರು ಪ್ರಸನ್ನರಾಗುವಂತೆ ಪ್ರಯತ್ನಿಸುವುದು, ಅವರ ಆಜ್ಞೆಯನ್ನು ಪಾಲಿಸುವುದು, ಅವರ ಅನುಚಿತವಾದ ಮಾತುಗಳನ್ನು ಸಹ ಸಹಿಸಿಕೊಳ್ಳುವುದು ನಿನ್ನ ಸ್ವಾಮಿಯನ್ನು ಲಾಲಿಸಿ-ಪಾಲಿಸಿ, ಮನುಷ್ಯನನ್ನಾಗಿ ಮಾಡಿರುವ ಅತ್ತೆ-ಮಾವಂದಿರು, ನಮ್ಮ ಸೊಸೆ-ಮಕ್ಕಳ ನಮ್ಮ ಆಜ್ಞೆಯನ್ನು ಪಾಲಿಸುವವರೂ ಮತ್ತು ನಮ್ಮ ಮನಸ್ಸಿಗೆ ವಿರುದ್ಧವಾಗಿ ಏನನ್ನೂ ಮಾಡದಿರುವವರಾಗಬೇಕೆಂದು ಬಯಸುವುದು ಸ್ವಾಭಾವಿಕವಾಗಿದೆ. ಅವರಿಗೆ ಬೇಸರವನ್ನುಂಟುಮಾಡುವ ಯಾವ ಕಾರ್ಯವನ್ನೂ ನೀನು ಮಾಡಬಾರದು. ಎಲ್ಲಿಗಾದರೂ ಹೋಗಬೇಕಾಗಿ ಬಂದಾಗ ಮೊದಲು ಅತ್ತೆಯನ್ನು ಕೇಳು. ಬಟ್ಟೆ-ಬರೆ ತರಿಸಬೇಕಾದಲ್ಲಿ ಪತಿಯೊಡನೆ ನೇರಾಗಿ ಹೇಳದೆ ಅವನ ಮುಖಾಂತರ ನೇರವಾಗಿ ತರಿಸದೆ, ಅತ್ತೆಯ ಮುಖಾಂತರ ತರಿಸಿಕೋ. ಅತ್ತೆಯನ್ನು ಕೇಳದೆ ಅಥವಾ ಅವರು ಬೇಡವೆಂದ ಯಾವ ಕಾರ್ಯವನ್ನೂ ಮಾಡಬಾರದು. ಹಣ-ಕಾಸಿನ ಲೆಕ್ಕ-ಪತ್ರ ಅತ್ತೆಯ ಬಳಿ ಇರಲಿ ಬಿಡು. ಪ್ರತಿದಿನ ಸ್ವಲ್ಪ ಸಮಯ ಅತ್ತೆಯ ಕಾಲುಗಳನ್ನು ಒತ್ತಬೇಕು. ಮತ್ತು ತಂದೆ-ತಾಯಿಯರಿಗೆ ಸರಿಕಾಣದ ಯಾವ ಕಾರ್ಯವನ್ನೂ ಪತಿಯು ಮಾಡದಂತೆ

ಮರ್ಯಾದೆಯಿಂದ ತಿಳಿಯಹೇಳಿ ತಡೆಯಬೇಕು. ನಿನ್ನ ಈ ಆಚರಣೆಗಳಿಂದ ಅವರು ಪ್ರಸನ್ನರಾಗುತ್ತಾರೆ. ವಾಸ್ತವವಾಗಿ ಅತ್ತೆ-ಮಾವಂದಿರನ್ನು ಸಾಕ್ಷಾತ್ ಲಕ್ಷ್ಮೀ-ನಾರಾಯಣರೆಂದು ತಿಳಿದು, ಶ್ರದ್ಧೆ-ಭಕ್ತಿಪೂರ್ವಕ ಅವರ ಸೇವೆ ಮಾಡಬೇಕು. ಸೇವೆ ಮತ್ತು ಸದ್‌ವ್ಯವಹಾರಗಳಿಂದ ಅವರ ಆಶೀರ್ವಾದವನ್ನು ನೀನು ಪಡೆಯುವಿಯಾದರೆ ನಿನಗೆ ಪರಮ ಕಲ್ಯಾಣ ಪ್ರಾಪ್ತವಾಗುವುದು.

ಭಾವ (ಗಂಡನ ಅಣ್ಣ):- ನಿನ್ನ ಪತಿಗಿಂತ ವಯಸ್ಸಿನಲ್ಲಿ ಯಾರು ಹಿರಿಯರಾಗಿದ್ದಾರೋ ಅವರನ್ನೂ ಭಗವಂತನು ಪೂಜನೀಯರನ್ನಾಗಿ ಮಾಡಿ ಕಳುಹಿಸಿದ್ದಾನೆ. ಅವರು ವಿದ್ಯಾ-ಬುದ್ಧಿಯಲ್ಲಿ ಕಡಿಮೆಯಿರಬಹುದು ಆದರೆ ನಿನ್ನ ಪಾಲಿಗೆ ಅವರು ಸಮ್ಮಾನ, ಆದರ ಮತ್ತು ಸೇವೆಗೆ ಪಾತ್ರರಾಗಿದ್ದಾರೆ. ಅವರ ಹಿತವನ್ನು ಬಯಸುವುದು, ಸೇವೆ ಮಾಡುವುದು ಮತ್ತವರಿಗೆ ಸುಖವುಂಟು ಮಾಡುವುದು ನಿನ್ನ ಧರ್ಮವಾಗಿದೆ.

ಮೈದುನ:- ಮೈದುನನನ್ನು ತಮ್ಮನೆಂದು ತಿಳಿದು ಅವನ ಹಿತಚಿಂತನೆ ಮಾಡುವುದು ಮತ್ತವನೊಡನೆ ಪವಿತ್ರವಾದ ಸದ್‌ವ್ಯವಹಾರ ಮಾಡಬೇಕು. ಅವನೊಡನೆ ತಮಾಷೆ ಮಾಡಬಾರದು. ಆಗಾಗ್ಗೆ ಗಂಡನೊಡನೆ ಹೇಳುವುದರ ಮೂಲಕ ಅವನ ಅಗತ್ಯಗಳ ಪೂರೈಕೆ ಮಾಡಿಸಬೇಕು. ಅದರಿಂದ ಪ್ರೇಮ ಹೆಚ್ಚುತ್ತದೆ.

ಓರಗಿತ್ತಿಯರು:- ಗಂಡನ ಅಣ್ಣನ ಹೆಂಡತಿಯನ್ನು ಅಕ್ಕನೆಂದೂ, ಮೈದುನನ ಹೆಂಡತಿಯನ್ನು ತಂಗಿಯೆಂದೂ ಭಾವಿಸಿ ಅವರ ಬಗೆಗೆ ಯಥಾ ಯೋಗ್ಯವಾದ ಆದರ, ಶ್ರದ್ಧೆ, ಸ್ನೇಹ ಮತ್ತು ಪ್ರೇಮವನ್ನು ಬೆಳೆಸಿಕೊಳ್ಳಬೇಕು. ತನ್ನ ಸ್ವಾರ್ಥವನ್ನು ಬಿಟ್ಟು ಅವರ ಸುಖಕ್ಕೆ ಪ್ರಯತ್ನಿಸಬೇಕು. ಅವರ ಮಕ್ಕಳನ್ನು ಹೆಚ್ಚಾಗಿ ಪ್ರೀತಿಸಿ ಅವರ ಊಟ-ಉಡಿಗೆ-ತೊಡಿಗೆಗಳ ಕಡೆಗೆ ಗಮನಹರಿಸಿ ಉತ್ತಮವಾದ ವಸ್ತುಗಳನ್ನು ಕೊಟ್ಟು ಅವರನ್ನು ಪ್ರೀತಿಸಿ-ಲಾಲಿಸಬೇಕು.

ನಾದಿನಿ:- ನಾದಿನಿಯು ನಿನ್ನ ಅತ್ತೆಯ ಮಗಳು, ಮೇಲಾಗಿ ನಿನ್ನ ಪತಿಯ ಸ್ವಂತ ಸೋದರಿ. ಅವಳನ್ನು ಮನಸಾರೆ ಆದರಿಸಿ ಸತ್ಕರಿಸಬೇಕಲ್ಲದೆ, ಅವಳು ವಿವಾಹಿತಳಾಗಿದ್ದರೆ ಅವಳಿಗೆ ಶಕ್ತಿಗನುಸಾರ ಕೇಳಿದ್ದನ್ನು ಕೊಡಬೇಕು. ಮಾತೆಯ ಮೇಲೆ ಮಗಳ ಅಧಿಕಾರ ವಿಶೇಷವಾಗಿರುವುದಲ್ಲದೆ, ಅವಳ ಮೇಲಿನ ಪ್ರೀತಿಯೂ ವಿಶೇಷವಾಗಿರುತ್ತದೆ. ಆದ್ದರಿಂದ ತಾಯಿಯ ಬಲದಿಂದಾಗಿ ಆ ನಾದಿನಿ ಹಾಗೂ ಪುತ್ರಿ, ಸ್ನೇಹದ ಕಾರಣದಿಂದಾಗಿ ಅವಳ ತಾಯಿ ಎಂದರೆ (ನಿನ್ನ ಅತ್ತೆ) ನಿನಗೆ

ಏನನ್ನಾದರೂ ಹೇಳಿದರೆ ಅಥವಾ ವ್ಯವಹಾರದಲ್ಲಿ ಒರಟುತನ ತೋರಿಸಿದರೂ ಕೂಡ ನೀನು ಪರಿಸ್ಥಿತಿಯನ್ನರಿತು ಅವರೊಡನೆ ಪ್ರೇಮದಿಂದ ಸದ್ವ್ಯವಹಾರವನ್ನೇ ಮಾಡಬೇಕು.

**ಕೆಲಸಮಾಡುವವರು:-** ಇವರ ಬಗೆಗೆ ವಿಶೇಷವಾದ ಪ್ರೀತಿ ಮತ್ತು ಆದರವಿಡಬೇಕು. ಆ ಬಡಪಾಯಿಗಳು ನಿನ್ನ ಸೇವೆಮಾಡುತ್ತಾರೆ. ನಿನ್ನ ಮುಂದೆ ಬಾಯಿಬಿಚ್ಚಿ ಹೇಳಲು ಸಂಕೋಚ ಪಡುತ್ತಾರೆ. ಅವರಿಗೆ ಕಾಲಕ್ಕೆ ಸರಿಯಾಗಿ ಒಳ್ಳೆಯ ಅನ್ನಾಹಾರಾದಿಗಳನ್ನು ಕೊಡಬೇಕು. ರೋಗರುಜಿನಾದಿಗಳಲ್ಲಿ ಪರಿಹಾರ ಕಾರ್ಯಗಳನ್ನು ಮಾಡಬೇಕು. ನಿನ್ನ ವ್ಯವಹಾರದಿಂದ ಅವರ ಮನಸ್ಸಿನಲ್ಲಿ ನಾವು ಈ ಪರಿವಾರದ ಸದಸ್ಯರು ಎನ್ನುವ ಅನಿಸಿಕೆ, ಮೇಲಾಗಿ ನಾವು ಅನ್ಯರಲ್ಲ, ಎನ್ನುವ ಹಾರ್ದಿಕ ಭಾವನೆ ಬೇರೂರಬೇಕು. ಅವರು ನಿನ್ನ ಮನೆಯನ್ನು ತಮ್ಮ ಮನೆಯೆಂದೂ, ನಿನ್ನ ಲಾಭ-ಹಾನಿಗಳನ್ನು ತಮ್ಮದೇ ಲಾಭ-ಹಾನಿಗಳೆಂದೂ ತಿಳಿಯತೊಡಗಿದಾಗ ನಿನ್ನ ಜೀವನದ ಭಾರ ಬಹಳಷ್ಟು ಹಗುರವಾಗುತ್ತದೆ. ನೀನು ಯಾವಾಗಲಾದರೂ ಗದರಿಸಿ ಸಿಟ್ಟುಮಾಡಿದರೂ ಕೂಡ ನಮ್ಮ ಒಳ್ಳೆಯದಕ್ಕೇ ಗದರಿಸುತ್ತಿದ್ದಾರೆ. ಎಂದು ಅವರು ತಿಳಿಯುವರು. ನೌಕರರೊಡನೆ ದಿನವೆಲ್ಲಾ ಜಗಳ- ಕದನಕ್ಕಿಳಿಯುವುದಂತೂ ನೀಚತನವಾಗಿದೆ.

**ಅತಿಥಿ-ಅಭ್ಯಾಗತರು:-** ಸೇವೆಯಾದರೋ ನಾರಿಯರ ಸ್ವಭಾವಿಕ ಗುಣವಾಗಿದೆ. ಅತಿಥಿ-ಅಭ್ಯಾಗತರ ಶಾಸ್ತ್ರಸಮ್ಮತವಾದ ಸೇವೆ ಮಾಡುವುದರಿಂದ ಮಹತ್ತರವಾದ ಪುಣ್ಯ ಹಾಗೂ ನಿಷ್ಕಾಮ ಸೇವೆಮಾಡಿದರೆ ಭಗವಂತನ ಪ್ರಾಪ್ತಿ ಮತ್ತು ಲೋಕದಲ್ಲಿ ಯಶಸ್ಸು ಉಂಟಾಗುತ್ತದೆ. ಲುಚ್ಚ-ಲಫಂಗರಿಂದ ಯಾವಾಗಲೂ ದೂರವಿರಬೇಕಲ್ಲದೆ ಒಂಟಿಯಾಗಿ ಯಾವ ಪುರುಷನನ್ನೂ ಸಂಧಿಸಲೇಬಾರದು.

**ಆತ್ಮೀಯ ಸ್ವಜನರು:-** ಪರಿವಾರದ ಯಾರಾದರೂ ನೆಂಟರಿಷ್ಟರು ಕೆಲವು ದಿನಗಳಿಗಾಗಿ ಮನೆಗೆ ಬಂದಲ್ಲಿ ಭಾರವೆಂದು ಭಾವಿಸದೆ ಅವರನ್ನು ಆದರಿಸಿ ಸತ್ಕರಿಸಬೇಕು. ತಮ್ಮ ಮನೆಗಳಿಗೆ ಹಿಂದಿರುಗುವಾಗ ಸುಂದರವಾದ ಭಾವಗಳೊಡನೆ ಹಿಂದಿರುಗುವಂತೆ ನೀನು ಅವರೊಡನೆ ವ್ಯವಹರಿಸಬೇಕು. ದೂರಸ್ಥರಾದ ಆತ್ಮೀಯ ಸ್ವಜನರೊಡನೆ ಗೃಹಸ್ಥರು ಹೇಗೆ ಸುಂದರ ಆದರ್ಶದಿಂದ ಕೂಡಿದ ಮಧುರ ವ್ಯವಹಾರ ಮಾಡಬೇಕೆನ್ನುವ ಶಿಕ್ಷಣ ಅವರಿಗೆ ದೊರಕುವಂತೆ ನಿನ್ನ ವ್ಯವಹಾರವಿರಬೇಕು. ಎಳ್ಳಷ್ಟು ಅವರನ್ನು ಅನಾದರಿಸಿದರೂ ನಿನಗದು ಜೀವನ ಪರ್ಯಂತ ಕಳಂಕ ತರುವ ಮಾತಾಗುತ್ತದೆ.

**ವಿಪತ್ತಿಗೊಳಗಾದ ಸ್ವಜನರು:-** ಯಾರಾದರೂ ಅಸಹಾಯ, ದುರದೃಷ್ಟ ವ್ಯಕ್ತಿಯು ದಾರಿದ್ರ್ಯಕ್ಕೆ ಬಲಿಯಾಗಿ ಅಥವಾ ಯಾವುದಾದರೂ ವಿಪತ್ತಿಗೆ ಸಿಕ್ಕಿಕೊಂಡು ಯಾವಾಗ ತನ್ನ ಯಾವುದಾದರೂ ಆತ್ಮೀಯರ ಸ್ವಜನರ ಮನೆಗೆ ಹೋದಾಗ, ಅಂತಹ ಪರಿಸ್ಥಿತಿಯಲ್ಲಿ ಅವರುಗಳನ್ನು ಯಥಾಶಕ್ತಿ, ಸತ್ಕರಿಸದೆ ಅಸಡ್ಡೆಮಾಡುವುದು ಕಂಡುಬರುತ್ತದೆ. ಇದು ಅತಿ ನಿಷ್ಠುರವಾದ ಮತ್ತು ಮಹಾನ್ ಅಧರ್ಮಕ್ಕೆ ಸೇರಿದ ವ್ಯವಹಾರವೇ ಸರಿ. ಸಮಯ ಬದಲಾದಾಗ ನಿನಗೂ ಇದೇ ಗತಿಯಾಗ ಬಹುದೆಂಬುದನ್ನು ನೆನಪಿಡಬೇಕು. ಹೀಗೆ ತಿಳಿದು ನಿನ್ನ ಶಕ್ತಿಪೂರ್ತ, ನಮ್ರಭಾವದಿಂದ ಅವರುಗಳಿಗೆ ಸಹಾಯ ಮಾಡಬೇಕು. ವಿಪತ್ಕಾಲದಲ್ಲಿ ನೂರರಷ್ಟು ಸ್ನೇಹವನ್ನು ಮಾಡಬೇಕೆಂದು ಶ್ರುತಿಯೂ, ಸಂತರೂ ಹೇಳುತ್ತಾರೆ.

**ನೆರೆಹೊರೆಯವರು:-**ನೆರೆಹೊರೆಯವರನ್ನು ತನ್ನ ಸದ್‌ವ್ಯವಹಾರದಿಂದ ತನ್ನ ಆಪ್ತಮಿತ್ರರನ್ನಾಗಿ ಮಾಡಿಕೊಳ್ಳುವುದು ಧರ್ಮವಂತೂ ಆಗಿದೆ, ಸ್ವಾರ್ಥವೂ ಆಗಿದೆ. ಮಿತ್ರರಾದ ನೆರೆ-ಹೊರೆಯವರಿಂದ ಕೆಟ್ಟಕಾಲದಲ್ಲಿ ಹೆಚ್ಚಿನ ನೆರವು ದೊರಕುತ್ತದೆ ಮತ್ತು ವೈರಿಗಳಾದ ನೆರೆ-ಹೊರೆಯವರಿಂದ ವಿಪತ್ತು ಹೆಚ್ಚುತ್ತದೆ. ಆದಕಾರಣ ಅವರ ಬಗೆಗೆ ಸದಾ ಸಮ್ಮಾನ, ಸತ್ಯ, ಪ್ರೇಮ, ಮತ್ತು ಹಿತಕರವಾದ ಕಾರ್ಯಮಾಡುವುದರಿಂದ ವೈರಿಗಳೂ ಸಹ ನಮ್ಮವರಾಗಿಬಿಡುತ್ತಾರೆ.

❑❑

# ೧೪. ಸೊಸೆ ಹಾಗೂ ಅತ್ತಿಗೆಯೊಡನೆ ಅತ್ತೆ-ನಾದಿನಿಯ ವ್ಯವಹಾರ

ಇತರರೊಡನೆ ಒಳ್ಳೆಯ ವ್ಯವಹಾರ ಮಾಡುವ, ಗುಣವಂತೆಯಾದ ಅತ್ತೆಯು ಸೊಸೆಯರೊಡನೆ ಕೆಟ್ಟ ವ್ಯವಹಾರ ಮಾಡುವುದು ಕಂಡುಬಂದಿದೆ. ಮೊಟ್ಟಮೊದಲು ಸೊಸೆಯು ಮಾವನ ಮನೆಗೆ ಹೋದಾಗ ಅವಳಿಗೆ ನಾಚಿಕೆ ಯಿಂದಾಗಿ ಬಹಳ ಅನಾನುಕೂಲಗಳಾಗುತ್ತವೆ. ಮಾವನ ಮನೆಯಲ್ಲಿ ಯಾರ ಸ್ವಭಾವ ಹೇಗಿದೆಯೆಂಬುದು ಅವಳಿಗೆ ತಿಳಿಯದು. ಮನಸ್ಸಿಗೆ ಬಹಳ ಸಂಕೋಚವಾಗುತ್ತದೆ. ಕಾಯಿಲೆ ಬೀಳಲಿ, ತಲೆ-ಹೊಟ್ಟೆ ನೋಯಲಿ ಸಂಕೋಚಕ್ಕೆ ವಶಳಾಗಿ ಏನೂ ಹೇಳುವುದಿಲ್ಲ. ಹೊಸಮನೆ, ಸ್ನೇಹದಿಂದ ಪಾಲಿಸುವ ತಾಯಿ - ತಂದೆಯರಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅವಳಿಂದ ತಪ್ಪುಗಳೂ

ಆಗಿಬಿಡುತ್ತವೆ. ಆದ್ದರಿಂದ ಆ ಏನೂ ಅರಿಯದ ಹುಡುಗಿಯ ಮೇಲೆ ದಯೆಯಿಟ್ಟು ಅವಳ ಸುಖ-ದುಃಖಗಳ ಕಡೆಗೆ ಗಮನ ಹರಿಸುವುದು ಅತ್ತೆಯ ಕರ್ತವ್ಯವೂ, ಧರ್ಮವೂ ಆಗಿರುತ್ತದೆ. ಸೊಸೆಯ ಯಾವುದಾದರೂ ತಪ್ಪನ್ನು ನೆಪವಾಗಿಸಿಕೊಂಡು ರಣಚಂಡಿಯಾಗುವುದಾಗಲೀ, ಅವಳ ತಾಯಿ - ತಂದೆಯರನ್ನು ಬಯ್ಯುವುದಾಗಲೀ ಮಾಡಬಾರದು. ತನ್ನ ಮಗಳಿಗೇ ಮಾವನ ಮನೆಯಲ್ಲಿ ಇಂತಹ ವ್ಯವಹಾರವು ಪ್ರಾಪ್ತವಾದಲ್ಲಿ ಅವಳಿಗೆಷ್ಟು ದುಃಖವಾಗಬಹುದು ಮತ್ತು ತನಗೆ ಅದು ತಿಳಿದಾಗ ತನ್ನ ಮನಸ್ಸಿಗೆ ಎಷ್ಟು ವೇದನೆಯಾಗಬಹುದು ಎಂದು ಯೋಚಿಸಬೇಕು. ಇದೇ ರೀತಿ ಇವಳ ತಂದೆ-ತಾಯಿಗಳಿಗೆ ತಿಳಿದರೆ ಎಷ್ಟು ದುಃಖವಾದೀತು! ಇಲ್ಲಿ ಇವಳ ಸಹಾಯಕರಾರೂ ಇಲ್ಲ, ತನ್ನ ಮನಸ್ಸಿನ ಅಳಲನ್ನು ಯಾರಲ್ಲಿ ಹೇಳಬೇಕು? ಅತ್ತೆಯನ್ನನುಸರಿಸಿ ಅವಳ ನಾದಿನಿಯೂ ತನ್ನ ಅತ್ತಿಗೆಯೊಡನೆ ಕೆಟ್ಟ ವ್ಯವಹಾರ ಮಾಡತೊಡಗುತ್ತಾಳಾದರೆ, ಆ ಬಡಪಾಯಿಯ ದುಃಖವಂತೂ ಬಹಳವಾಗಿ ಹೆಚ್ಚುತ್ತದೆ. ಅಲ್ಲಲ್ಲಿ ತಾಯಿಯ ಮಾತನ್ನು ಕೇಳಿ ಸೊಸೆಯಾದವಳ ಗಂಡನೂ ಪತ್ನಿಯನ್ನು ಗದರಿಸುವುದು, ಹೊಡೆಯುವುದು ಸಾಮಾನ್ಯವಾಗಿ ಹೋಗಿದೆ. ಇಂತಹ ಸ್ಥಿತಿಯಲ್ಲಿ ಅವಳ ಮಾನಸಿಕ ವೇದನೆ ಹೇಳತೀರದು. ಅಲ್ಲಲ್ಲಿ ಇಂತಹ ದುಃಖಕ್ಕೆ ಸಿಕ್ಕಿಬಿದ್ದ ಸೊಸೆಯರು ಆತ್ಮಹತ್ಯೆ ಮಾಡಿಕೊಂಡಿರುವುದೂ ಉಂಟು. ಆದ್ದರಿಂದ ಅತ್ತೆಯು ಸೊಸೆಯನ್ನು ತನ್ನ ಮಗಳನ್ನು ಪ್ರೀತಿಸುವುದಕ್ಕಿಂತಲೂ ಹೆಚ್ಚು ಪ್ರೀತಿಸಬೇಕು. ತನ್ನ ಸದ್-ವ್ಯವಹಾರಗಳಿಂದ ಅವಳ ಮನಸ್ಸಿನಲ್ಲಿ, ನನ್ನ ಅತ್ತೆ ಸಾಕ್ಷಾತ್ ಲಕ್ಷ್ಮೀದೇವಿಯಾಗಿದ್ದಾಳೆ. ನನ್ನನ್ನು ತಾಯಿಗಿಂತ ಮಿಗಿಲಾಗಿ ಪ್ರೀತಿಸುತ್ತಾಳೆ ಎಂಬ ಭಾವನೆಯನ್ನು ಮೂಡಿಸಬೇಕು. ಸೊಸೆಯು ಲಕ್ಷ್ಮೀ ಅವಳು ನನ್ನ ಕುಲದ ರಕ್ಷಣೆಮಾಡುತ್ತಾಳೆ, ಉತ್ತಮವಾದ ಸಂತಾನವನ್ನು ಹೆತ್ತು ಪತಿಯ ಹೆಸರನ್ನು ಅಮರವಾಗಿಸುತ್ತಾಳೆಂದು ತಿಳಿಯಬೇಕು.

ತನ್ನ ತಂದೆಯ ವಂಶದ ಕುಲದೀಪ ಪ್ರಾಯನಾಗಿರುವ ಅಣ್ಣನ ಪತ್ನಿಯಾದ ಕಾರಣ ಅತ್ತಿಗೆಯು ನನಗೆ ಅತ್ಯಂತ ಆದರಕ್ಕೆ ಪಾತ್ರಳೆಂದು ನಾದಿನಿಯು ತಿಳಿಯಬೇಕು. ಅವಳೊಡನೆ ಹೇಳುವುದಕ್ಕೆ ಸಂಕೋಚ ಪಡುತ್ತಾಳೆ. ಆದ್ದರಿಂದ ನಾದಿನಿಯು ಅತ್ತಿಗೆಯನ್ನು ತನ್ನ ಸ್ವಂತ ಸೋದರಿಯೆಂದು ಭಾವಿಸಿ ಅವಳನ್ನು ಪ್ರೀತಿಸಿ ಅವಳ ಸುಖ-ದುಃಖಗಳನ್ನು ವಿಚಾರಿಸಬೇಕು. ಅತ್ತಿಗೆಯಿಂದ ಯಾವುದಾದರೂ ತಪ್ಪು ಸಂಭವಿಸಿದರೆ ಅದನ್ನು ತಾಯಿಗೆ ತಿಳಿಸದೆ ಹಾಗೂ

ತಾಯಿಯು ಕೋಪಿಸಿದರೆ ತಿಳಿಯಹೇಳಿ ಶಾಂತವಾಗಿಸಬೇಕು. ನನ್ನ ಮಾವನ ಮನೆಯಲ್ಲಿ ನಾನು ನಾದಿನಿಯಿಂದ ಯಾವ ರೀತಿಯ ವ್ಯವಹಾರವನ್ನು ಬಯಸುತ್ತೇನೋ, ಅದೇ ಪ್ರಕಾರ ಇಲ್ಲಿ ನಾನು ನನ್ನ ಅತ್ತಿಗೆಯ ಜೊತೆ ವ್ಯವಹಾರ ಮಾಡಬೇಕು ಎಂಬುದನ್ನು ಅವಳು ಮನಗಾಣಬೇಕು.

ಅತ್ತೆ-ನಾದಿನಿಯರ ಕೆಟ್ಟ ನಡವಳಿಕೆಯ ಕಾರಣದಿಂದಾಗಿ ಸೊಸೆಯ ಮನಸ್ಸು ಎಷ್ಟು ಖಿನ್ನವಾಗುತ್ತದೆಂದರೆ ಕೆಲವೊಮ್ಮೆ ಚಿಕ್ಕ ವಯಸ್ಸಿನ ಸೊಸೆಯರು ಹಿಸ್ಟೀರಿಯಾ ಎನ್ನುವ ಮನೋರೋಗಕ್ಕೆ ತುತ್ತಾಗಿ ಮನಸ್ಸಿನಲ್ಲಿಯೇ ಅತ್ತೆ-ನಾದಿನಿಗೆ ಶಾಪಕೊಡುತ್ತ ಅಕಾಲದಲ್ಲಿ ಸತ್ತುಹೋಗುತ್ತಾರೆ. ಯಾವ ನವವಧುಗಳಿಗೆ ಒಳಗೊಳಗೇ ಮನಸ್ಸು ಹಿಂಡಿಕೊಂಡು ದುಃಖ-ಕ್ಲೇಶಗಳನ್ನು ಸಹಿಸಿಕೊಳ್ಳಬೇಕಾಗಿ ಬರುತ್ತದೆಯೋ ಅವರಿಗೆ ಸಾಮಾನ್ಯವಾಗಿ ಹಿಸ್ಟೀರಿಯಾ ಉಂಟಾಗುವ ಹೆಚ್ಚು ಸಂಭವಗಳಿವೆ. ಈ ಮಾನಸಿಕ ದುಃಖದಿಂದ ಅವರ 'ರಜ-ವ್ಯವಸ್ಥೆ' ಕೆಟ್ಟು ಹೋಗುವುದಲ್ಲದೆ 'ಹಿಸ್ಟೀರಿಯಾ' ಅಥವಾ ಮಂದಾಗ್ನಿಯುಂಟಾಗುತ್ತದೆ. ಒಂದು ವೇಳೆ ಸೊಸೆಯು ಉಗ್ರಸ್ವಭಾವದವಳಾದಲ್ಲಿ (ಮೊದಲು ಉಗ್ರಸ್ವಭಾವವಾಗಿಲ್ಲದಿದ್ದರೂ ಅತಿ ತಿರಸ್ಕಾರ ಮತ್ತು ದುರ್ವ್ಯವಹಾರ ಪ್ರಾಪ್ತವಾದ ಮೇಲೆ ಅವಳಲ್ಲಿ ಉಗ್ರತೆ ಜಾಗ್ರತವಾಗುತ್ತದೆ) ಮನೆಯಲ್ಲಿ ಹಗಲು-ರಾತ್ರಿ ಕಲಹ ನಡೆದಿರುತ್ತದೆ. ಒಂದೆಡೆ ಅತ್ತೆ ಅಳುತ್ತಾಳೆಯಾದರೆ ಇನ್ನೊಂದೆಡೆ ಸೊಸೆ, ಇಂತಹ ಸನ್ನಿವೇಶಗಳಲ್ಲಿ ಬಡಪಾಯಿ ಪತಿಯ ದುರ್ಗತಿಯಾಗುತ್ತದೆ. ಅವನು ಒಂದು ವೇಳೆ ತಾಯಿಯ ಪಕ್ಷವಹಿಸಿ ಪತ್ನಿಗೆ ಏನನ್ನಾದರೂ ಹೇಳುತ್ತಾನಾದರೆ ಅವಳು ಆತ್ಮಹತ್ಯೆಗೆ ಸಿದ್ಧವಾಗುತ್ತಾಳೆ ಮತ್ತು ತಾಯಿಗೆ ಹೇಳುತ್ತಾನಾದರೆ ಇವಳು ಕೋಪಿಸಿಕೊಳ್ಳುತ್ತಾಳೆ ಮತ್ತು ಪತ್ನಿಯಲ್ಲಿ ಜಗಳವಾಡುವ ಸಾಹಸ ಹೆಚ್ಚುತ್ತದೆ. ತಾತ್ಪರ್ಯವೇನೆಂದರೆ - ಮನೆಯ ಸುಖ-ಶಾಂತಿ ಕೆಟ್ಟು ಹೋಗುತ್ತದೆ. ಆದ್ದರಿಂದ ಅತ್ತೆ-ನಾದಿನಿಯರು, ಸೊಸೆ-ಅತ್ತಿಗೆಯೊಡನೆ ಉತ್ತಮವಾದ ವ್ಯವಹಾರ ಮಾಡಬೇಕು. ತಾವು ಇತರರಿಂದ ಎಂತಹ ವ್ಯವಹಾರವನ್ನು ಬಯಸುತ್ತಾರೆಯೋ ಅಂತಹ ವ್ಯವಹಾರವನ್ನು ಅವರು ಇತರರೊಡನೆ ಸ್ವಯಂ ಮಾಡಬೇಕು. ಇದೇ ನಿಜವಾದ ಅರ್ಥದಲ್ಲಿ ಧರ್ಮವಾಗುತ್ತದೆ. **'ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್'** ಎಂದರೆ ತನ್ನ ಮನಸ್ಸಿಗೆ ಎಂತಹ ವ್ಯವಹಾರವು ಪ್ರತಿಕೂಲವಾಗಿರುತ್ತದೆಯೋ, ಅದನ್ನು ಇತರರೊಡನೆ ಎಂದಿಗೂ ಮಾಡಬಾರದು.

□□

# ೧೫. ನಾರಿಯ ಭೂಷಣಗಳು

**ಸೌಂದರ್ಯ:-** (೧) ಸುಂದರವರ್ಣ, ಅಂದವಾದ ಅಂಗ-ಪ್ರತ್ಯಂಗಗಳು, ಮನೋಹರವಾದ ನಡಿಗೆ, ದೃಷ್ಟಿ ಭಾವ-ಭಂಗಿ ಹಾಗೂ ಹಾವ-ಭಾವಗಳಲ್ಲಿ ಮನೋಹಾರಿಕೆ ಮತ್ತು ಮಾತಿನಲ್ಲಿ ಮಾಧುರ್ಯ- ಇವು- ಬಾಹ್ಯ- ಸೌಂದರ್ಯ ವೆನಿಸುತ್ತವೆ.

(೨) ಕ್ಷಮೆ, ಪ್ರೇಮ, ಔದಾರ್ಯ, ನಿರಭಿಮಾನ, ವಿನಯ, ಸಹಿಷ್ಣುತೆ, ಸಮತ್ವ, ಶಾಂತಿ, ಧೈರ್ಯ, ವೀರತ್ವ ಪರದುಃಖಕಾತರತೆ, ಸತ್ಯ, ಸೇವೆ, ಅಹಿಂಸೆ, ಬ್ರಹ್ಮಚರ್ಯ, ಶೀಲ ಮತ್ತು ದೇವರಭಕ್ತಿ ಮೊದಲಾದ ಸದ್ಗುಣಗಳು ಹಾಗೂ ಸದ್ಭಾವಗಳು ಆಂತರಿಕ ಸೌಂದರ್ಯವೆನಿಸುತ್ತವೆ.

ಬಾಹ್ಯ ಹಾಗೂ ಆಂತರಿಕ ಸೌಂದರ್ಯಗಳೆರಡೂ ಆವಶ್ಯಕವೇ. ಆದರೆ ಬಾಹ್ಯಕ್ಕಿಂತ ಆಂತರಿಕ ಸೌಂದರ್ಯಕ್ಕೇ ಮಹತ್ತ್ವ ಅಧಿಕ. ರೂಪವತೀ ನಾರಿಯರು ತಮ್ಮ ರೂಪಕ್ಕೆ ಗರ್ವಪಡದೆ ತಮ್ಮ ಆಂತರಿಕ ಸದ್ಗುಣಗಳ ಹಾಗೂ ಸದ್ಭಾವಗಳ ಸೌಂದರ್ಯವನ್ನು ಹೆಚ್ಚಿಸಿಕೊಳ್ಳಬೇಕು.

**ಲಜ್ಜೆ:-** ಧರ್ಮ, ಶೀಲ ಮತ್ತು ಸಮಾಜದ ಪವಿತ್ರ ಸಂಪ್ರದಾಯಗಳ ವಿರುದ್ಧ ಏನನ್ನಾದರೂ ಮಾಡುವುದಕ್ಕೆ ಸಂಕಲ್ಪಿಸಿದಾಗ ಆಗುವ ಮಹತ್ತರವಾದ ಸಂಕೋಚ, ಅಂಗ ಸಂಕೋಚ ಮತ್ತು ಮಾತಿನ ಸಂಕೋಚ ಹಾಗೂ ಪುರುಷ ಸಮಾಜದ ಸಂಸರ್ಗದಿಂದ ತನ್ನನ್ನು ಕಾಪಾಡಿಕೊಳ್ಳಲು ಆಗುವ ದೃಷ್ಟಿಸಂಕೋಚ-ಇವುಗಳ ಹೆಸರೇ ಲಜ್ಜೆ. ಲಜ್ಜೆಯು ನಾರಿಯ ಸಹಜವಾದ ಭೂಷಣವಾಗಿದೆ ಮತ್ತಿದು ಶೀಲದಿಂದ ತುಂಬಿದ ಕಣ್ಣುಗಳಲ್ಲಿರುತ್ತದೆ. ರೋಗಿಗಳ ಮತ್ತು ಹಿರಿಯರ ಸೇವೆಯಲ್ಲಾಗಲೀ, ಕರ್ತವ್ಯ- ಪಾಲನೆಯಲ್ಲಾಗಲೀ ಲಜ್ಜೆಯನ್ನು ಮುಂದುಮಾಡಿಕೊಂಡು ತತ್ಪರಳಾಗದಿರುವುದು ಲಜ್ಜೆಯ ದುರುಪಯೋಗ ಹಾಗೂ ಮೂರ್ಖತನವಾಗಿದೆ. ಅಡೆ-ತಡೆಯಿಲ್ಲದೆ ಪುರುಷರ ಸಂಸರ್ಗದಲ್ಲಿ ನಿಸ್ಸಂಕೋಚದಿಂದ ಬೆರೆಯುವುದು, ತಿರುಗಾಡುವುದು ಲಜ್ಜೆಯ ನಿರಂಕುಶ ನಾಶವೇಸರಿ. ಇದು ನಾರಿಯ ಶೀಲಕ್ಕೆ ಅತ್ಯಂತ ಘಾತುಕವಾದುದು.

**ವಿನಯ:-** ಮಾತಿನಲ್ಲಿ, ವ್ಯವಹಾರದಲ್ಲಿ ಹಾಗೂ ಶಾರೀರಿಕ ಸಂಚಾಲನೆಯಲ್ಲಿ ಗರ್ವ, ಉಗ್ರತೆ, ಕಠೋರತೆ ಹಾಗೂ ದುಷ್ಟತನವನ್ನು ತ್ಯಾಗಮಾಡಿ ನಮ್ರತೆಯಿಂದ ಕೂಡಿ, ಸರಳವಾಗಿ, ಸ್ನೇಹಪೂರ್ಣವಾದ ಆದರ ಭಾವವುಳ್ಳವಳಾಗಿ ಹಾಗೂ ಮಧುರಭಾವ ಹೊಂದಿರುವುದು 'ವಿನಯ' ವೆನಿಸುತ್ತದೆ. ವಿನಯದ ಅರ್ಥ ಮುಖಸ್ತುತಿಯೆಂದಾಗಲೀ, ಹೇಡಿತನ

ವೆಂದಾಗಲೀ ಅಲ್ಲ. ದುಷ್ಟರನ್ನು ಬಗ್ಗು-ಬಡಿಯಲು ಕಠೋರತೆ ಮತ್ತು ಉಗ್ರತೆ ಅವಶ್ಯಕವೇ, ಆದರೆ ಗೃಹ, ಪರಿವಾರ ಹಾಗೂ ಸಾಂಸಾರಿಕ ಎಲ್ಲ ವ್ಯವಹಾರಗಳಲ್ಲಿ ನಾರಿಯು ಸದಾ ವಿನಯವೆಂಬ ಆಭರಣವನ್ನು ಧರಿಸಿಕೊಂಡಿರಬೇಕು.

**ಸಂಯಮ, ತಪ :-** ಶರೀರ, ಮನಸ್ಸು ಮತ್ತು ಮಾತನ್ನು ವಿಷಯಗಳ ಕಡೆಯಿಂದ ಸಾಧ್ಯವಾದಷ್ಟು ಹಿಮ್ಮೆಟ್ಟಿಸುವುದು ಮತ್ತವುಗಳನ್ನು ಸರ್ವಥಾ ಅನುಚಿತವಾದ ಹಾಗೂ ಕಲ್ಯಾಣಕಾರಿಯಲ್ಲದ ಕಾರ್ಯಗಳಲ್ಲಿ ತೊಡಗಿಸದಿರುವುದು 'ಸಂಯಮ' ಇದನ್ನೇ ತಪಸ್ಸೆಂದೂ ಹೇಳಬಹುದು. ಗೀತೆಯಲ್ಲಿ ಶ್ರೀಕೃಷ್ಣನು (೧) ದೇವ, ದ್ವಿಜ, ಗುರುಜನರ ಮತ್ತು ಜ್ಞಾನಿಗಳ ಪೂಜೆ, ಶಾರೀರಿಕ ಶುದ್ಧಿ, ಸರಳತೆ, ಬ್ರಹ್ಮಚರ್ಯ (ಪರ-ಪುರುಷ ಅಥವಾ ಪರ-ಸ್ತ್ರೀಯ ಸರ್ವಥಾ ತ್ಯಾಗ ಹಾಗೂ ಪತಿ-ಪತ್ನಿಯರಲ್ಲಿ ಶಾಸ್ತ್ರೋಕ್ತ ರೀತಿಯಲ್ಲಿ ಸೀಮಿತವಾದ ಸಂಸರ್ಗ) ಹಾಗೂ ಅಹಿಂಸೆ, (ಯಾರಿಗೂ ನೋವನ್ನುಂಟು ಮಾಡದಿರುವುದು) ಶಾರೀರಿಕ ತಪಸ್ಸಾಗಿದೆ. (೨) ಯಾರಿಗೂ ಗಾಬರಿಯನ್ನು ಉಂಟುಮಾಡದಿರುವ ಸತ್ಯವಾದ, ಪ್ರಿಯವಾದ ಹಾಗೂ ಹಿತಕಾರಿಯಾದ ಮಾತನ್ನಾಡುವುದು ಹಾಗೂ ಭಗವನ್ನಾಮದ ಜಪ ಮಾಡುವುದು ಮತ್ತು ಪರಮಾರ್ಥ-ಗ್ರಂಥಗಳನ್ನು ಓದುವುದು-ಇವು ವಾಣಿಗೆ ಸಂಬಂಧಿಸಿದ ತಪಸ್ಸಾಗಿವೆ ಮತ್ತು (೩) ಮನಸ್ಸಿನ ಪ್ರಸನ್ನತೆ, ಸೌಮ್ಯತೆ, ಮೌನ (ಬೇರಾವ ಚಿಂತೆಯನ್ನೂ ಮಾಡದೆ ಕೇವಲ ಭಗವಚ್ಚಿಂತನ ಪರಾಯಣನಾಗಿರುವುದು) ಮನಸ್ಸನ್ನು ತನ್ನ ವಶದಲ್ಲಿರಿಸಿಕೊಳ್ಳುವುದು ಮತ್ತು ಮನಸ್ಸು ಪವಿತ್ರ ಭಾವನೆಗಳಿಂದ ಕೂಡಿರುವುದು - ಇದು ಮಾನಸಿಕ ತಪಸ್ಸಾಗಿದೆ. ಶರೀರ, ಮನಸ್ಸು ಮತ್ತು ವಾಗ್ವ್ಯಾಪಾರಗಳನ್ನು ಕೆಟ್ಟಪ್ರವೃತ್ತಿಗಳಿಂದ ದೂರವಿರಿಸಿ (ಹಿಂದಕ್ಕೆಸರಿಸಿ) ಮೇಲೆ ಹೇಳಿದ ಸತ್ಪ್ರವೃತ್ತಿಗಳಲ್ಲಿ ತೊಡಗಿಸಿಡುವುದು ಸಂಯಮವೆನಿಸುತ್ತದೆ.

**ಸಂತೋಷ :-** ಪರರ ಸ್ವತ್ತಿಗೆ ಆಸೆಪಡದೆ, ಅಸಹಿಷ್ಣುತೆ, ಲೋಭ ಮತ್ತು ತೃಷ್ಣೆಗೆ ವಶವಾಗದೆ ಭಗವಂತನು ಇಟ್ಟಿರುವ ಸ್ಥಿತಿಯಲ್ಲಿ ಸಂತುಷ್ಟನಾಗಿರುವುದು ಸಂತೋಷವೆನಿಸುತ್ತದೆ. ಇದರಿಂದ ಮನಸ್ಸಿನ ತಾಪ ಅಡಗುತ್ತದೆ. ದ್ವೇಷ, ವಿಷಾದ ಮತ್ತು ಕ್ರೋಧದಿಂದ ರಕ್ಷಣೆಯಾಗುತ್ತದೆ ಅಲ್ಲದೆ ಪರಮ ಸುಖವು ಪ್ರಾಪ್ತವಾಗುತ್ತದೆ.

**ಕ್ಷಮೆ :-** ತನಗೆ ಕೆಟ್ಟದ್ದನ್ನು ಮಾಡುವವರ ವ್ಯವಹಾರವನ್ನು ಸಹಿಸಿಕೊಳ್ಳುವುದು ಅಕ್ರೋಧವೆನಿಸುತ್ತದೆ. ಅವನಿಗೆ ತನ್ನಿಂದಾಗಲೀ,

ಇತರರಿಂದಾಗಲೀ ಪ್ರತಿಯಾಗಿ ದುಃಖವುಂಟಾಗದಿರಲಿ ಹಾಗೂ ಅವನ ಬುದ್ಧಿಯು ಮಧುರವಾಗಲಿ ಎಂಬಿವೇ ಮೊದಲಾದ ಸದ್ಭಾವಗಳು 'ಕ್ಷಮೆ' ಎನಿಸಿಕೊಳ್ಳುತ್ತವೆ. ಅಕ್ರೋಧವು ಅಕ್ರಿಯವಾಗಿದೆ. ಕ್ಷಮೆಯು ಸಕ್ರಿಯ ತತ್ತ್ವವಾಗಿದೆ. ಕ್ಷಮೆಯು ಹೇಡಿಗಳದ್ದಲ್ಲ, ವೀರರ ಧರ್ಮವಾಗಿದೆ.

**ಧೀರತ್ವ-ವೀರತ್ವ:-** ದುಃಖ, ವಿಪತ್ತು, ಕಷ್ಟ ಮತ್ತು ಭಯದ ಸನ್ನಿವೇಶಗಳಲ್ಲಿ ಭಗವಂತನ ಮಂಗಳಮಯ ವಿಧಾನದಲ್ಲಿ ಭರವಸೆಯಿಟ್ಟುಕೊಳ್ಳಬೇಕು. ಮೋಡದಿಂದ ಆಕಾಶವು ಮುಚ್ಚಿದಾಗ ಕಪ್ಪಾಗುವುದು, ಮತ್ತೆ ಮೋಡಗಳು ಚದುರಿಹೋದ ನಂತರ ಎಲ್ಲೆಡೆ ಪ್ರಕಾಶವು ಹರಡುವುದು ಸ್ವಾಭಾವಿಕವಿರುವಂತೆ ವಿಪತ್ತುಗಳು ಸದಾ ಇರುವುದಿಲ್ಲ ಎಂದೂ, ಸ್ವಾಭಾವಿಕವೆಂದೂ ತಿಳಿಯುತ್ತ ತನ್ನ ಕರ್ತವ್ಯವನ್ನು ಪಾಲಿಸುತ್ತ ಜೀವನವೆಂಬ ಮೈದಾನದಲ್ಲಿ ಸ್ಥಿರವಾಗಿ ನಿಂತಿರುವುದು 'ಧೀರತ್ವ'ವಾಗಿದೆ. ಇದರ ಜೊತೆಗೆ ವಿರೋಧಿ ಶಕ್ತಿಗಳನ್ನು ನಿರ್ಮೂಲಮಾಡುವ ಸಾಹಸ ಹಾಗೂ ಬುದ್ಧಿವಂತಿಕೆಯಿಂದ ಕೂಡಿದ ಪ್ರಯತ್ನ ಮಾಡುವುದು 'ವೀರತ್ವ'ವಾಗಿದೆ.

**ಗಾಂಭೀರ್ಯ:-** ಅರಿತು ಕಡಿಮೆ ಶಬ್ದಗಳಲ್ಲಿ ಮಧುರವಾಗಿ ಮಾತನಾಡುವುದು, ವ್ಯರ್ಥವಾಗಿ ಮಾತನಾಡದಿರುವುದು, ಹಾಸ್ಯನಗೆಚಾಟಿಕೆ ಮಾಡದಿರುವುದು, ವಾದ - ವಿವಾದ ಮಾಡದಿರುವುದು, ತುಚ್ಛತನ ಮಾಡದಿರುವುದು, ಚಾಪಲ್ಯ-ಚಾಂಚಲ್ಯಗಳನ್ನು ಮಾಡದಿರುವುದು, ಪ್ರತಿಯೊಂದು ಕಾರ್ಯವನ್ನು ಚೆನ್ನಾಗಿ ಯೋಚಿಸಿ ದೃಢನಿಶ್ಚಯದಿಂದ ಮಾಡುವುದು, ಶಾಂತವಾದ ಮತ್ತು ಶಿಷ್ಟವಾದ ವ್ಯವಹಾರ ಮಾಡುವುದು, ಜಗಳ - ಗಲಭೆಗಳಲ್ಲಿ ತೊಡಗದಿರುವುದು, ಸ್ವಲ್ಪ ವಿಪತ್ತು ಅಥವಾ ಮನೆಯಲ್ಲಿ ಯಾವುದಾದರೂ ಕಾರ್ಯವೊದಗಿದಲ್ಲಿ ವಿಚಲಿತಳಾಗದಿರುವುದು ಮತ್ತು ಪ್ರಕಟಪಡಿಸುವದರಿಂದ ಹಾನಿಯಾಗಬಹುದಾದಂತಹ ಅಥವಾ ಯಾರಿಗಾದರೂ ದುಃಖವಾಗ ಬಹುದಾದಂತಹ, ಅಹಿತವಾಗಬಹುದಾದಂತಹ ವಿಷಯವನ್ನು ತನ್ನಲ್ಲೇ ಅಡಗಿಸಿಡುವುದು ಎಲ್ಲರೂ ಒಪ್ಪುತ್ತಾರೆ, ಗೌರವಿಸುತ್ತಾರೆ ಮತ್ತವಳೂ ಅನೇಕ ವ್ಯರ್ಥವಾದ ಕಷ್ಟ-ಕಾರ್ಪಣ್ಯಗಳಿಂದ ಪಾರಾಗುತ್ತಾಳೆ.

**ಸಮತ್ವ :-** ಎಲ್ಲರಲ್ಲಿ ಓರ್ವನೇ ಆತ್ಮನಿದ್ದಾನೆ ಅಥವಾ ಪ್ರಾಣಿಮಾತ್ರವೆಲ್ಲ ಒಬ್ಬನೇ ಆದ ಪ್ರಭುವಿನ ಅಭಿವ್ಯಕ್ತಿ ಅಥವಾ ಸಂತಾನವೆಂದು ತಿಳಿದು ಎಲ್ಲರ ಬಗೆಗೆ ತನ್ನ ಮನಸ್ಸಿನಲ್ಲಿ ಸಮಾನಭಾವನೆ ಇಟ್ಟುಕೊಳ್ಳುವುದು, ಎಲ್ಲರ ದುಃಖವನ್ನು ತನ್ನ

ದುಃಖವೆಂದು ತಿಳಿಯುವುದು, ಎಲ್ಲರ ಹಿತದಲ್ಲಿ ತನ್ನ ಹಿತವನ್ನು ಕಾಣುವುದು 'ಸಮತೆ' ಎನಿಸುತ್ತದೆ. ವ್ಯವಹಾರದಲ್ಲಿ ಪ್ರಸಂಗಾನುಸಾರ ಅಲ್ಲಲ್ಲಿ ಆಗಾಗ್ಗೆ ವಿಷಮತೆ ತೋರಿಸಬೇಕಾಗಿ ಬರುತ್ತದೆ. ಆದರೆ ಇದು ಅನಿವಾರ್ಯ. ಮನಸ್ಸಿನಲ್ಲಿ ಆತ್ಮದೃಷ್ಟಿ ಅಥವಾ ಪರಮಾರ್ಥ ದೃಷ್ಟಿಯಿಂದ ಎಲ್ಲರಲ್ಲಿ ಸಮತಾಭಾವವನ್ನು ಹೊಂದಿರಬೇಕು. ವಿಷಮತೆಯು ಈ ರೂಪದಲ್ಲಿದ್ದರೆ ಗುಣವೆನಿಸುತ್ತದೆ. ಹೇಗೆಂದರೆ ತನಗೂ, ತನ್ನ ಮಕ್ಕಳಿಗೂ ಕಡಿಮೆ ಪ್ರಮಾಣ, ಕಡಿಮೆ ಸಂಖ್ಯೆ ಮತ್ತು ಅಗ್ಗದ ವಸ್ತುಗಳನ್ನು ಅಪೇಕ್ಷಿಸಿ ತೆಗೆದುಕೊಳ್ಳಬೇಕು. ತನ್ನ ಮೈದುನ, ನಾದಿನಿ, ಓರಗಿತ್ತಿಯರು ಹಾಗೂ ಅವರ ಮಕ್ಕಳ ಭಾಗಕ್ಕೆ ಹೆಚ್ಚು ಪ್ರಮಾಣ, ಹೆಚ್ಚು ಸಂಖ್ಯೆ ಮತ್ತು ಅಪೇಕ್ಷಿಸಿದ ಉತ್ಕೃಷ್ಟವಾದ ವಸ್ತುಗಳನ್ನು ಸಂತೋಷದಿಂದ ಕೊಡಬೇಕು. ಇವು ಸಮತೆಯಿಂದ ಕೂಡಿದ ಉತ್ಕೃಷ್ಟವಾದ ವ್ಯವಹಾರವಾಗಿವೆ.

**ಸಹಿಷ್ಣುತೆ:-** ದುಃಖ, ಕಷ್ಟ ಮತ್ತು ಪ್ರತಿಕೂಲವಾದ ಪರಿಸ್ಥಿತಿಗಳನ್ನು ಸಹಿಸಿಕೊಳ್ಳುವುದರ ಹೆಸರು 'ಸಹಿಷ್ಣುತೆ'ಯಾಗಿದೆ. ಇದು ನಾರಿಯರ ಸ್ವಾಭಾವಿಕ ಗುಣವಾಗಿದೆ. ನಾರಿಯು ಪುರುಷನಿಗಿಂತಲೂ ಅಧಿಕವಾಗಿ ಸಹಿಸುತ್ತಾಳೆ ಮತ್ತು ಹೆಚ್ಚು ಸಹನಾ ಶಕ್ತಿಯುಳ್ಳವಳೂ ಆಗಿದ್ದಾಳೆ. ಸಾಮಾನ್ಯವಾಗಿ ಸಹಿಷ್ಣುತೆ ಗುಣವನ್ನು ವೃಕ್ಷಗಳಿಗೆ ಹೋಲಿಸುತ್ತಾರೆ. **ತರೋರಿವ ಸಹಿಷ್ಣುತಾ ।** ಜನರು ಕಲ್ಲುತೂರಿದರೂ ಫಲಭರಿತ ವೃಕ್ಷವು ಸುಂದರ, ಸುಪಕ್ವ ಮತ್ತು ಮಧುರವಾದ ಫಲವನ್ನು ನೀಡುತ್ತದೆ.. ಜನರು ಅದನ್ನು ಕತ್ತರಿಸಿ, ಇಂಧನವಾಗಿ ಉರಿಸಿದರೆ ಅದು ತಾನು ಉರಿದು ಅವರ ಯಜ್ಞಕಾರ್ಯವು ನಡೆಯುವಂತೆ ಮಾಡುತ್ತದೆ, ಭೋಜನವನ್ನು ತಯಾರಿಸುತ್ತದೆ ಮತ್ತು ಶೀತದಿಂದಾಗಿ ನಡುಗುತ್ತಿರುವ ಶರೀರದಲ್ಲಿ ಶಾಖವನ್ನು ತುಂಬಿ ಜೀವನದಾನ ಮಾಡುತ್ತದೆ. ವೃಕ್ಷವು ಸ್ವತಃ ಅನೇಕ ಬಿರುಗಾಳಿ, ಮಳೆ, ಗುಡುಗು-ಸಿಡಿಲು ಮುಂತಾದ ಅಡಚಣೆ-ವಿಪತ್ತುಗಳನ್ನು ಸಹಿಸಿಕೊಳ್ಳುತ್ತ ಫಲಭರಿತವಾಗುತ್ತದೆ. ನಾರಿಗೆ ಪ್ರತಿಕೂಲವಾದ ಭಾವಗಳನ್ನು ಹೊಂದಿರುವ ಪತಿ ಮತ್ತು ಅತ್ತೆ ದೊರಕಿದಲ್ಲಿ ಅವಳು ಸಹಿಷ್ಣು, ಪ್ರೇಮದಿಂದ ಅವರನ್ನು ಸನ್ಮಾರ್ಗಕ್ಕೆ ತರಬೇಕು. ಸಹಿಸುವುದು, ಕಲಹಕ್ಕಿಳಿಯದೆ ಪ್ರೇಮಿಸುವುದು, ಪ್ರತಿಯಾಗಿ ಮಾತಾಡದೆ ಸೇವೆ ಮಾಡುವುದು- ಇವು ಎಂತಹ ಅಮೋಘ ಮಂತ್ರಗಳೆಂದರೆ ಆ ಶಾಂತಿಯಿಂದ ಛಿನ್ನ-ಭಿನ್ನವಾಗುತ್ತಿರುವ ಮನೆ ಮತ್ತೆ ಬೇಗನೆ ಮೊದಲಿನಂತಾಗುತ್ತದೆ ಮತ್ತೆ ಅಲ್ಲಿ ಶಾಂತಿ ಮತ್ತು ಸುಖದ ಅಲೆಗಳು ಕುಣಿಯಲು ಪ್ರಾರಂಭವಾಗುತ್ತವೆ.

**ಸುವ್ಯವಸ್ಥೆ ಮತ್ತು ಸ್ವಚ್ಛತೆ:-** ಮನೆಯ ವಸ್ತುಗಳು, ಆವಶ್ಯಕ ಸಾಮಗ್ರಿ ಹಾಗೂ ಕಾರ್ಯಗಳನ್ನು ಶೃಂಖಲಾಬದ್ಧವಾಗಿಡುವುದನ್ನು ಸುವ್ಯವಸ್ಥೆ ಎನ್ನುತ್ತಾರೆ. ನಾರಿಯು ಮನೆಯ ಲಕ್ಷ್ಮೀ, ಮನೆಯ ಸೌಂದರ್ಯ ಹಾಗೂ ಐಶ್ವರ್ಯ-ದೇವಿಯಾಗಿದ್ದಾಳೆ. ಸುವ್ಯವಸ್ಥೆಯಿಲ್ಲದಿದ್ದರೆ ಮನೆಯಲ್ಲಿ ಲಕ್ಷ್ಮಿಯ ಸ್ವರೂಪ ಕೆಟ್ಟುಹೋಗುತ್ತದೆ. ಅಲ್ಲಲ್ಲಿ ಅವ್ಯವಸ್ಥಿತವಾಗಿ ಹರಡಿರುವ ಪದಾರ್ಥಗಳು, ಕಸ-ಕಡ್ಡಿಗಳಿಂದ ತುಂಬಿರುವ ಅಂಗಳ, ಜೇಡರ ಬಲೆಯಿಂದ ಆಚ್ಛಾದಿತ ಗೋಡೆಗಳು, ಬಟ್ಟೆ ಹಾಗೂ ಪಾತ್ರೆ ಮೊದಲಾದುವುಗಳ ಕೊಳಕು, ಗಂಟೆಗಟ್ಟಲೆ ಹುಡುಕಿದರೂ ಅಗತ್ಯವಾದ ಪದಾರ್ಥಗಳು ಸಿಗದಿರುವುದು, ಆವಶ್ಯಕತೆಯುಂಟಾದಾಗ ಎಲ್ಲೆಲ್ಲೂ ಹುಡುಕಾಡುವುದು, ಬೇಸರಪಡುವುದು ಮತ್ತು ಬೇರೆಯವರನ್ನು ದೂಷಿಸುವುದು, ಲೆಕ್ಕಾಚಾರದ ಸುಳಿವು ಇಲ್ಲದಿರುವುದು-ಇವೆಲ್ಲ ಅವ್ಯವಸ್ಥೆಯ ರೂಪಗಳಾಗಿವೆ. ಇವುಗಳಿಂದಾಗಿ ಮನೆಯು ನಾಶವಾಗಿ ಹೋಗುತ್ತದೆ ಮತ್ತು ಕಷ್ಟವಂತೂ ಎಂದಿಗೂ ತೀರುವುದಿಲ್ಲ. ಸ್ವಲ್ಪ ಎಚ್ಚರಿಕೆ ವಹಿಸಿ ಗೊತ್ತಾದ ಸ್ಥಾನದಲ್ಲಿ ಪ್ರತಿಯೊಂದು ವಸ್ತುವನ್ನು ಜೋಪಾನವಾಗಿ ಇಟ್ಟಲ್ಲಿ, ಮನೆ-ಗೋಡೆಗಳನ್ನು ಗುಡಿಸಿ-ಸಾರಿಸಿದಲ್ಲಿ ಮತ್ತು ಬಟ್ಟೆ-ಪಾತ್ರೆಗಳನ್ನು ಒಗೆದು-ಬೆಳಗಿ ಸ್ವಚ್ಛವಾಗಿ ಇಡಲಾಯಿತೆಂದರೆ ಸಹಜವಾಗಿಯೇ ಸುವ್ಯವಸ್ಥೆಯಾಗಬಲ್ಲದು. ಆವಶ್ಯಕತೆಯುಂಟಾದಾಗಲೇ ಪದಾರ್ಥವು ಸಿಗುತ್ತದೆ. ಸಮಯ ವ್ಯರ್ಥ ಮಾಡುವುದಾಗಲೀ, ಬೇಸರಪಡುವುದಾಗಲೀ ಸಿಡಿಗುಟ್ಟುವುದಾಗಲೀ, ಮತ್ತು ಯಾರ ಮೇಲಾದರೂ ದೋಷ ಹೊರಿಸುವುದಾಗಲೀ- ಇರುವುದಿಲ್ಲ. ಕೊಳಕು, ಕಸ-ಕಡ್ಡಿಗಳಿಲ್ಲದಿರುವುದರಿಂದ ರೋಗ ಹಾಗೂ ರೋಗತರುವ ಕೀಟಾಣುಗಳೂ ಉಂಟಾಗುವುದಿಲ್ಲ ಮತ್ತು ವ್ಯರ್ಥವಾದ ಕಷ್ಟಗಳೆಲ್ಲ ತೊಡೆದು ಹೋಗುತ್ತವೆ.

**ಶ್ರಮಶೀಲತೆ:-** ನಾರಿಯು ಮನೆಯಲ್ಲಿರುತ್ತಾಳೆ. ಅವಳ ಆರೋಗ್ಯಕ್ಕೆ ಮನೆಯ ಕೆಲಸವೇ ಸುಂದರ ವ್ಯಾಯಾಮವಾಗಿದೆ. ಶಾರೀರಿಕ ಪರಿಶ್ರಮ ಪಡುವ ನಾರಿಯ ಬಳಿ ಸೋಮಾರಿತನವು ಸುಳಿಯುವುದೂ ಇಲ್ಲ. ವೃದ್ಧಾಪ್ಯ ಹಾಗೂ ರೋಗಗಳು ಅವಳಿಂದ ದೂರವಿರುತ್ತವೆ. ತಿಂದ ಆಹಾರ ಜೀರ್ಣವಾಗುತ್ತದೆ. ರಕ್ತದಲ್ಲಿ ಶಕ್ತಿಯುಂಟಾಗಿ ಅದು ಶುದ್ಧಿಯೂ ಆಗುತ್ತದೆ. ಮನಸ್ಸು ಪ್ರಫುಲ್ಲತೆಯಿಂದ ಕೂಡಿರುತ್ತದೆ. ಈ ದಿನಗಳಲ್ಲಿ ಕೆಲವು ನಾರಿಯರು ನಮಗೆ ಸಾಕಷ್ಟು ಹಣವಿದೆ, ಕೆಲಸದವರು ಕೆಲಸ ಮಾಡಬಲ್ಲರು, ಹೀಗಿರುವಾಗ ನಾವೇಕೆ ಪರಿಶ್ರಮ ಪಡಬೇಕು ಎನ್ನುತ್ತಾರೆ. ಇದು ತಪ್ಪು ವಿಚಾರ. ಕೆಲಸಗಾರರಂತೂ ಕೆಲಸ

ಮಾಡಬಲ್ಲರು. ಆದರೆ ಇಂತಹ ನಾರಿಯರು ತಿಂದ ಆಹಾರವನ್ನು ಹೇಗೆ ಅರಗಿಸಬಲ್ಲರು? ಅವರು ತಮಗೆ ಆರೋಗ್ಯ ಹಾಗೂ ಶುದ್ಧವಾದ ರಕ್ತವನ್ನು ಎಲ್ಲಿಂದ ತಂದುಕೊಳ್ಳಬಲ್ಲರು? ಇದಲ್ಲದೆ, ನಿಗವಿಟ್ಟು ಕೆಲಸಗಾರರಿಂದ ಮಾಡಿಸದಿದ್ದರೆ ಅವರು ಮಾಡಿದ ಕೆಲಸವು ಸರಿಯಾಗಿ ಆಗುವುದಿಲ್ಲ. ಕಳ್ಳತನ ಪ್ರಾರಂಭವಾಗುತ್ತದೆ. ಖರ್ಚು ಹೆಚ್ಚುವುದಲ್ಲದೆ ಎಲ್ಲಕ್ಕಿಂತ ಮಿಗಿಲಾಗಿ ಮನೆಯಲ್ಲಿ ಸೋಮಾರಿತನ ಮತ್ತು ರೋಗ ಉತ್ಪತ್ತಿಯಾಗುತ್ತದೆ. ನೌಕರರಿದ್ದರೂ ಸಹ ಮನೆಯನ್ನು ಸ್ವಚ್ಛವಾಗಿರಿಸುವುದು, ಹಿಟ್ಟು ಬೀಸುವುದು, ರಾಟೆಯಲ್ಲಿ ನೂಲುವುದು, ಮೊಸರನ್ನು ಕಡೆಯುವುದು, ಅಡಿಗೆ ಮಾಡುವುದು ಮೊದಲಾದುವುಗಳನ್ನು ತಾನು ಮಾಡುವುದು ಲಾಭದಾಯಕ. ಭೋಜನದಲ್ಲಿ ಭಾವಕ್ಕನುಸಾರವಾಗಿ ಅಮೃತವೂ ಇರಬಲ್ಲದು ಮತ್ತು ವಿಷವೂ ಇರಬಲ್ಲದು. ತಾಯಿ ಹಾಗೂ ಪತ್ನಿಯು ಮಾಡಿದ ಅಡಿಗೆಯಲ್ಲಿ ಎಲ್ಲ ಪ್ರಕಾರದ ಅಮೃತವಿರುವುದು. ಖರ್ಚುಕಡಿಮೆಯಾಗುವುದಲ್ಲದೆ ಶುದ್ಧವಾಗಿಯೂ ಇರುವುದು. ಬೀಸುವ ಕಲ್ಲನ್ನು ಬೀಸುವ ಸ್ತ್ರೀಯರ ರಜೋ ಸಂಬಂಧವಾದ ರೋಗಗಳು ಬಹಳ ಕಡಿಮೆಯಾಗಿರುತ್ತದೆ. ಆದ್ದರಿಂದ ನಾರಿಯು ಶಾರೀರಿಕ ಪರಿಶ್ರಮ ಪಡುವುದು ಅತ್ಯಾವಶ್ಯಕ. ಹೊಲಗಳಲ್ಲಿ ಕೆಲಸ ಮಾಡುವ ನಾರಿಯರಿಗೆ ರೋಗಿಗಳಾಗುವುದು ಬಹಳ ಕಡಿಮೆ.

**ನಿರಭಿಮಾನತೆ:-** ರೂಪ, ಧನ, ಮಕ್ಕಳು, ವಿದ್ಯೆ, ಬುದ್ಧಿ ಹಾಗೂ ಅಧಿಕಾರ ಮೊದಲಾದುವುಗಳ ಗರ್ವವಿಲ್ಲದಿರುವುದು ಮತ್ತು ಎಲ್ಲರೊಡನೆ ನಮ್ರತೆಯಿಂದ ಕೂಡಿದ ಸೌಜನ್ಯಪೂರ್ಣ ವ್ಯವಹಾರ ಮಾಡುವುದು, ನಿರಭಿಮಾನತೆಯಾಗಿದೆ. ಸ್ತ್ರೀಯರಿಗೆ ಗರ್ವವು ಅತಿಶೀಘ್ರವಾಗಿ ಉಂಟಾಗುತ್ತದೆ. ಅವರು ಅದರ ಆವೇಶದಿಂದಾಗಿ ಹಳ್ಳಿಯವರು ಮತ್ತು ನೆರೆ-ಹೊರೆಯವರು, ಕೆಲಸದವರೇ ಅಲ್ಲ ಆತ್ಮೀಯರಾದ ಸ್ವಜನರನ್ನು, ಎಲ್ಲಿಯವರೆಗೆಂದರೆ ಅತ್ತೆ-ಮಾವಂದಿರು, ಅಣ್ಣ - ಅತ್ತಿಗೆ ಮೊದಲಾದ ಹಿರಿಯರನ್ನು, ಹಾಗೂ ಮಗಳು-ಅಳಿಯ, ಪುತ್ರ-ಪುತ್ರನ-ಪತ್ನೀ ಮೊದಲಾದವರನ್ನೂ ತಿರಸ್ಕಾರ ಮಾಡುತ್ತಾರೆ. ಇದರ ಪರಿಣಾಮವಾಗಿ ಆಜೀವನ ಪರ್ಯಂತ ಕ್ಲೇಶವುಂಟಾಗುತ್ತದೆ. ಆದ ಕಾರಣ, ಸದಾ ಎಚ್ಚರಿಕೆಯಿಂದ, ನಿರಭಿಮಾನದಿಂದ ಕೂಡಿದ ಅತ್ಯಂತ ನಮ್ರವಾದ ವ್ಯವಹಾರವನ್ನು ಮಾಡಬೇಕು. ನಮ್ರವ್ಯವಹಾರದಿಂದ ವೈರಿಗಳು ಕೂಡ ಮಿತ್ರರಾಗುತ್ತಾರೆ ಮತ್ತು ಕಠೋರ ವ್ಯವಹಾರದಿಂದ ಮಿತ್ರರೂ ಶತ್ರುಗಳಾಗುತ್ತಾರೆ.

**ಮಿತವ್ಯಯ:-** ಸೀಮಿತವಾಗಿ ಖರ್ಚುಮಾಡುವುದನ್ನೇ 'ಮಿತವ್ಯಯ' ವೆನ್ನುತ್ತಾರೆ. ಮಿತವ್ಯಯವು ಕೇವಲ ಹಣ-ಕಾಸಿಗೆ ಮಾತ್ರ ಸಂಬಂಧಿಸಿರುವುದಲ್ಲ, ಮನೆಯ ಎಲ್ಲ ಪದಾರ್ಥಗಳನ್ನೂ ಅರಿತು ಸಾಧ್ಯವಾದಷ್ಟು ಕಡಿಮೆ ಪ್ರಮಾಣದಲ್ಲಿ ಉಪಯೋಗಿಸಬೇಕು. ಕಡಿಮೆ ಸಂಪಾದನೆಯಿರುವ ಗೃಹಸ್ಥನು ಸಾಧ್ಯವಾದಲ್ಲಿ, ತನ್ನ ಸಂಪಾದನೆಯ ಮೂರನೇ ಅಥವಾ ನಾಲ್ಕನೆಯ ಒಂದು ಭಾಗವನ್ನು ಆಕಸ್ಮಿಕವಾಗಿ ಒದಗಿಬಂದ ಸಂದರ್ಭಕ್ಕೆಂದೂ, ಮಕ್ಕಳ ಮದುವೆ ಮುಂತಾದುವುಗಳಿಗಾಗಿಯೋ ಕೂಡಿಡಬೇಕು. ಹೆಚ್ಚು ಸಂಪಾದನೆ, ಹಣದ ಅನುಕೂಲವುಳ್ಳವರೂ ಸಹ ವ್ಯರ್ಥವಾಗಿ ವ್ಯಯಮಾಡಬಾರದು. ಅದರಿಂದ ಒಳ್ಳೆಯ ಅಭ್ಯಾಸ ಕೆಡುತ್ತದೆ. ಹಣವಿಲ್ಲದಿರುವಾಗ ಸ್ಥಿತಿಯು ಬಹು ದುಃಖ ಪೂರ್ಣವಾಗುತ್ತದೆ ಹಾಗೂ ವ್ಯರ್ಥವಾಗಿ ವ್ಯಯವಾಗುವುದರಿಂದ ಧರ್ಮ ಹಾಗೂ ಲೋಕಸೇವೆಯ ಆವಶ್ಯಕ ಕಾರ್ಯಗಳಿಗೆ ಖರ್ಚು ಮಾಡುವ ಪ್ರವೃತ್ತಿಯು ಕಡಿಮೆಯಾಗುತ್ತದೆ. ಹೀಗಾಗಿ ಮನುಷ್ಯನ ಒಂದು ಉತ್ತಮ ಪ್ರವೃತ್ತಿ ಹಾಳಾಗುತ್ತದೆ. ಇದು ಎಲ್ಲಕ್ಕಿಂತಲೂ ದೊಡ್ಡ ನಷ್ಟವಾಗಿದೆ. ಸ್ತ್ರೀಯರಲ್ಲಿ ಅನಾವಶ್ಯಕವಾಗಿ ಖರ್ಚುಮಾಡುವ ದೋಷವು ಪ್ರಾಯಶಃ ಅಧಿಕವಾಗಿರುತ್ತದೆ. ಕಡಿಮೆ ಸಂಪಾದನೆಯುಳ್ಳ ಪತಿ-ಪುತ್ರರಾದರೋ ತತ್ತರಿಸಿ ಹೋಗುತ್ತಾರೆ. ಮನೆಯಲ್ಲಿ ಯಾವಾಗಲೂ ಅಶಾಂತಿ ತುಂಬಿರುತ್ತದೆ. ಮನಸ್ಸು ಮಾಡಿದರೆ ನಾರಿಯರು ಸಹಜವಾಗಿ ಮನಸ್ಸಿನಲ್ಲಿ ಸಂಯಮ ತಂದುಕೊಂಡು, ಕಡಿಮೆ ಖರ್ಚುಮಾಡುವ ಅಭ್ಯಾಸವನ್ನು ಬೆಳೆಸಿಕೊಂಡು ಮನೆಯಲ್ಲಿ ಪತಿ-ಪುತ್ರರಿಗೆ ಸುಖ-ಶಾಂತಿ, ಅಭ್ಯಾಸಗಳಲ್ಲಿ ಸುಧಾರಣೆ ಹಾಗೂ ಧರ್ಮ-ಪುಣ್ಯಕರವಾದ ಕಾರ್ಯಗಳಿಗೆ ಸದವಕಾಶವನ್ನು ಒದಗಿಸಬಲ್ಲಳು.

**ಉದಾರತೆ: -** ಅನಾವಶ್ಯಕವಾಗಿ ಖರ್ಚುಮಾಡುವುದು ದೋಷ ವಾಗಿರುವಂತೆ ಹಣವಿದ್ದರೂ ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಗಳಿಗೆ ಜಿಪುಣತನವನ್ನು ತೋರಿಸುವುದು ಸಹ ದೋಷವೇ ಆಗಿದೆ. ಮಕ್ಕಳು ಕಾಯಿಲೆ ಬಿದ್ದಾಗ ಅವುಗಳಿಗೆ ಹಾಲು-ಹಣ್ಣು ತರುವ ವಿಷಯದಲ್ಲಿ, ಶ್ರಾದ್ಧವೇ ಮುಂತಾದ ಧಾರ್ಮಿಕ ಕಾರ್ಯಗಳಿಗೆ, ಭಗವಂತನ ಪೂಜೆ ಮತ್ತು ಪರ್ವೋತ್ಸವದ ಸಂದರ್ಭದಲ್ಲಿ, ಗೋ ಬ್ರಾಹ್ಮಣ ಹಾಗೂ ದೇವತೆಗಳ ಸೇವೆಗಾಗಿ, ಹೆಣ್ಣುಮಕ್ಕಳು ಮತ್ತು ಸಹೋದರಿಯರಿಗೆ ಕೊಡುವಾಗ, ಮಕ್ಕಳ ರಕ್ಷಣೆಯಲ್ಲಿ, ಅತ್ತೆ-ಮಾವಂದಿರ ಸೇವೆಯಲ್ಲಿ, ಪರಿವಾರಕ್ಕೆ ಸೇರಿದ ಅನ್ಯಜನರ ಸೇವೆಯಲ್ಲಿ, ವಿಧವೆಯರು ಹಾಗೂ

ಆಶ್ರಿತರ ಸತ್ಕಾರಪೂರ್ಣವಾದ ಭರಣ-ಪೋಷಣೆ ಮಾಡುವುದರಲ್ಲಿ, ಬಡವರ ಸೇವೆಯಲ್ಲಿ ಹಾಗೂ ತನ್ನ ಸ್ವಾಸ್ಥ್ಯಕ್ಕಾಗಿ ಭೋಜನ-ಔಷಧಿ ಮೊದಲಾದುವುಗಳಲ್ಲಿ ಯಾವ ನಾರಿಯು ಜಿಪುಣತನವನ್ನು ಪ್ರದರ್ಶಿಸಿ ಹಣವನ್ನು ದೋಚಿ ಕೂಡಿಡಲು ಬಯಸುತ್ತಾಳೋ ಅವಳ ನೈತಿಕ ಪತನವಂತೂ ಆಗಿಯೇ ತೀರುತ್ತದೆ. ಇಷ್ಟೇ ಅಲ್ಲ, ಅವಳ ಈ ಆದರ್ಶದಿಂದ ಅವಳ ಮಕ್ಕಳೂ ಕೂಡ ಕೆಟ್ಟ ಅಭ್ಯಾಸದಿಂದ ಪತಿತರಾಗುತ್ತಾರೆ. ಆದ್ದರಿಂದ ಆವಶ್ಯಕ ಕಾರ್ಯಗಳಲ್ಲಿ ಜಿಪುಣತನ ಮಾಡದೆ ಔದಾರ್ಯದಿಂದ ವ್ಯವಹಾರ ಮಾಡಬೇಕು. ಯಾರದ್ದಾದರೂ ಸೇವೆ-ಸತ್ಕಾರ ಮಾಡಿದಾಗ ಅಭಿಮಾನ ಪಡುವುದಾಗಲಿ, ಅವರು ಕೃತಜ್ಞರಾಗಿರಬೇಕೆಂದು ಬಯಸುವುದಾಗಲಿ ಅಥವಾ ಪ್ರತ್ಯುಪಕಾರ ಬಯಸುವುದಾಗಲೀ ಕೂಡದು.

**ಪರದುಃಖ-ಕಾತರತೆ:-** ಇತರರು ದುಃಖದಲ್ಲಿ ಮುಳುಗಿರುವುದನ್ನು ನೋಡಿ ಯಾವ ಭೇದ-ಭಾವ ಅಥವಾ ಪಕ್ಷಪಾತವಿಲ್ಲದೆ ಅವರ ದುಃಖವನ್ನು ದೂರಮಾಡುವುದಕ್ಕಾಗಿ ಮನಸ್ಸಿನಲ್ಲಿ ಉಂಟಾಗುವ ತೀವ್ರ ಭಾವನೆಯು 'ಪರದುಃಖಕಾತರತೆ' ಎನಿಸುತ್ತದೆ. ಇದನ್ನೇ ದಯೆ ಎಂದೂ ಹೇಳುತ್ತಾರೆ. ನಾರಿಯಲ್ಲಿ ಈ ಗುಣವು ವಿಶೇಷವಾಗಿ ವಿಕಸಿತವಾಗಬೇಕು ಮತ್ತವಳು ದುಃಖಿತರಾದ ಮನುಷ್ಯರ ಹಾಗೂ ಪ್ರಾಣಿಗಳ ದುಃಖ-ಪರಿಹಾರಕ್ಕಾಗಿ ಅನ್ನಪೂರ್ಣೆ ಆಗಬೇಕಾದುದು ಅತ್ಯಾವಶ್ಯಕವಾಗಿದೆ.

**ಸೇವೆ-ಶುಶ್ರೂಷೆ:-** ೧) ಪತಿಯಸೇವೆ ೨) ಅತ್ತೆ-ಮಾವರ ಸೇವೆ ೩) ಮಕ್ಕಳ ಸೇವೆ ೪) ಅತಿಥಿ ಸೇವೆ ೫) ದೇವರ ಸೇವೆ ೬) ದೇಶ ಸೇವೆ ಮತ್ತು ೭) ರೋಗಿಗಳ ಹಾಗೂ ದುಃಖಿತರ ಸೇವೆ - ಇವೆಲ್ಲಾ ಸೇವೆಯ ಅಂಗಗಳಾಗಿವೆ. ನಾರಿಯಲ್ಲಿ ಸೇವಾಭಾವವು ಸ್ವಾಭಾವಿಕವಾಗಿರುತ್ತದೆ; ಆದರವಳು ಪತಿಯ ಸೇವೆಗಾಗಿ ಮತ್ತು ಪರಮ ಪತಿ ಪರಮಾತ್ಮನ ಸೇವೆಗಾಗಿಯೇ ಸೇವೆ ಮಾಡಬೇಕು. ಸೇವೆಯಲ್ಲಿ ಬೇರೆ ಯಾವ ಉದ್ದೇಶವಿರಬಾರದು. ಸೇವೆಯು ವಶೀಕರಣಮಂತ್ರವಾಗಿದೆ. ಅದರಿಂದ ಎಲ್ಲರನ್ನೂ ವಶದಲ್ಲಿಟ್ಟುಕೊಳ್ಳಬಹುದಾಗಿದೆ. ನಿಜವಾಗಿ ಹೇಳುವುದಾದರೆ ಜೀವನವು ಸೇವಾಮಯವೇ ಆಗಬೇಕು. ಧನದ ವಿಷಯದಲ್ಲಿ ಈರ್ಷ್ಯೆ ಇರುವಂತೆಯೇ ಶುದ್ಧ ಸೇವೆಯಲ್ಲಿಯೂ ಎಲ್ಲರಿಗಿಂತ ಮುಂದುವರಿಯುವ ಈರ್ಷ್ಯೆ ಹಾಗೂ ಸೇವೆಯ ಹೆಚ್ಚು-ಹೆಚ್ಚು ಸದವಕಾಶಗಳನ್ನು ಪಡೆಯುವ ತೀವ್ರವಾದ ಅಭಿಲಾಷೆ ಹಾಗೂ ಭಗವಂತನಲ್ಲಿ ಪ್ರಾರ್ಥನೆ ಇರಬೇಕು. ಸೇವೆಯು ಶುದ್ಧಸೇವೆಯ ಭಾವನೆಯಿಂದಲೇ

ಆಗಬೇಕು. ಸೇವೆಯಲ್ಲಿ ಯಾರಿಗಾದರೂ ಉಪಕಾರಮಾಡಿದೆನೆನ್ನುವ ಅಭಿಮಾನವಾಗಲೀ, ಸೇವೆಯ ಜಾಹಿರಾತು ಮಾಡುವ ಕಲ್ಪನೆ ಮತ್ತು ಸೇವೆಗೆ ಪ್ರತಿಯಾಗಿ ಏನನ್ನಾದರೂ ಪಡೆಯಬೇಕೆನ್ನುವ ಆಕಾಂಕ್ಷೆಯಾಗಲೀ ಇರಬಾರದು. ಸೇವೆ ಮಾಡಿದಮೇಲೆ ದೊರಕುವ ಗರ್ವರಹಿತ ಸಹಜ ಆತ್ಮಸಂತೋಷವೇ ಪರಮಧನವಾಗಿದೆ. ಸೇವೆಯ ಪ್ರಕಾರಗಳು ಸಂಕ್ಷೇಪವಾಗಿ ಹೀಗಿವೆ-

೧) ತನು-ಮನ- ಸರ್ವಸ್ವವನ್ನೂ ಅರ್ಪಿಸಿ ಎಲ್ಲ ಪ್ರಕಾರದಿಂದ ಪತಿಗೆ ಸುಖವನ್ನುಂಟು ಮಾಡುವುದು, ಸಂತೋಷಪಡಿಸುವುದಕ್ಕಾಗಿ ಹಾಗೂ ಆತನ ಕಲ್ಯಾಣವು ಸದಾ-ಸರ್ವದಾ, ಸರ್ವತ್ರ ಆಗಲೆಂಬ ಭಾವನೆಯಿಂದ ಎಲ್ಲಪ್ರಕಾರ ಸೇವೆ ಮಾಡುವುದು.

೨) ಅತ್ತೆ-ಮಾವನವರ ಸೇವೆಮಾಡುವ ಸುಅವಸರ ಸಿಕ್ಕಿರುವುದು ತನ್ನ ಸೌಭಾಗ್ಯವೆಂದು ಭಾವಿಸಿ ಅವರು ತನ್ನ ಸೇವೆಯನ್ನು ಸ್ವೀಕರಿಸುವುದೇ ಉಪಕಾರವೆಂದು ತಿಳಿಯಬೇಕು. ಮಧುರ ಹಾಗೂ ಉದಾರಯುಕ್ತವಾದ ವಾಣಿಯ ಮೂಲಕ ಅವರ ರುಚಿ ಹಾಗೂ ಇಚ್ಛೆಗನುಸಾರವಾಗಿ ಭೋಜನ, ವಸ್ತ್ರ ಆಜ್ಞಾಪಾಲನೆ, ಅವರ ಇಚ್ಛಾನುಸಾರ ಧರ್ಮ-ಕಾರ್ಯ ಪೂರೈಸಬೇಕು. ದಾನಾದಿಗಳಿಂದ ಹಾಗೂ ಅತ್ತೆಯು ವೃದ್ಧರಾಗಿದ್ದಲ್ಲಿ ಅವರ ಮತ್ತು ಮಾವನವರ ಕಾಲುಗಳನ್ನೊತ್ತುವುದರ ಮೂಲಕ, ರೋಗಾದಿಗಳ ಅವಸ್ಥೆಯಲ್ಲಿ ಎಲ್ಲ ರೀತಿಯಿಂದ ಅವರ ಸೇವೆಮಾಡಬೇಕು. ಅವರ ಅಭಿಪ್ರಾಯಕ್ಕನುಸಾರವಾಗಿ ಅವರ ಹೆಣ್ಣುಮಕ್ಕಳಿಗೆ ಎಂದರೆ ನಾದಿನಿಯರಿಗೆ ಸಮ್ಮಾನಪೂರ್ವಕವಾಗಿ ಕೊಟ್ಟು ಇದು ತುಂಬಾ ಕಡಿಮೆಯಾಯಿತೆಂದು ಹೇಳುವುದು, ಮತ್ತು ಹೆಚ್ಚು ಹೆಚ್ಚು ಕೊಡುವ ಯೋಗ್ಯತೆಯಿದ್ದರೆ ಪ್ರಾರ್ಥಿಸಿಕೊಂಡು - ಅವರ ಆಜ್ಞೆಯನ್ನು ಪಡೆದು ಅವರಿಗೆ ಹೆಚ್ಚು ಕೊಡಬೇಕು. ಇದರಿಂದ ಅವರು ಹೆಚ್ಚು ಪ್ರಸನ್ನರಾಗುವರು. ಅವರಿಗೆ ರಾಮಾಯಣ, ಭಾಗವತ, ಗೀತೆ, ಭಗವನ್ನಾಮ, ಕೀರ್ತನಾದಿಗಳನ್ನು ಕೇಳಿಸಿ ಸುಖವನ್ನುಂಟುಮಾಡುವುದು.

೩.) ಮಕ್ಕಳ ಆರೋಗ್ಯವು ಸುಧಾರಿಸಲೆಂದು, ಅವರು ತನು-ಮನಗಳಿಂದ ವಿಕಸಿತರಾಗಲಿ. ಅವರ ಬುದ್ಧಿಯು ವಿಕಾಸವಾಗಲಿ. ಅವರ ಆಚರಣೆಯಲ್ಲಿ ಸ್ಫೂರ್ತಿಯುಕ್ತ ಸಾತ್ತ್ವಿಕ ಗುಣಗಳು ಪ್ರಕಾಶವಾಗಲಿ. ಅವರು ಕುಲ, ಜಾತಿ, ದೇಶ ಹಾಗೂ ಧರ್ಮದ ಗೌರವವನ್ನು ಹೆಚ್ಚಿಸುವ ಸುಶಿಕ್ಷಿತ ಹಾಗೂ ಸದಾಚಾರಿಗಳಾಲಿ,

ಹಾಗೂ ತ್ಯಾಗದ ಪವಿತ್ರ ಭಾವನೆಯಿಂದ ಕೂಡಿ ಈಶ್ವರ ಭಕ್ತರಾಗಲಿ- ಈ ಪ್ರಕಾರವಾಗಿ ಅವರ ಲಾಲನೆ-ಪಾಲನೆ, ಶಿಕ್ಷಣ-ಸಂವರ್ಧನ ಮೊದಲಾದುವನ್ನು ಮಾಡುವುದು.

೪) ಅತಿಥಿಯನ್ನು ಭಗವಂತನೆಂದು ತಿಳಿದು ಅವರ ಸೇವೆಯನ್ನು ಯಥಾಶಕ್ತಿ ಹಾಗೂ ಯಥಾವಿಧಿಯಿಂದ, ನಿರ್ದೋಷ ಹಾಗೂ ನಿಷ್ಕಾಮ ಭಾವದಿಂದ ಮಾಡುವುದು.

೫) ಮನೆಯಲ್ಲಿ ಇಷ್ಟದೇವರ ಧಾತು ಅಥವಾ ಕಲ್ಲಿನ ಅಥವಾ ಚಿತ್ರಮಯ ಮೂರ್ತಿಯನ್ನಿಟ್ಟು ಶ್ರದ್ಧೆ ಹಾಗೂ ವಿಧಿಪೂರ್ವಕವಾಗಿ ಭಕ್ತಿಯೊಡನೆ ನಿತ್ಯವೂ ವಿವಿಧೋಪಚಾರಗಳಿಂದ ಅವನ ಪೂಜೆ ಮಾಡುವುದು.

೬) ದೇಶ ಸೇವೆಗಾಗಿ ಅತ್ಯುತ್ತಮ ಸಂತಾನಗಳನ್ನು ನಿರ್ಮಿಸುವುದು ಮತ್ತು ಅವರು ತಮ್ಮ ತಮ್ಮ ಕರ್ತವ್ಯಗಳಿಂದ ದೇಶರೂಪೀ ಭಗವಂತನ ಸೇವೆಯ ಸಕ್ರಿಯಪಾಠ ಕಲಿಸುವುದು. ದೇಶದ ನಾರಿಯರಲ್ಲಿ ತನ್ನ ಆದರ್ಶ, ಸದಾಚಾರ, ಪಾತಿವ್ರತ್ಯ ಹಾಗೂ ಧರ್ಮಭಾವನೆಗಳ ಮೂಲಕ ಸತ್-ಶಿಕ್ಷಾ ಮತ್ತು ಸದ್ಭಾವನೆಯನ್ನು ಹೆಚ್ಚಿಸುವುದು.

೭) ಮನೆಯಲ್ಲಿ ಹಾಗೂ ಸಂದರ್ಭವೊದಗಿದಲ್ಲಿ ಆವಶ್ಯಕತೆ ಮತ್ತು ತನ್ನ ಅನುಕೂಲಕ್ಕನುಸಾರವಾಗಿ ರೋಗಿಗಳಿಗೆ ಮತ್ತು ದುಃಖಿತರಿಗೆ ತನು-ಮನ-ವಚನಗಳಿಂದಲೂ, ಧನದಿಂದಲೂ ನಿರ್ದೋಷ ಹಾಗೂ ನಿಷ್ಕಾಮ ಸೇವೆಯನ್ನು ಆದರ ಹಾಗೂ ಸತ್ಕಾರಪೂರ್ವಕವಾಗಿ ಮಾಡುವುದು. ಸೇವಾಭಿಮಾನವನ್ನೆಂದಿಗೂ ಹೊಂದದಿರುವುದು. ಉಪಕಾರಭಾವವನ್ನೂ ಪ್ರದರ್ಶಿಸದಿರುವುದು.

**ಸಂಯುಕ್ತ ಪರಿವಾರ** - ಸಾಧ್ಯವಾದಷ್ಟೂ ಸಹನೆಯಿಂದಿದ್ದು ಹಾಗೂ ಔದಾರ್ಯದಿಂದ ವಿನಮ್ರ ವ್ಯವಹಾರ ಮಾಡಿ ಕುಟುಂಬವನ್ನು ಸಂಯುಕ್ತವಾಗಿಡಬೇಕು. ಸಹೋದರರು ಹಾಗೂ ಪರಿಹಾರವು ಬೇರೆಬೇರೆಯಾಗಿ ಹೋಗಲು ಬಿಡಬಾರದು. ಯಾರ ಭಾಗ್ಯದಿಂದ ಸುಖ ಮತ್ತು ಐಶ್ವರ್ಯ ದೊರಕುವುದೆಂದು ತಿಳಿಯದು. ನನ್ನ ಪತಿ ಅಥವಾ ಪುತ್ರನು ಸಂಪಾದಿಸುತ್ತಾನೆ ಮತ್ತು ಉಳಿದವರು ಕುಳಿತು ಏನೂ ಸಂಪಾದನೆ ಮಾಡದೆ ಊಟ ಮಾಡುತ್ತಾರೆಂದು ಎಂದಿಗೂ ತಿಳಿಯಬಾರದು. ಎಲ್ಲರ ಭಾಗವೂ ಇರುವುದರಿಂದ ಅವರವರು

ಅವರವರ ಭಾಗ್ಯಕ್ಕನುಸಾರವಾಗಿ ಊಟ ಮಾಡುತ್ತಾರೆ. ನೀನು ಇದರಲ್ಲಿ ನಿಮಿತ್ತಳಾಗುತ್ತಿರುವುದು ನಿನ್ನ ಸೌಭಾಗ್ಯವಾಗಿದೆ. ನಾರಿಯರು ಬರುತ್ತಲೇ ಸಹೋದರರಾದ ಅಣ್ಣತಮ್ಮಂದಿರಲ್ಲಿ ಒಡಕು, ವಿದ್ವೇಷಗಳುಂಟಾಗುತ್ತವೆ, ಮನೆಯಲ್ಲಿ ಜಗಳ-ಕದನಗಳು ಪ್ರಾರಂಭವಾಗಿ, ಪರಿಣಾಮವಾಗಿ, ಮನೆಯು ನಾಶವಾಗಿ ಹೋಗುತ್ತದೆ ಎಂಬ ಕಳಂಕ ಅವರ ಮೇಲಿದೆ. ಈ ಕಳಂಕವನ್ನು ತೊಡೆದು ಹಾಕಿ, ಪತಿ-ಪುತ್ರರಿಗೆ ತಿಳಿಯಹೇಳಿ ಸಾಧ್ಯವಾದಷ್ಟು ಅವಿಭಕ್ತ ಪರಿವಾರ, ಒಟ್ಟಿಗೇ ಭೋಜನ ನಡೆಯುವಂತೆ ಪ್ರಯತ್ನಿಸಬೇಕು. ಸೇವಾ ಭಾವನೆಯು ಹಾಗೂ ಪ್ರೇಮವು ಎಷ್ಟು ಹೆಚ್ಚಾಗುತ್ತದೆಯೋ ಅಷ್ಟೇ ತ್ಯಾಗವೂ ಹೆಚ್ಚುತ್ತದೆ. ಪ್ರೇಮದ ಭಿತ್ತಿಚಿತ್ರ ತ್ಯಾಗವೇ ಆಗಿದೆ. ಎಲ್ಲಿ ಪ್ರೇಮವಿರುವುದೋ ಅಲ್ಲಿ ಬೇರೆ-ಬೇರೆಯಾಗುವ ಪ್ರಶ್ನೆಯೇ ಉಂಟಾಗುವುದಿಲ್ಲ.

**ಭಕ್ತಿ-** ಜೀವನದ ಪ್ರತಿಯೊಂದು ಕರ್ಮದ ಮೂಲಕ ಭಗವಂತನ ಸೇವೆ ಮಾಡುವುದು, ಮನಸ್ಸಿನ ಪ್ರತಿಯೊಂದು ಸಂಕಲ್ಪದ ಮೂಲಕ ಪ್ರಭುವಿನ ಚಿಂತನೆ, ಪ್ರಭುವಿನಲ್ಲಿ ಆತ್ಮಸಮರ್ಪಣೆ, ಪ್ರಭುವನ್ನು ಪಡೆಯುವ ಉತ್ಕಟೇಚ್ಛೆ- ಇವೆಲ್ಲ ಭಕ್ತಿಯ ಮುಖ್ಯ ರೂಪಗಳಾಗಿವೆ. ಇದರ ವಿಭಿನ್ನ ವಿಧಾನಗಳಿವೆ. ಅವುಗಳನ್ನರಿತು ಯಥಾಸಾಧ್ಯವಾಗಿ ಪ್ರತಿದಿನ ನಿಯಮಿತ ರೂಪದಿಂದ ಭಗವಂತನ ನಾಮಜಪ, ಚಿಂತನ, ಅವನ ಲೀಲೆ ಮತ್ತು ಕಥೆಗಳನ್ನು ಕೇಳುವುದು-ಓದುವುದು, ಮತ್ತು ಮನನ, ಅವನ ದಿವ್ಯ ಸ್ವರೂಪದ ಧ್ಯಾನ, ಅವನ ಆಜ್ಞಾಪಾಲನೆ, ಅವನ ವಾಣಿಯಾದ ಶ್ರೀಮದ್ಭಗವದ್ಗೀತೆ, ಅವನ ಚರಿತ್ರೆ ಶ್ರೀರಾಮಾಯಣ ಹಾಗೂ ಭಾಗವತಾದಿಗಳ ಅಧ್ಯಯನ ಮಾಡಬೇಕು.

**ಸರಳತೆ-** ತನು, ಮನ ಹಾಗೂ ವಚನದಲ್ಲಿ ಎಲ್ಲಿಯೂ ತೋರಿಕೆ, ಜಂಭ, ಬಾಹ್ಯಶೃಂಗಾರ, ಶೋಕಿ, ಕುಟಿಲತೆಗಳಿರಬಾರದು. ಠೀವಿಯ, ಹೊಳೆಯುವ ಹಾಗೂ ವಿದೇಶೀ ರೀತಿಯ ವಸ್ತ್ರಾದಿಗಳು, ಒಡವೆ ಹಾಗೂ ಸೆಂಟ್ (ಪರಿಮಳ) ಮೊದಲಾದವು ಯಾವುವು ಜನರನ್ನು ಆಕರ್ಷಿಸುವುವೋ ಅವುಗಳನ್ನು ಉಪಯೋಗಿಸಬಾರದು. ಎಲ್ಲ ವಸ್ತುಗಳಲ್ಲಿ ಸರಳತೆ ಹಾಗೂ ಸಾತ್ತ್ವಿಕತೆಯಿರಬೇಕು.

**ಸತೀತ್ವ-** ಇದು ನಾರಿಯ ಸರ್ವೋತ್ತಮವಾದ ಮತ್ತು ಅನಿರ್ವಾವಾದ ಆವಶ್ಯಕ ಗುಣವಾಗಿದೆ. ಇದಿಲ್ಲದಿರುವ ನಾರಿಯು ಪ್ರಾಣರಹಿತ ಶವದಂತೆ ದೋಷಯುಕ್ತಳಾಗುತ್ತಾಳೆ.

□□

# ೧೬. ನಾರಿಯ ದೂಷಣೆಗಳು

ಕಲಹ- ಮಾತುಮಾತಿಗೆ ಜಗಳ-ಕದನ ಮಾಡಲು ಸಿದ್ಧಳಾಗುವುದು, ಜಗಳವಾಡದೆ ಸಮಾಧಾನ ಇಲ್ಲದಿರುವುದು, ಮನೆಯಲ್ಲಿ ಹಾಗೂ ನೆರೆ-ಹೊರೆಯಲ್ಲಿ ಯಾರೊಡನೆಯೂ ಸಂತೋಷದಿಂದ ಇಲ್ಲದಿರುವುದು ಕಲಹದ ಸ್ವರೂಪವಾಗಿದೆ. ಇದು ಬಹಳ ದೊಡ್ಡ ದೋಷವಾಗಿದೆ. ಯಾವ ಸ್ತ್ರೀಯು ಕಲಹವಾಡಿ ತನ್ನ ದೋಷವನ್ನು ಕಳೆದುಕೊಂಡು ತನ್ನ ಪ್ರಧಾನತೆಯನ್ನು ಸ್ಥಾಪಿಸಲು ಬಯಸುತ್ತಾಳೆಯೋ ಅವಳಿಗೆ ಪರಿಣಾಮದಲ್ಲಿ ದೋಷ ಮತ್ತು ತಿರಸ್ಕಾರಗಳೇ ಪ್ರಾಪ್ತವಾಗುತ್ತವೆ. ಜಗಳಗಂಟಿ ಸ್ತ್ರೀಯನ್ನು ಎಲ್ಲರೂ ತಿರಸ್ಕಾರದಿಂದ ಕಾಣುತ್ತಾರೆ. ಅನೇಕ ವೇಳೆ ತನ್ನ ಪತಿ-ಪುತ್ರರಿಗಾಗಿ, ಬೇರೆಯವರೊಡನೆ ಕಲಹಕ್ಕಿಳಿದಾಗ ಆ ಪತಿ-ಪುತ್ರರೇ ಬೇಸರಪಟ್ಟು ಅವಳನ್ನು ವಿರೋಧಿಸುತ್ತಾರೆ. ಕಲಹದಿಂದ ಅವಳ ಸುಖ-ಶಾಂತಿಗಳಂತೂ ನಾಶವಾಗುತ್ತವೆ, ಜೊತೆಗೆ ಇಡೀ ಪರಿವಾರದಲ್ಲಿ ಕಲಹ ಹರಡಿಹೋಗುತ್ತದೆ. ಅತ್ತೆ-ಮಾವ, ಪತಿ-ಪುತ್ರ-ಕನ್ಯೆ ಮತ್ತು ಕೆಲಸಗಾರರು ಹೀಗೆ ಎಲ್ಲರ ಮನಸ್ಸಿನಲ್ಲಿ ಉದ್ವೇಗ ಉಂಟಾಗುತ್ತದೆ. ಮನೆಯ ಕೆಲಸ-ಕಾರ್ಯಗಳಲ್ಲಿ ವಿಶೃಂಖಲತೆಯುಂಟಾಗುತ್ತದೆ. ಪತಿಯ ಮನಸ್ಸು ವ್ಯವಹಾರದಲ್ಲೇ ಆಗಲಿ ಆಫೀಸಿನ ಕೆಲಸ-ಕಾರ್ಯಗಳಲ್ಲಾಗಲೀ ತೊಡಗುವುದಿಲ್ಲ, ರೋಗಿಗೆ ದೊರಕಬೇಕಾದ ಔಷಧ ಮತ್ತು ಪಥ್ಯೋಪಚಾರಗಳು ಲಭ್ಯವಾಗುವುದಿಲ್ಲ. ಯಾವ ಕುಟುಂಬದಲ್ಲಿ ಕಲಹಕಾರಿಣಿಯಾದ ಕರ್ಕಶ ಸ್ತ್ರೀ ಇರುತ್ತಾಳೋ, ಅವಳ ದುರ್ಭಾಗ್ಯಕ್ಕೆ ಕೊನೆಯಿಲ್ಲ. ಮೂದಲಿಸುವುದು, ಇಲ್ಲ - ಸಲ್ಲದ್ದನ್ನು ಸೇರಿಸಿ ದೋಷಾರೋಪಣೆ ಮಾಡುವುದು, ಇತರರನ್ನು ಬೈಯ್ಯುವುದು ತಾನು ಬೈಯಿಸಿಕೊಳ್ಳುವುದು ಇವು ಕಲಹಕಾರಿಣಿಯ ಸ್ವಭಾವದಲ್ಲಿ ಸೇರಿವೆ. ಆದಕಾರಣ ಆವೇಶದಿಂದ ಅವಳ ಬಾಯಲ್ಲಿ ಹೊರಟ ಮಾತುಗಳನ್ನು ಕೇಳಿ ನಾಚಿಕೆಯುಂಟಾಗುತ್ತದೆ. ನಾಲಿಗೆಯ ಆಘಾತದಿಂದಾದ ಗಾಯವು ಮಾಯುವಂತಹುದಲ್ಲ. ಕ್ರೋಧಾವೇಶದಲ್ಲಿ ನಾರಿಯು ತನ್ನ ಮನೆ-ಪರಿವಾರದವರಿಗೆ ಕ್ರೂರವಾದ ಶಬ್ದಗಳನ್ನು ಹೇಳಿಬಿಡುತ್ತಾಳೆ. ಹೀಗಾಗಿ ಜನ್ಮದಿಂದ ನಡೆದು ಬಂದಿರುವ ಪ್ರೇಮವು ಇದ್ದಕ್ಕಿದ್ದಂತೆ ನಾಶವಾಗಿ ಹೋಗುತ್ತದೆ ಹಾಗೂ ಜೀವನ ಪರ್ಯಂತ ಪರಸ್ಪರ ವೈರವು ಸ್ಥಿರವಾಗುತ್ತದೆ. ಕ್ರೋಧಭರಿತಳಾಗಿ ನಾರಿಯು ಎಂತಹ ಕಾರ್ಯಮಾಡಿಬಿಡುವಳೆಂದರೆ - ಅವಳು ಸ್ವತಃ ತನ್ನ ಗಂಡನ ದೃಷ್ಟಿಯಲ್ಲಿ ಕೀಳಾಗಿ ಹೋಗುತ್ತಾಳೆ ಮತ್ತು ಜೀವನ ಪರ್ಯಂತ ದುಃಖಪಡುತ್ತಾಳೆ. ಸ್ತ್ರೀಯು ಯಾವಾಗ ಪತಿಯ ದೃಷ್ಟಿಯಲ್ಲಿ ಕೀಳಾಗುತ್ತಾಳೋ ಆಗ ಅವಳು ಎಲ್ಲರ ದೃಷ್ಟಿಯಲ್ಲಿಯೂ ಕೀಳಾಗಿ ಹೋಗುತ್ತಾಳೆ; ಆದ್ದರಿಂದ ನಾರಿಯು ಈ ನೀಚ ದೋಷದಿಂದ ಮುಕ್ತಳಾಗಿರಬೇಕು.

**ನಿಂದೆ-ಹಿಂಸೆ-ದ್ವೇಷ** - ನಾಲ್ವರು ಸ್ತ್ರೀಯರು ಸೇರಿದರೆಂದರೆ ಪರಚರ್ಚೆ ಪ್ರಾರಂಭವಾಯಿತೆಂದರ್ಥ. ಪರರಚರ್ಚೆಯಲ್ಲಿ ಇತರರ ಗುಣಗಳ ಆಲೋಚನೆಯಾಗುವುದಾದಲ್ಲಿ ಯಾವ ಹಾನಿಯೂ ಇಲ್ಲ; ಆದರೆ ಹೀಗಾಗುವುದಿಲ್ಲ. ಈ ದಿನಗಳಲ್ಲಿ ಮಾನವ-ಸ್ವಭಾವದಲ್ಲಿ ಈ ಒಂದು ದೌರ್ಬಲ್ಯ ಉಂಟಾಗಿದೆ. ಅವನು ಇತರರ ಗುಣಗಳನ್ನು ನೋಡುವುದಿಲ್ಲ, ದೋಷವನ್ನೇ ನೋಡುತ್ತಾನೆ. ಒಂದೊಂದು ಬಾರಿ ದೋಷವನ್ನು ನೋಡುತ್ತ-ನೋಡುತ್ತ ದೃಷ್ಟಿಯು ಸಹ ದೋಷಯುಕ್ತವಾಗುತ್ತದೆ. ನಂತರ ಅವನಿಗೆ ಸದಾ ಸರ್ವತ್ರ ದೋಷವೇ ಕಾಣುತ್ತದೆ ಮತ್ತು ದೋಷವು ಕಂಡುಬಂದಿತೆಂದಾಗ ನಿಂದೆಯೇ ಪ್ರಾರಂಭವಾಗುತ್ತದೆ, ಸ್ತುತಿ ಹೇಗಾಗುತ್ತದೆ? ನಿಂದೆಯಿಂದ ದೋಷಗಳ ಚಿಂತನೆಯಾಗುತ್ತದೆ; ಯಾರ ನಿಂದೆಯಾಗುತ್ತದೋ ಅವರೊಡನೆ ದ್ವೇಷ ಹೆಚ್ಚುತ್ತದೆ. ದ್ವೇಷದ ಪರಿಣಾಮ ಹಿಂಸೆ. ಆದ್ದರಿಂದ ಪರನಿಂದ ಯೋಗ್ಯವಲ್ಲ. ಉಚಿತವಾದುದೇನೆಂದರೆ - ಪರಚರ್ಚೆಯೇ ಆಗದಿರಲಿ, ಇಲ್ಲವೇ ಭಗವಚ್ಚರ್ಚೆ ಅಥವಾ ಸತ್ ಚರ್ಚೆಯಾಗಲಿ. ಪರಚರ್ಚೆಯಾದಲ್ಲಿ ಗುಣಗಳ ಚರ್ಚೆಯಾಗಲಿ, ದೋಷಗಳದ್ದಲ್ಲ. ಇದರಿಂದ ಸರ್ವರಿಗೂ ಶಾಂತಿ ದೊರಕುವುದು ಹಾಗೂ ಮಕ್ಕಳು ಸಹ ಇದೇ ಆದರ್ಶದಲ್ಲಿ ಬೆಳೆಯುತ್ತಾರೆ. ನಿಂದೆಯಂತೆಯೇ ಚಾಡಿ ಹೇಳುವುದೂ ದೋಷವಾಗಿದೆ. ಅದರಿಂದಲೂ ನಮ್ಮನ್ನು ಕಾಪಾಡಿಕೊಳ್ಳಬೇಕು. ಚಾಡಿ ಹೇಳಿ ನಾರಿಯರು ಮನೆಯಲ್ಲಿ ಪರಸ್ಪರ ಜಗಳವಾಡಿಸಿ ಮನೆಯು ನಾಶವಾಗುವುದಕ್ಕೆ ಕಾರಣರಾಗುತ್ತಾರೆ. ಇದು ಸರ್ವಥಾ ಅನುಚಿತ ಹಾಗೂ ಹಾನಿಕರವಾದುದು.

**ಈರ್ಷ್ಯೆ-** ಇತರರ ಉನ್ನತಿಯನ್ನು ನೋಡಿ, ಅವರು ಹಣ-ಪುತ್ರ ಮೊದಲಾದವರೊಡಗೂಡಿ ಸುಖವಾಗಿರುವುದನ್ನು ನೋಡಿ ಹೊಟ್ಟೆಯುರಿಪಡುವುದು ಈರ್ಷೆ 'ಅಸೂಯೆ'ಆಗಿದೆ. ಇದು ಬಹಳ ಕೆಟ್ಟ ದೋಷವಾಗಿದ್ದು ಪ್ರಾಯಶಃ ಎಲ್ಲ ಸ್ತ್ರೀಯರಲ್ಲಿರುತ್ತದೆ. ಇದರ ದೆಸೆಯಿಂದ ಅನೇಕ ಅನರ್ಥಗಳ ಉತ್ಪತ್ತಿಯಾಗುತ್ತದೆ. ಆದಕಾರಣ ಇದರಿಂದಲೂ ಪಾರಾಗುವುದು ಆವಶ್ಯಕವಾಗಿದೆ.

**ಭೇದವು** - ಇದು ನಾರಿಯರಲ್ಲಿ ಸಾಮಾನ್ಯವಾಗಿ ಇರುವ ದೋಷವಾಗಿದೆ. ಆದ್ದರಿಂದ ಅವರು ಮನೆಯವರ ಮತ್ತು ಕೆಲಸಗಾರರ ಊಟ-ತಿಂಡಿಗಳಲ್ಲಿ ಭೇದ ಮಾಡುತ್ತಾರೆ; ತಮ್ಮ ಪತಿ-ಪುತ್ರರು ಹಾಗೂ ಮನೆಯ ಅತ್ತೆ-ಮಾವ, ಭಾವ, ಮೈದುನ, ನಾದಿನಿ ಮೊದಲಾದವರಲ್ಲಿ ಹಾಗೂ ಅವರ ಸಂತಾನಗಳಲ್ಲಿ, ಊಟ-ಉಡಿಗೆ,

ವಸ್ತ್ರಾದಿಗಳಲ್ಲಿ ಹಾಗೂ ವ್ಯವಹಾರದಲ್ಲಿ ಭೇದ ಮಾಡುತ್ತಾರೆ. ಬೊಂಬಾಯಿಯ ಒಂದು ಪ್ರತಿಷ್ಠಿತ ಕುಟುಂಬದ ಸೊಸೆಯು ತನ್ನ ಪತಿಗೆಂದು ಮೊಸರನ್ನು ಮುಚ್ಚಿಟ್ಟುಕೊಂಡಿದ್ದಳು. ವಿದುರನಾದ ಮಾವನವರು ಕೇಳಿದಾಗಲೂ ಅವಳು ಸುಳ್ಳು ಹೇಳಿದಳು. ಇದರ ಪರಿಣಾಮವೇನಾಯಿತೆಂದರೆ - ಮಾವನು ವೃದ್ಧಾಪ್ಯದಲ್ಲಿ ಎರಡನೇ ಬಾರಿಗೆ ವಿವಾಹವಾದ ಮತ್ತು ಮುಂದೆ ಆ ಸೊಸೆಗೆ ಮತ್ತು ಮಗನಿಗೆ ಅವನ ಧನ-ಸಂಪತ್ತಿನಲ್ಲಿ ಏನೂ ದೊರಕಲಿಲ್ಲ, ತನ್ನದೇ ಮಗ, ಮಗಳ ವಿಷಯದಲ್ಲಿ ಸಹ ಸ್ತ್ರೀಯರು ಭೇದಮಾಡುವುದು ಕಾಣಬರುತ್ತದೆ. ಮಗನಿಗೆ ರುಚಿಕರವಾದ ಭೋಜನ, ಅಂದವಾದ ಉಡುಗೆ; ಹುಡುಗಿಗೆ ಸಾಮಾನ್ಯವಾದ ಭೋಜನ, ಉಡುಗೆ-ತೊಡುಗೆ, ಮಗನು ತನ್ನ ತಂಗಿಗೆ ಹೊಡೆಯುತ್ತಿದ್ದರೆ ತಾಯಿಯು ನಗೆ ಬೀರುತ್ತಾಳೆ ಮತ್ತು ಮಗಳಿಗೆ ಸಹಿಸಿಕೋ ಎಂದು ಉಪದೇಶಿಸುತ್ತಾಳೆ. ಅದೇ ತಂಗಿಯು ಏನಾದರೂ ಅಣ್ಣನನ್ನು ತುಸು ಹೆದರಿಸಿದರೂ ತಾಯಿಯು ಅವಳನ್ನು ಹೊಡೆಯಲು ಧಾವಿಸುತ್ತಾಳೆ. ಆದರೆ ಈ ಭೇದವು ಕನ್ಯೆಯ ವಿವಾಹವಾಗುವವರೆಗೆ ಮಾತ್ರ ಇರುತ್ತದೆಯೆನ್ನುವುದು ಆಶ್ಚರ್ಯದ ಸಂಗತಿ. ವಿವಾಹವಾದನಂತರ ತಾಯಿಯು ತನ್ನ ಕನ್ಯೆಯನ್ನು ವಿಶೇಷವಾಗಿ ಸೊಸೆಯ ಬಗೆಗೆ ದುರ್ವ್ಯವಹಾರ ಮತ್ತು ಮಗಳ ವಿಷಯವಾಗಿ ಸದ್ವ್ಯವಹಾರವನ್ನು ಮಾಡುತ್ತಾಳೆ. ಈ ಭೇದದಿಂದಲೂ ಸಹ ಮನೆ ಒಡೆಯುತ್ತದೆ. ನಾರಿಯರು ಈ ವ್ಯವಹಾರ ಭೇದವನ್ನು ಸರ್ವಥಾ ತ್ಯಾಗಮಾಡಬೇಕು.

**ವಿಲಾಸ-ಷೋಕಿ-** ಈ ದೋಷವು ಈ ದಿನಗಳಲ್ಲಿ ಬಹಳ ಹೆಚ್ಚಾಗಿ ಹೋಗಿದೆ. ಭ್ರಷ್ಟವಾದ ಸುಗಂಧಿತ ಎಣ್ಣೆ, ಸಾಬೂನು, ಕ್ರೀಮ್, ಪೌಡರ್, ಸ್ನೋ, ಸೆಂಟ್, ಮೊದಲಾದ ಶೃಂಗಾರ ಪ್ರಸಾಧನಗಳು, ಆಕರ್ಷಕವಾದ ವಿದೇಶೀ ಮಾದರಿ ಒಡವೆ-ಬಟ್ಟೆ ಮೊದಲಾದುವುಗಳು ಹೆಚ್ಚಿದವು. ಆದರಿಂದ ಮನೆಗೆ ಸಂಬಂಧಿಸಿದ ಇತರೆ ಖರ್ಚುಗಳನ್ನು ನಡೆಸುವುದು ಕಷ್ಟವಾಗಿ ಹೋಗಿದೆ. ಪತ್ನಿಯರ ವಿಲಾಸತೆಯ ವಸ್ತುಗಳ ಬೇಡಿಕೆಯು ಪತಿಯರನ್ನು ಬೇಸರಕ್ಕೀಡುಮಾಡಿದೆ. ಈ ವಿಷಯವಾಗಿಯೇ ಮನೆಗಳಲ್ಲಿ ಪ್ರತಿದಿನ ಪರಸ್ಪರ ಜಗಳಗಳಾಗುತ್ತವೆ. ಇದು ಭಾರತೀಯ ನಾರಿಯರಿಗೆ ಕಲಂಕಪ್ರಾಯವಾದುದು. ಶೃಂಗಾರವಾದರೋ ಪತಿಯನ್ನು ಪ್ರಸನ್ನಗೊಳಿಸಲು ಇರುವುದು, ಪ್ರಪಂಚಕ್ಕೆ ತೋರಿಸುವುದಕ್ಕೆ ಅಲ್ಲ, ಈ ದಿನಗಳ ಫ್ಯಾಶನ್ ಮತ್ತು ವಿಲಾಸತೆಯು

ಸ್ತ್ರೀಯರನ್ನು ಬಹಳ ಕೀಳು ಮಾಡಿದೆ. ವೇಷಭೂಷಣದಲ್ಲಿ ಗಂಟೆಗಟ್ಟಳೆ ಸಮಯ ಕಳೆಯುವುದು, ವೆಚ್ಚವನ್ನು ಅತ್ಯಧಿಕವಾಗಿ ಹೆಚ್ಚಿಸುವುದು, ಮುಂದೆ ಮುಂದೆ ಇಮ್ಮಡಿ ದುಃಖಕ್ಕೀಡುಮಾಡುವ ದುರಭ್ಯಾಸಗಳಿಗೆ ತುತ್ತಾಗುವುದು ಮತ್ತು ಮನೆಯ ಕೆಲಸಕಾರ್ಯಗಳಲ್ಲಿ ನೆರವಾಗದಿರುವುದು - ಇವು ಷೋಕಿಯ ಕಾರಣದಿಂದ ಉಂಟಾಗುವ ಬಹುದೊಡ್ಡ ದೋಷಗಳಾಗಿವೆ. ಆರೋಗ್ಯ ಮತ್ತು ಸ್ವಚ್ಛತೆಗೆ ಅಗತ್ಯವಾದ ಉಪಕರಣಗಳನ್ನು ಇಟ್ಟುಕೊಳ್ಳುವುದರಲ್ಲಿಯಾಗಲೀ, ಸ್ವಚ್ಛವಾಗಿರುವುದರಲ್ಲಾಗಲೀ ದೋಷವಿಲ್ಲ. ಸ್ವಚ್ಛವಾಗಿ, ಅಂದವಾಗಿ ಇರುವುದು ಆವಶ್ಯಕ. ದೋಷವಾದರೋ ತ್ಯಾಜ್ಯವಾದ ಷೋಕಿ ಭಾವನೆಯಲ್ಲಿದೆ.

**ದುಂದುವೆಚ್ಚ-** ಷೋಕಿಭಾವನೆಯ ಜೊತೆಗೇ ಬೇರೆ ಸ್ತ್ರೀಯರನ್ನು ಅನುಕರಣ-ಮಾಡಿ ಹಾಗೂ ಮೂರ್ಖತೆಯಿಂದ ಮತ್ತು ಸಂಗ್ರಹಿಸುವ ಅಭ್ಯಾಸದಿಂದಲೂ ಈ ದೋಷ ಹೆಚ್ಚಾಗುತ್ತದೆ. ತನ್ನ ಸಂಪಾದನೆಗಿಂತ ಕಡಿಮೆ ವೆಚ್ಚಮಾಡುವ ಗೃಹಸ್ಥನು ಸುಖಿಯಾಗಿರುತ್ತಾನೆ. ಚತುರ ಮತ್ತು ವಿಚಾರ ಕುಶಲಿಯಾದ ಬುದ್ಧಿಮತಿ ಸ್ತ್ರೀಯು ಒಂದು ಪೈಸೆಯನ್ನೂ ವ್ಯರ್ಥವಾಗಿ ಖರ್ಚುಮಾಡುವುದಿಲ್ಲ. ಜನರು ಕೊಂಡುಕೊಳ್ಳುವುದನ್ನು ನೋಡಿ ನೋಡಿ ಅನಾವಶ್ಯಕವಾದ ಪದಾರ್ಥಗಳನ್ನು ಕೊಂಡುಕೊಳ್ಳುವುದಿಲ್ಲ. ಅಡಿಗೆ ಮಾಡುವುದು ಹಾಗೂ ವಸ್ತ್ರಾಭೂಷಣಗಳಲ್ಲಿ ಸರಳ ವ್ಯವಹಾರ ಮಾಡುತ್ತಾಳೆ. ಮಕ್ಕಳಿಗೆ ಸ್ನಾನಮಾಡಿಸಿ-ಬಟ್ಟೆಯೊಗೆದು ಶುದ್ಧವಾದ-ಸಾಮಾನ್ಯವಾದ ಬಟ್ಟೆಗಳನ್ನು ತೊಡಿಸಿ ಅವರುಗಳ ಮನಸ್ಸಿನಲ್ಲಿ ಸರಳತೆ-ಸ್ವಚ್ಛತೆಗಳಲ್ಲಿಯೇ ಗೌರವ-ಬುದ್ಧಿಯನ್ನು ಹುಟ್ಟಿಸಿ ಸುಂದರವಾಗಿ - ಅಂದವಾಗಿ ಇಡುತ್ತಾಳೆ. ಇದರಿಂದಾಗಿ ಅವರ ಅಭ್ಯಾಸ ಕೆಡುವುದಾಗಲಿ, ಖರ್ಚು - ವೆಚ್ಚ ಅಧಿಕವಾಗಲೀ ಆಗುವುದಿಲ್ಲ. ಖರ್ಚಿಗಂತೂ ಎಲ್ಲೆಯೇ ಇಲ್ಲ. ಅಪವ್ಯಯ ಮಾಡಿದಲ್ಲಿ ತಿಂಗಳಿಗೆ ಸಾವಿರಾರು ರೂಪಾಯಿಗಳೂ ಸಾಲದಾಗುತ್ತವೆ. ಯೋಚಿಸಿ-ತಿಳಿದು ಖರ್ಚುಮಾಡುವುದರಿಂದ ಈ ತುಟ್ಟಿದಿನಗಳಲ್ಲಿಯೂ ಸಹಜವಾಗಿ ತನ್ನ ಸಂಪಾದನೆಯಲ್ಲಿಯೇ ನಡೆದು ಹೋಗುತ್ತದೆ. ಸ್ತ್ರೀಯರು ಲೆಖ್ಖ-ಪತ್ರವಿಡುವುದನ್ನು ಕಲಿಯಬೇಕು. ಮತ್ತು ಸಂಪಾದನೆಯಲ್ಲಿ ಸ್ವಲ್ಪ ಹಣವನ್ನು ಉಳಿಸಿ ಇಡಬೇಕು, ಹೀಗೆ ನಿಶ್ಚಿಯಿಸಿಯೇ ಖರ್ಚುಮಾಡಬೇಕು. 'ಹಾಸಿಗೆಯಿದ್ದಷ್ಟು ಕಾಲುಚಾಚು' ಎಂದಿದ್ದಾರೆ ತಿಳಿದವರು.

**ಗರ್ವ-ಅಭಿಮಾನ-** ಕೆಲವು ಸ್ತ್ರೀಯರು ತಮ್ಮ ಪತಿ-ಪುತ್ರರ ಹಣ ಅಥವಾ ಒಡವೆ-ವಸ್ತುಗಳ ಗರ್ವವನ್ನು ಅಹಂಕಾರದ ಮಾತು ಮತ್ತು ವ್ಯವಹಾರದಲ್ಲಿ ತೋರಿಸಿ

ಅಸಭ್ಯರಾಗುತ್ತಾರೆ. ಮನೆಯಲ್ಲಿರುವವರು ಅವಳೊಡನೆ ಮಾತನಾಡಲು ಹೆದರುತ್ತಾರೆ ಮತ್ತು ಅಪಮಾನವೆಂದು ತಿಳಿಯುತ್ತಾರೆ. ಇಂತಹ ಸ್ತ್ರೀಯು ಅರ್ಥವಿಲ್ಲದೆ ಎಲ್ಲರನ್ನೂ ತನ್ನ ದ್ವೇಷಿಗಳನ್ನಾಗಿಸಿಕೊಳ್ಳುತ್ತಾಳೆ. ಆದ್ದರಿಂದ ಯಾವುದೇ ವಿಷಯ ಅಥವಾ ವಸ್ತುವಿನ ವಿಚಾರದಲ್ಲಿ ಗರ್ವ ಪಡಬಾರದು.

**ತೋರಿಕೆ-** ನಾರಿಯರು ಏನನ್ನಾದರೂ ಮಾಡಿದರೆ ಇತರರಿಗೆ ತೋರಿಸಿ ಮಾಡಬೇಕೆಂದು ತಿಳಿಯುತ್ತಾರೆ - ಇದು ಅವರ ಸ್ವಭಾವದಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಮಗಳು ಅಥವಾ ನಾದಿನಿಗೆ ಏನನ್ನಾದರೂ ಕೊಡುತ್ತಾಳಾದರೆ ಅದನ್ನವಳಿಗೆ ಮೊದಲು ತೊಡಿಸಿ, ಅಲಂಕಾರಮಾಡಿ ಜನರಿಗೆ ತೋರಿಸಿ ನಂತರ ಕೊಡುತ್ತಾಳೆ. ಅಲ್ಲಲ್ಲಿ ಹೆಚ್ಚು-ಹೆಚ್ಚು ವಸ್ತುಗಳನ್ನು ತೋರಿಸಿ ಕಡಿಮೆ ಕೊಡುವುದೂ ಕಾಣಬರುತ್ತದೆ. ಇದರಿಂದ ಅವರಿಗೆ ದುಃಖ ಉಂಟಾಗುತ್ತದೆ. ಇದೇ ಪ್ರಕಾರವಾಗಿ ಯಾವುದಾದರೂ ಪರಿವಾರದ, ಹೊರಗಿನ ಅಥವಾ ಅಭಾವಗ್ರಸ್ತ ಪುರುಷ ಅಥವಾ ಸ್ತ್ರೀಯು, ಯಾವಾಗಲಾದರೂ ಏನಾದರೂ ಸೇವೆ ಮಾಡಿದರೆ ಇತರರಿಗೆ ನಮ್ಮ ಸೇವೆಯ ಅರಿವು ಉಂಟಾಗಬೇಕೆಂದು ಯೋಚಿಸುತ್ತಾರೆ. ಅಂತಹವರ ಅಭಿಪ್ರಾಯದಲ್ಲಿ ಬಹುಶಃ ಮಾಡಿದ ಸೇವೆಯು ಇತರರಿಗೆ ತಿಳಿಯದಿದ್ದರೆ ಸೇವೆಯೇ ಅಲ್ಲವೆಂದಿರಬೇಕು. ಸೇವೆಮಾಡಿ ಹೇಳಿಕೊಳ್ಳುವುದು, ಉಪಕಾರ ಮಾಡುವುದು, ಮತ್ತು ಅದಕ್ಕೆ ಬದಲಾಗಿ ಕೃತಜ್ಞತೆ ಮತ್ತು ಹೊಗಳಿಕೆಯನ್ನು ಪಡೆಯುವುದೇ ಸೇವೆಯ ಸಾಫಲ್ಯದ ಗುರುತೆಂದು ಭಾವಿಸಲಾಗುತ್ತದೆ. ಇದು ಬಹಳ ದೊಡ್ಡ ದೋಷವೇಸರಿ. ಕೊಡುವುದು ನಿಜವಾಗಿ ಸಾತ್ತ್ವಿಕವಾಗಬೇಕಾದಲ್ಲಿ ಯಾರಿಗೂ ಅದರ ಅರಿವು ಇರಬಾರದು. ತೆಗೆದುಕೊಳ್ಳುವವನಿಗೂ ತಿಳಿಯದಿದ್ದಲ್ಲಿ ಅದು ಮತ್ತೂ ಶ್ರೇಷ್ಠವಾದುದು. ಕೃಷ್ಣನು ಕುಚೇಲನಿಗೆ ಕೊಟ್ಟ ರೀತಿಯನ್ನು ನೆನಪಿಡಬೇಕು.

**ವಿಷಾದ-** ಕೆಲವು ಸ್ತ್ರೀಯರು ಹಗಲು-ರಾತ್ರಿ ವಿಷಾದದಲ್ಲಿ ಮುಳುಗಿರುವುದನ್ನು ನೋಡುತ್ತೇವೆ. ಅವರ ಮುಖದ ಮೇಲೆ ನಗೆಯೇ ಇರುವುದಿಲ್ಲ, ದುಃಖ ಮತ್ತು ಕಷ್ಟಗಳಲ್ಲಿ ಹೀಗಾಗುವುದು ಸ್ವಾಭಾವಿಕವೇ, ಆದರೆ ಎಲ್ಲ ರೀತಿಯ ಸುಖ-ಸಂತೋಷಗಳಿದ್ದಾಗ್ಯೂ ಸದಾ ವಿಷಾದದಿಂದ ಕೂಡಿರುವುದು ಮತ್ತು ಏನನ್ನಾದರೂ ಕೇಳಿದಾಗ ಸಿಡಿಗುಟ್ಟುವುದು ದೊಡ್ಡ ದೋಷವಾಗಿದೆ. ಇದನ್ನು ಬಿಟ್ಟು ಸದಾ ಪ್ರಸನ್ನಳಾಗಿರಬೇಕು. ಪ್ರಸನ್ನತೆಯು ಸಾತ್ತ್ವಿಕ ಭಾವವಾಗಿದೆ.

ಪ್ರಸನ್ನನಾಗಿರುವ ಮನುಷ್ಯನು ಎಲ್ಲರಿಗೂ ಪ್ರಸನ್ನತೆಯನ್ನು ದಾನಮಾಡುತ್ತಾನೆ. ವಿಷಾದದಿಂದಿರುವ ಕ್ರೋಧಿಯಾದರೋ ವಿಷಾದ ಮತ್ತು ಕ್ರೋಧವನ್ನೇ ಹಂಚುತ್ತಾನೆ.

**ತಮಾಷೆ** - ಕೆಲವು ನಾರಿಯರಲ್ಲಿ ನಗೆಚಾಟಿಕೆ, ಹಾಸ್ಯದ ದೋಷವಿರುತ್ತದೆ. ಕೆಲವರಾದರೂ ಮೈದುನ ಅಥವಾ ನಾದಿನಿಯ ಗಂಡನೊಡನೆ ಅಸಹ್ಯಕರವಾದ ನಗೆಚಾಟಿಕೆ, ಹಾಸ್ಯ ಮಾಡುತ್ತಾರೆ. ಪರಿವಾರದ ಮತ್ತು ಮನೆಗೆ ಬಂದು-ಹೋಗುವ ಪುರುಷರೊಡನೆ ಹಾಗೂ ಸ್ತ್ರೀಯರೊಡನೆ ಹಾಸ್ಯ ಮಾಡುತ್ತಿರುತ್ತಾರೆ. ಹಸನ್ಮುಖಿಗಳಾಗಿರುವುದು ಗುಣವೇ ಆಗಿದೆ. ನಿರ್ದೋಷವಾದ ಮತ್ತು ಸೀಮಿತವಾದ ವಿನೋದವೂ ಕೆಟ್ಟದ್ದಲ್ಲ. ಆದರೆ ಎಲ್ಲಿ ತಮಾಷೆ ಅಭ್ಯಾಸವಾಗಿಬಿಡುತ್ತದೆಯೋ ಮತ್ತದರಿಂದ ಮೂದಲಿಕೆ, ವ್ಯಂಗ್ಯ, ಕಟುತ್ವ ಮತ್ತು ಅಶ್ಲೀಲತೆಯುಂಟಾದಾಗ ಅದರಿಂದಾಗಿ ಬಹಳ ಹಾನಿಯಾಗುತ್ತದೆ. ಸ್ತ್ರೀಯು ಮರ್ಯಾದಾ ಪೂರ್ವಕವಾಗಿ ಮಾತನಾಡುವವಳು, ಪ್ರಸನ್ನಮುಖಿ ಆಗಿ ಗಂಭೀರವಾಗಿರಬೇಕು.

**ವಾಚಾಳತ್ವ** - ಬಹುವಾಗಿ ಮಾತನಾಡುವುದೂ ದೋಷವೇ. ಇದರಲ್ಲಿ ಸಮಯ ನಷ್ಟ, ವ್ಯರ್ಥಚರ್ಚೆಯಲ್ಲಿ ಸುಳ್ಳು, ಪರನಿಂದೆ, ಚಾಡಿ ಮುಂತಾದವು ಕೂಡ ಆಗಿಹೋಗುತ್ತವೆ. ನಾಲಿಗೆಯಶಕ್ತಿ ನಾಶವಾಗಿ ಮನೆಗೆಲಸಗಳಲ್ಲಿ ನಷ್ಟವುಂಟಾಗುತ್ತದೆ. ಹರಟೆಹೊಡೆಯುವ ಸ್ತ್ರೀಯರು ಮನೆಯನ್ನು ನಾಶಮಾಡುತ್ತಾರೆ. ಆದ್ದರಿಂದ ನಾರಿಯು ವಿಚಾರಮಾಡಿ, ಸದಾ ಹಿತವಾದ, ಮಧುರವಾದ ಮಾತನ್ನಾಡಬೇಕು. ಆದರದೂ ಎಷ್ಟೋ ಅಷ್ಟೇ ಇರಬೇಕು - ಬಹಳ ಕಡಿಮೆ. ಹೆಚ್ಚು ಮಾತನಾಡುವವಳಿಗಂತೂ ಭಜನೆಗೆ ಅವಕಾಶ ಸಿಗುವುದಿಲ್ಲವಾದ್ದರಿಂದ ದೊಡ್ಡಹಾನಿಯುಂಟಾಗುತ್ತದೆ.

**ಆರೋಗ್ಯದ ಅಲಕ್ಷ್ಯ ಮತ್ತು ಅಪಥ್ಯ** - ಸ್ತ್ರೀಯರಲ್ಲಿ ಆರೋಗ್ಯದ ಬಗ್ಗೆ ಅಲಕ್ಷ್ಯಭಾವವಿರುವುದು ಸಾಮಾನ್ಯವಾಗಿ ಕಾಣಬರುತ್ತದೆ. ರೋಗವನ್ನು ಮುಚ್ಚಿಡುವುದಲ್ಲದೆ ಕುಪಥ್ಯ ಮಾಡುತ್ತಿರುತ್ತಾರೆ. ಮಾವನ ಮನೆಯಲ್ಲಿ ಅತ್ತೆಯ ಹೆದರಿಕೆಯಿಂದ ರೋಗವನ್ನು ಮುಚ್ಚಿಟ್ಟು, ರೋಗದ ಯಾತನೆಯನ್ನು ಅನುಭವಿಸುತ್ತ ಬಲವಂತವಾಗಿ, ಬಲಶಾಲಿಕಾರ್ಮಿಕರಂತೆ ಹಗಲು ಪೂರ್ತಿ ದುಡಿಯಬೇಕಾಗಿ ಬರುವ ಸೊಸೆಯರ ಮಾತು ಬೇರೆ. ಆದರೆ ಯಾರು ಪ್ರಮಾದವಶರಾಗಿ ಅಥವಾ ಔಷಧಿ-ಪಥ್ಯೋಪಚಾರಗಳಿಂದ ಹೆದರಿ ರೋಗವನ್ನು

ಮುಚ್ಚಿಹಾಕಿಕೊಳ್ಳುತ್ತಾರೋ ಅವರಂತೂ ತಮಗೂ ಮನೆಗೂ ಅನ್ಯಾಯ ಮಾಡುತ್ತಾರೆ. ಇದಲ್ಲದೆ, ಸ್ತ್ರೀಯರು ಪ್ರಾಯಶಃ ಆರೋಗ್ಯ ರಕ್ಷಣೆಯ ನಿಯಮಗಳನ್ನೂ ಅರಿಯರು, ಹಾಗೆ ಅಲ್ಪ-ಸ್ವಲ್ಪ ತಿಳಿದಿದ್ದರೂ ಲಕ್ಷ್ಯವಿಡುವುದಿಲ್ಲ. ಹೀಗೆ ಮಾಡಬಾರದು.

**ಮೋಹ** - ಕೆಲವು ಸ್ತ್ರೀಯರು ಮೋಹವಶರಾಗಿ ಮಕ್ಕಳಿಗೆ ಅಪವಿತ್ರ ವಸ್ತುಗಳನ್ನು ತಿನ್ನಿಸುತ್ತಾರೆ, ಅಪವಿತ್ರವಾಗಿಬಿಡುತ್ತಾರೆ, ತಿಳಿದೂ-ತಿಳಿದೂ ಅಪಥ್ಯ ಸೇವನೆ ಮಾಡಿಸುತ್ತಾರೆ, ಅವರುಗಳಿಗೆ ಸುಳ್ಳು ಹೇಳುವುದು, ನೌಕರರೊಡನೆ ಕೆಟ್ಟ ವ್ಯವಹಾರ ಮಾಡುವುದು, ಬೈಯ್ಯುವುದು ಮತ್ತು ಹೊಡೆಯುವ ಅಭ್ಯಾಸ ಮಾಡಿಸುತ್ತಾರೆ. ಅವರ ಕಳ್ಳತನ-ಸುಳ್ಳುತನಗಳನ್ನು ಸಹಿಸುತ್ತ ಅಂತಹ ಸ್ವಭಾವವನ್ನುಂಟುಮಾಡುತ್ತಾರೆ. ಓದಿ-ಬರೆಸುವುದರಲ್ಲಿ ಪ್ರಮಾದವೆಸಗುತ್ತಾರೆ; ಇದರ ಜೊತೆಗೆ ಯಾವ ಕೆಲಸವನ್ನು ಮಾಡಿಸದೆ ಹಗಲು-ರಾತ್ರಿ ಆಟ-ತಮಾಷೆ, ಸಿನಿಮಾ ಮುಂತಾದವುಗಳಿಗೆ ಕರೆದುಕೊಂಡು ಹೋಗಿ ವ್ಯರ್ಥವಾಗಿ ವೆಚ್ಚಮಾಡಿಸುವುದು, ಸೋಮಾರಿತನ, ಸದಾಚಾರ ರಹಿತ, ಕೊಳಕು, ರೋಗಗ್ರಸ್ತರು ಮತ್ತು ಕೆಟ್ಟ ಸ್ವಭಾವದವರನ್ನಾಗಿ ಮಾಡಿ ಅವರ ಭವಿಷ್ಯವನ್ನು ಕೆಡಿಸುತ್ತಾರೆ. ಇದರ ಫಲವಾಗಿ ಅವರುಗಳನ್ನೂ ದುಃಖಿತರಾಗಿಸಿ ತಾವೂ ಸಹ ದುಃಖಿತರಾಗುತ್ತಾರೆ. ಈ ದೋಷದಿಂದ ಮಕ್ಕಳ ಶೀಲ ಮತ್ತು ಸದಾಚಾರ ನಷ್ಟವಾಗಿ ಹೋಗುತ್ತದೆ ಮತ್ತು ಮಕ್ಕಳು ಕುಲದೀಪರಾಗದೆ ಕುಲನಾಶಕರಾಗುತ್ತಾರೆ. ಮಾತೆಯರು ವ್ಯರ್ಥವಾದ ಮೋಹಕ್ಕೆ ಒಳಗಾಗದೆ ಪುತ್ರ ಮತ್ತು ಕನ್ಯೆ ಇಬ್ಬರನ್ನೂ ಸಂಯಮಿಗಳಾಗಿ, ಧಾರ್ಮಿಕರಾಗಿ, ಸದಾಚಾರಿಗಳಾಗಿ ಮತ್ತು ಸದ್ಗುಣಸಂಪನ್ನರಾಗಿ ಮಾಡಬೇಕು. ಅದರಿಂದ ಅವರು ಸುಖಿಗಳಾಗುವುದಲ್ಲದೆ ತಮ್ಮ ಆಚರಣೆಯಿಂದ ಕುಲದ ಕೀರ್ತಿಗೆ ತಿಲಕಪ್ರಾಯರಾಗಬಲ್ಲರು.

**ಕುಸಂಗ** - ಸ್ತ್ರೀಯರು ಮರೆತೂ ಸಹ ಪರನಿಂದೆ ಮಾಡುವ, ಮುಖಸ್ತುತಿ ಮಾಡುವ, ಮಂತ್ರ - ತಂತ್ರ, ಯಕ್ಷಿಣಿ - ಮಾಟ ತಿಳಿಸುವ, ಪರಪುರುಷರ ಪ್ರಶಂಸೆಮಾಡುವ, ವಿಲಾಸಿನಿಯಾದ, ಹೆಚ್ಚು ವೆಚ್ಚಮಾಡುವ, ಎಲ್ಲಂದರಲ್ಲಿ ಅಲೆದಾಡುವ, ಜಗಳಗಂಟಿ ಮತ್ತು ಕುಲಟೆಯರಾದ ಸ್ತ್ರೀಯರ ಸಂಗ ಮಾಡಬಾರದು. ಇವರ ಸಂಗ ಕುಸಂಗವಾದುದು ಹಾಗೂ ಎಲ್ಲ ಪ್ರಕಾರಗಳಿಂದ ಪತನಕ್ಕೆ ಕಾರಣವಾಗಿದೆ.

**ಆಲಸ್ಯ** - ಸೋಮಾರಿತನ, ಪ್ರಮಾದ ಮತ್ತು ನಿದ್ರೆ ತಮೋಗುಣದ ಸ್ವರೂಪವಾಗಿವೆ. ತಮೋಗುಣದಿಂದ ಚಿತ್ತದಲ್ಲಿ ಮಲಿನತೆಯುಂಟಾಗಿ

ಜೀವನದಲ್ಲಿ ಪ್ರಗತಿಯ ಮಾರ್ಗ ನಿಂತುಹೋಗುತ್ತದೆ. ಆದ್ದರಿಂದ ಸ್ತ್ರೀಯರು ಸದಾ ಸತ್ಕರ್ಮಗಳಲ್ಲಿ ತೊಡಗಿರಬೇಕು ಮತ್ತು ಸೋಮಾರಿತನದಿಂದ ದೂರವಿರಬೇಕು.

**ವ್ಯಭಿಚಾರ** - ಸ್ತ್ರೀಯರಿಗೆ ಇದು ಅತಿ ದೊಡ್ಡ ದೋಷವಾಗಿದೆ. ಶರೀರದಿಂದ ಮಾತ್ರವಲ್ಲ, ಮಾತು ಮತ್ತು ಮನಸ್ಸಿನಲ್ಲಿಯೂ ಪರಪುರುಷನ ಸಂಗ ಮಾಡುವುದು ಮಹಾಪಾಪವಾಗಿದೆ. ಸತೀತ್ವದ ನಾಶವು, ಲೋಕದಲ್ಲಿ ನಿಂದೆಗೆ ಗುರಿಮಾಡುವುದು ಮತ್ತು ಪರಲೋಕವನ್ನು ಕೆಡಿಸುವುದಾಗಿದೆ. ಯಾವ ನಾರಿಯು ಹೀಗೆ ಮಾಡುತ್ತಾಳೋ ಅವಳ ಮುಖ ನೋಡುವುದೂ ಪಾಪ. ಅವಳು ಲಕ್ಷ-ಕೋಟಿ ವರ್ಷಗಳ ಪರ್ಯಂತ ನರಕಗಳ ಭಯಂಕರ ಯಾತನೆಯನ್ನು ಅನುಭವಿಸಬೇಕಾಗುತ್ತದೆ. ತದನಂತರ ಎಲ್ಲಿ ಜನ್ಮವಾಗುತ್ತದೋ, ಅಲ್ಲಿ ಪದೇ-ಪದೇ ಬಗೆ-ಬಗೆಯ ಭಯಂಕರ ಕಷ್ಟ-ಕಾರ್ಪಣ್ಯಗಳ ಭಾರವನ್ನು ಹೊತ್ತು ಜೀವನ ಪರ್ಯಂತ ಅಳುತ್ತಿರಬೇಕಾಗುತ್ತದೆ.

ಶ್ರೀ ತುಳಸೀದಾಸರು ಹೀಗೆ ಹೇಳುತ್ತಾರೆ-

**ಛನ ಸುಖ ಲಾಗಿ ಜನಮ ಸತ ಕೋಟೀ ।**
**ದುಖ ನ ಸಮುಝು ತೇಹಿ ಸಮ ಕೋ ಖೋಟೀ ॥**

ಯಾವ ಸ್ತ್ರೀಯು ಕ್ಷಣಮಾತ್ರದ ಇಂದ್ರಿಯ ಸುಖದಿಂದ ನೂರುಕೋಟಿ ಜನ್ಮಗಳ ದುಃಖವುಂಟೆಂದು ತಿಳಿಯುವುದಿಲ್ಲವೋ ಅವಳ ಸಮಾನ ಮಂದ ಬುದ್ಧಿಯುಳ್ಳವರು ಯಾರು?

❑❑

## ೧೭. ಲಜ್ಜೆಯು ನಾರಿಗೆ ಭೂಷಣ

**ಅಸಂತುಷ್ಟಾ ದ್ವಿಜಾ ನಷ್ಟಾಃ ಸಂತುಷ್ಟಾ ಏವ ಪಾರ್ಥಿವಾಃ ।**
**ಸಲಜ್ಜಾ ಗಣಿಕಾ ನಷ್ಟಾ ಲಜ್ಜಾಹೀನಾಃ ಕುಲಸ್ತ್ರೀಯಃ ॥**

ಸಂತೋಷಹೀನ ಬ್ರಾಹ್ಮಣ, ಸಂತೋಷೀ ರಾಜಾ, ಲಜ್ಜಾವತಿಯಾದ ವೇಶ್ಯೆ ಮತ್ತು ಲಜ್ಜಾಹೀನಳಾದ ಕುಲವಧು ಇವರ ನಾಶವು ನಿಶ್ಚಿತವಾಗಿದೆ.

ಯಾವ ಪ್ರಕಾರ ಸ್ತ್ರೀಯರಿಗೆ ಕಾರಾಗೃಹದ ಕರಾಳ-ಕೋಣೆಯಲ್ಲಿ ಸೆರೆಯಾಗಿರುವುದು ಅವರಿಗೆ ಹಾನಿಕರವಾಗಿದೆಯೋ ಅದೇ ಪ್ರಕಾರ- ಅದಕ್ಕಿಂತಲೂ

ಎಷ್ಟೋಪಟ್ಟು ಹೆಚ್ಚು ಸ್ತ್ರೀಯರಿಗೆ ಉಚಿತವಾದ ಲಜ್ಜೆಯನ್ನು ತ್ಯಜಿಸಿ ಪುರುಷರೊಡನೆ ನಿರಂಕುಶವಾಗಿ ಅಲೆಯುವುದು - ತಿರುಗಾಡುವುದು, ಪಾರ್ಟಿಗಳಲ್ಲಿ ಸೇರುವುದು, ಪರಪುರುಷರೊಡನೆ ನಿಸ್ಸಂಕೋಚದಿಂದ ಸಂಧಿಸುವುದು, ಸಿನಿಮಾ ಮತ್ತು ಅಸಹ್ಯಕರವಾದ ಆಟ-ತಮಾಷೆಗಳಲ್ಲಿ ಬೆರೆಯುವುದು, ಸಿನಿಮಾಗಳಲ್ಲಿ ನಟಿಯಾಗುವುದು, ಪರಪುರುಷರೊಡನೆ ಊಟ-ಪಾನೀಯ ಹಾಗೂ ನೃತ್ಯ-ಗೀತಾದಿಗಳನ್ನು ಮಾಡುವುದು ಮುಂತಾದುವುಗಳು ಹಾನಿಕಾರಕವಾಗಿದೆ. ನಾರಿಯ ಬಳಿ ಇರುವ ಎಲ್ಲಕ್ಕಿಂತಲೂ ಹೆಚ್ಚು ಮೌಲ್ಯವುಳ್ಳ ಹಾಗೂ ಆದರಣೀಯ ಸಂಪತ್ತೆಂದರೆ ಅವಳ ಸತೀತ್ವ, ಸತೀತ್ವದ ರಕ್ಷಣೆಯೇ ಅವಳ ಜೀವನದ ಸರ್ವೋಚ್ಚ ಧ್ಯೇಯವಾಗಿದೆ. ಆದ್ದರಿಂದಲೇ ಅವಳು ಹೊರಗೆ ಅಲೆಯದೆ ಮನೆಯ ರಾಣಿಯಾಗಿ ಮನೆಯಲ್ಲಿರುತ್ತಾಳೆ. ಇದೇ ಅವಳಿಗೆ ಉಚಿತವಾದ ವಿಧಾನವಾಗಿದೆ. ಯಾವ ಜನರು ಸ್ತ್ರೀಜಾತಿಯಲ್ಲಿ ಸಹಾನುಭೂತಿ ಹಾಗೂ ದಯೆ ತೋರಿಸುವ ಭಾವದಿಂದ ಅವರನ್ನು ಮನೆಯಿಂದ ಹೊರಡಿಸಿ ಹೊರಗಿಡುವುದು ತಮ್ಮ ಕರ್ತವ್ಯವೆಂದು ತಿಳಿಯುತ್ತಾರೋ, ಅವರ ನಿಯತ್ತು ಶುದ್ಧವಾಗಿದ್ದರೂ ಭ್ರಮೆಯಲ್ಲಿದ್ದಾರೆ. ಅವರು ಇದರ ತತ್ತ್ವವನ್ನು ತಿಳಿದುಕೊಂಡಿಲ್ಲ- ಅಥವಾ ಅವರು ತಮ್ಮ ಉಚ್ಛೃಂಖಲ ವಾಸನೆಗನುಸಾರವಾಗಿಯೇ ದಯೆ ಹಾಗೂ ಸಹಾನುಭೂತಿಯ ಹೆಸರಿನಿಂದ ಈ ಪಾಪವನ್ನು ಎಸಗುತ್ತಿದ್ದಾರೆ.

ಲಜ್ಜಾಶೀಲತೆಯಿಂದ ಸತೀತ್ವ ಮತ್ತು ಪಾತಿವ್ರತ್ಯದ ಪೋಷಣೆ ಮತ್ತು ಸಂರಕ್ಷಣೆಯಾಗುತ್ತದೆ. ಆದ್ದರಿಂದಲೇ ಲಜ್ಜೆಯನ್ನು ಸ್ತ್ರೀಗೆ* ಭೂಷಣವೆಂದು ತಿಳಿಸಲಾಗಿದೆ. ಪುರುಷನಲ್ಲಿ ಪುರುಷಭಾವ ಹಾಗೂ ನಾರಿಯಲ್ಲಿ ಪ್ರಕೃತಿ (ದೇವಿ) ಭಾವದ ಪ್ರಧಾನತೆ ಸ್ವಾಭಾವಿಕವಾಗಿರುತ್ತದೆ. ಲಜ್ಜೆ ದೇವೀಭಾವವಾಗಿದೆ. ಇದೇ ನೈಸರ್ಗಿಕ ಕಾರಣದಿಂದ ನಾರಿಯಲ್ಲಿ ಲಜ್ಜೆಯೂ ನೈಸರ್ಗಿಕವಾಗಿರುತ್ತದೆ. ಪುರುಷ-ಪ್ರಕೃತಿಯೊಡನೆ ನಾರೀ-ಪ್ರಕೃತಿಯ ಈ ಭೇದ ಸ್ವಭಾವಸಿದ್ಧವಾಗಿದೆ. ಮನುಷ್ಯ ಮಾತ್ರದಲ್ಲಿ, ಅವನು ವಿವೇಕಸಂಪನ್ನ ಪ್ರಾಣಿಯಾದ ಕಾರಣ ಪಶು-ಪ್ರಾಣಿಗಳಂತೆ ಆಹಾರ, ನಿದ್ರೆ ಮತ್ತು ವಿಶೇಷವಾಗಿ ಸ್ತ್ರೀ-ಪುರುಷರ ಕಾಮಚೇಷ್ಟೆ ಮತ್ತು ಮೈಥುನಾದಿಗಳಲ್ಲಿ ನಿರ್ಲಜ್ಜಾಭಾವವಿರುವುದಿಲ್ಲ, ಅದರಲ್ಲೂ ಮನುಷ್ಯರಲ್ಲಿ ನಾರಿಯಾದರೋ ವಿಶೇಷರೂಪದಿಂದ ಲಜ್ಜಾಶೀಲಳಾಗಿರುತ್ತಾಳೆ. ನಾರಿಯ ಶೋಭೆಯು ಇದರಲ್ಲೇ ಇದೆ. ಲಜ್ಜೆಯ ಪರಿತ್ಯಾಗ ಮಾಡುವುದು ನಾರಿಗೆ ಗುಣ-ಗೌರವದ ವಿಷಯವಲ್ಲ, ಅಲ್ಲದೆ, ಇದರಿಂದ ಅವಳ ಗೌರವ, ಸತೀತ್ವ, ಮಾನಸಿಕ ಸ್ವಾಸ್ಥ್ಯ, ದೇವೀ-ಭಾವ ಹಾಗೂ ಸ್ವಾಭಾವಿಕ ಪವಿತ್ರತೆಗೆ

ಹಾನಿಯುಂಟಾಗುತ್ತದೆ. ಇದರಿಂದಲೇ ವೇದಗಳಲ್ಲಿ ಸಹ ನಾರಿಗಾಗಿ ಲಜ್ಜೆಯ ವಿಧಾನ ದೊರಕುತ್ತದೆ. ಋಗ್ವೇದ ೮.೪.೨೬ ರಲ್ಲಿದೆ–

**ಯೋ ವಾಂ ಯಜ್ಞೇಭಿರಾವೃತೋಽಧಿವಸ್ತ್ರಾ ವಧೂರಿವ ।**

ವಸ್ತ್ರದ ಮೂಲಕ ಆವೃತ ವಧುವಿನಂತೆ ಯಾರು ಯಜ್ಞದ ಮೂಲಕ ಆವೃತನಾಗಿದ್ದಾನೋ - ಎಂಬಲ್ಲಿ ನಾರಿಗೆ ತನ್ನ ಅಂಗಗಳನ್ನು ಮುಚ್ಚಿಟ್ಟುಕೊಳ್ಳ ಬೇಕೆಂಬ ಸ್ಪಷ್ಟವಾದ ನಿರ್ದೇಶವಿದೆ. ಹಾಗೆಯೇ ಬೇರೆ ಸ್ಥಳಗಳಲ್ಲಿಯೂ ಹಾಗೂ ರಾಮಾಯಣ, ಮಹಾಭಾರತ ಹಾಗೂ ಪುರಾಣಾದಿ ಗ್ರಂಥಗಳಲ್ಲಿ ಇದರ ಅನೇಕ ಪ್ರಮಾಣಗಳು ಸಿಗುತ್ತವೆ. ಸೀತೆ, ಸಾವಿತ್ರಿ, ದಮಯಂತಿ ಮೊದಲಾದ ಸತಿಯರು ಮನೆಯಿಂದ ಹೊರಗೆ ಹೊರಟ ಇತಿಹಾಸವು ವಿಶೇಷ ಪರಿಸ್ಥಿತಿಯ

---

ಪುಟ ೭೫ರಲ್ಲಿನ ಟಿಪ್ಪಣಿ

*ಸ್ತ್ರೀಯ ಶೋಭೆಯು ಲಜ್ಜೆಯಲ್ಲಿದೆ, ಲಜ್ಜೆ ಅವಳ ಒಂದು ಆಭರಣವಾಗಿದೆ. ಸೀತಾದೇವಿಯೂ ತನ್ನ ಸ್ವಾಮಿ ಭಗವಾನ್ ಶ್ರೀರಾಮ ಮತ್ತು ಮೈದುನ ಲಕ್ಷ್ಮಣನ ಜೊತೆಯಲ್ಲಿ ವನದಲ್ಲಿ ಹೋಗುತ್ತಿದ್ದಾಳೆ. ವನವಾಸಿಯಾದ ಸ್ತ್ರೀಯರು ಸೀತೆಯನ್ನು ಕೇಳುತ್ತಾರೆ–

**ಕೋಟಿ ಮನೋಜ ಲಜಾವನಿಹಾರೇ । ಸುಮುಖಿ ಕಹಹು ಕೋ ಆಹಿ ತುಮ್ಹಾರೇ ॥**

ಹೇ! ಸುಮುಖಿ! ಹೇಳು!- ಈ ಕೋಟಿ ಮನ್ಮಥರ ಸೌಂದರ್ಯವನ್ನು ನಾಚಿಸುವ ಮನೋಹರವದನವುಳ್ಳವನು ನಿನಗೆ ಏನಾಗಬೇಕು?

ಸೀತೆಯು ಸಂಕೋಚದಿಂದ ಮುಗುಳ್ನಗುತ್ತಾಳೆ ಮತ್ತು ಮಧುರ ವಾಣಿಯಿಂದ ಲಕ್ಷ್ಮಣನ ಪರಿಚಯ ಮಾಡಿಕೊಡುತ್ತ ಹೇಳುತ್ತಾಳೆ–

**ಸಹಜ ಸುಭಾಯ ಸುಭಗ ತನ ಗೋರೇ । ನಾಮು ಲಖನು ಲಘು ದೇವರ ಮೋರೇ ॥**

**ಬಹುರಿ ಬದನು ಬಿಧು ಅಂಚಲ ಢಾಂಕೀ । ಪಿಯ ತನ ಚಿತಇ ಭೌಹ ಕರಿ ಬಾಂಕೀ ॥**

**ಖಂಜನ ಮಂಜು ತಿರೀಛೇ ನಯನನಿ । ನಿಜಪತಿ ಕಹೆಉ ತಿನ್‌ಹಹಿ ಸಿಯ ಸಯನನಿ ॥**

ಸೀತೆಯು ಹೇಳುತ್ತಾಳೆ:– ಸಹಜವಾಗಿಯೇ ಸುಂದರಸ್ವಭಾವವುಳ್ಳ, ಸುಂದರ ಐಶ್ವರ್ಯಯುಕ್ತ ಗುಣವುಳ್ಳ ಗೌರವರ್ಣದವರಿದ್ದಾರೋ ಅವರ ಹೆಸರು ಲಕ್ಷ್ಮಣ, ಅವರು ನನ್ನ ಚಿಕ್ಕ ಮೈದುನರಾಗಿದ್ದಾರೆ.

ಇದಾದನಂತರ ಸೀತಾದೇವಿಯು ತನ್ನ ಮುಖಚಂದ್ರವನ್ನು ಸೆರಗಿನಿಂದ ಮುಚ್ಚಿಕೊಂಡು ತನ್ನ ಪ್ರಿಯತಮನಾದ ಶ್ರೀರಾಮನ ಕಡೆಗೆ, ಖಂಜನ ಪಕ್ಷಿಯ ನೇತ್ರಗಳಂತಿರುವ ಕಿರುಗಣ್ಣಿನಿಂದ ಲಜ್ಜಾಯುಕ್ತವಾಗಿ ನೋಡಿ ಇವರು ನನ್ನ ಭರ್ತೃವಾಗಿದ್ದಾರೆಂದು ಸೂಚಿಸಿದಳು.

ಇದು ಲಜ್ಜೆಯ ಆದರ್ಶವಾಗಿದೆ. ಹಾಗೆ ನೋಡಿದರೆ ಹಿಂದುಗಳಲ್ಲಿ ಪರ್ದಾ ಪದ್ಧತಿ ಇಲ್ಲವೇ ಇಲ್ಲ. ಇದಾದರೋ ಸಂಕೋಚದ ಒಂದು ಸುಂದರ ನಿದರ್ಶನವಾಗಿದೆ. ಜನರು ಹೇಳುತ್ತಾರೆ– ಮನೆಯವರ ಮಾವ-ಭಾವ ಮೊದಲಾದವರ ಎದುರು ಬುರಖಾ ತೊಡುವುದು ಮತ್ತು ಇತರೆ ಜನರ ಎದುರು ತೆರೆದ ಮುಖದಿಂದಿರುವುದು; ಇದೆಲ್ಲಿಯ ಪರ್ದಾ. ಆದ್ದರಿಂದಲೇ ಇದು ಪರ್ದಾ ಅಲ್ಲವೆಂದು ಸಿದ್ಧವಾಗುತ್ತದೆ. ಇದಾದರೋ ಹಿರಿಯರ ಸತ್ಕಾರಾರ್ಥವಾಗಿ ಇರಬೇಕಾದ ಒಂದು ಶೀಲ-ಸಂಕೋಚದ ಪವಿತ್ರ ಭಾವವಾಗಿದೆ; ಅದು ಇರಬೇಕಾದದ್ದೇ.

ಮಾತಾಗಿದೆ ಮತ್ತು ಇಂತಹ ವಿಶೇಷ ಪರಿಸ್ಥಿತಿಗಳಲ್ಲಿ ಹಿಂದೂ ಶಾಸ್ತ್ರವೂ ಕೂಡ ಹೊರಗೆ ಹೊರಡಲು ಆಜ್ಞೆಯನ್ನು ಕೊಡುತ್ತವೆ.

ಸ್ತ್ರೀಯರ ಗೌರವವು ಲಜ್ಜಾಶೀಲತೆಯಲ್ಲಿದೆ ಎಂಬ ವಿಚಾರದಲ್ಲಿ ಕೆಲವು ದೂರದರ್ಶಿಗಳಾಗದ ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯವನ್ನೂ ನೋಡಿ-

*The reputation of a woman is as a crystal mirror shining and bright but liable to be sullied by every breath that comes near it.*

*(Cervantes).*

ನಾರಿಯ ಕೀರ್ತಿಯು ಶುಭ್ರವಾದ ದರ್ಪಣದಂತಿದೆ. ದರ್ಪಣವಾದರೋ ಅತ್ಯಂತ ಉಜ್ಜ್ವಲ ಹಾಗೂ ಪ್ರಕಾಶಮಯವಾಗಿದ್ದರೂ ಇತರರು ಅದರ ಮೇಲೆ ಶ್ವಾಸಬಿಟ್ಟಾಗ ಮಲಿನವಾಗುತ್ತದೆ.

(ಸರವಾಂಟಿಸ್)

*She is not made to be the admiration of everybody but the happiness of one (her husband). (Burke)*

ನಾರಿಯ ಸೃಷ್ಟಿಯು ಪ್ರತಿಯೊಬ್ಬನನ್ನೂ ಮುಗ್ಧಗೊಳಿಸುವುದಕ್ಕಾಗಿ ಅಲ್ಲ, ಅದಾದರೋ ಒಬ್ಬನೇ ಆದ ತನ್ನ ಪತಿದೇವನಿಗೆ ಸುಖ ಕೊಡುವುದಕ್ಕಾಗಿಯೇ ಆಗಿರುತ್ತದೆ.

(ಬರ್ಕ್)

*A woman smells seetest, when she smells not at all.*

*(Plantus)*

ಯಾರ ಗಂಧವು ಮತ್ತ್ಯಾರಿಗೂ ದೊರಕುವುದಿಲ್ಲವೋ ಅವಳೇ ಎಲ್ಲರಿಗಿಂತ ಹೆಚ್ಚು ಸುಗಂಧವುಳ್ಳವಳಾದ ಸ್ತ್ರೀಯಾಗಿದ್ದಾಳೆ.

(ಪ್ಲೇಟಂಸ್)

*Woman is a flower that breathes its perfume in the shade only.*

*(Lameneis)*

ನಾರಿಯು ಮನೆಯಿಂದಲೇ ತನ್ನ ಸುಗಂಧವನ್ನು ಹರಡುವ ಪುಷ್ಪವಾಗಿದ್ದಾಳೆ. (ಲೇಮೆನಿಸ್)

*The flower sweetest smell is shy and lovely.*

*(Wordsworth)*

ಶ್ರೇಷ್ಠ ಸುಗಂಧಭರಿತವಾದ ಪುಷ್ಪವು ಲಜ್ಜಾಯುಕ್ತವೂ ಚಿತ್ತಾಕರ್ಷಕವೂ ಆಗಿರುತ್ತದೆ.

(ವರ್ಡ್ಸ್‌ವರ್ತ್)

ಯಾವ ವಸ್ತ್ರವು ಎಷ್ಟು ಅಮೂಲ್ಯವೂ ಹಾಗೂ ಪ್ರಿಯವೂ ಆಗಿರುತ್ತದೆಯೋ ಅದನ್ನು ಅಷ್ಟೇ ಎಚ್ಚರಿಕೆಯಿಂದ ಸಮ್ಮಾನ ಹಾಗೂ ಸಂರಕ್ಷಣೆಯೊಡನೆ ಇಡಲಾಗುತ್ತದೆ. ಧನ-ರತ್ನವೇ ಮೊದಲಾದ ಅಮೂಲ್ಯ ಪದಾರ್ಥಗಳನ್ನು ಜನರು ಇದಕ್ಕಾಗಿಯೇ ಸುರಕ್ಷಿತವಾಗಿ ಮುಚ್ಚಿಡುತ್ತಾರೆ. ನಮ್ಮಲ್ಲಿನ ಸ್ತ್ರೀಯರು ಪುರುಷರ ವಿಷಯ-ವಿಲಾಸದ ಸಾಮಾಗ್ರಿಯಲ್ಲ, ಅವಳು ಸಂಪೂರ್ಣ ಗೃಹಸ್ಥ ಧರ್ಮದಲ್ಲಿ ಸಹಧರ್ಮಿಣಿಯಾಗಿದ್ದಾಳೆ. ಅವಳ ಶರೀರ ಕಾಮದ ಯಂತ್ರವಾಗಿರದೆ ಅವಳು ಜಗದಂಬೆಯ ಮಂಗಲ-ವಿಗ್ರಹದಂತೆ ಪೂಜನೀಯವಾಗಿದ್ದಾಳೆ. ಕನ್ಯಾರೂಪ ದಲ್ಲಾಗಲೀ ಹಾಗೂ ಪತ್ನೀ-ಪುತ್ರವತೀ ಸತಿಯ ರೂಪದಲ್ಲಿಯಾಗಲಿ ವಂದನೀಯ ಳಾಗಿದ್ದಾಳೆ. ಹಿಂದೂ ಶಾಸ್ತ್ರಾನುಸಾರ ಗೌರಿ ಅಥವಾ ಕುಮಾರಿ-ಪೂಜೆಯಿಂದ ಹಾಗೂ ಸತೀ - ಪೂಜೆಯಿಂದ ಗೃಹಸ್ಥನ ದುಃಖ - ದಾರಿದ್ರ್ಯ ಹಾಗೂ ಶತ್ರು- ಸಂಕಟಾದಿಗಳು ನಾಶವಾಗುತ್ತವೆ ಮತ್ತು ಅವನ ಧರ್ಮ, ಹಣ, ಆಯುಸ್ಸು ಮತ್ತು ಬಲವು ವೃದ್ಧಿಸುತ್ತದೆ. ಆದಕಾರಣ ಸಮ್ಮಾನ ಸಹಿತ ಸ್ತ್ರೀರಕ್ಷಣೆಯ ವಿಧಾನವಿದೆ. ಇದು ಅವಳೊಡನೆ ನಿರ್ದಯ ವ್ಯವಹಾರ ಮಾಡುವುದಲ್ಲ, ಆದರೆ ಅವಳ ಮಹಾನ್ ಸಮ್ಮಾನದ ನಿದರ್ಶನವಾಗಿದೆ, ಜೊತೆಗೆ ಅವಳ ಸತೀತ್ವ ಧರ್ಮದ ರಕ್ಷಣೆಯ ಮಂಗಳಮಯ ಸಾಧನವೂ ಕೂಡ.

ಲಜ್ಜೆಯನ್ನು ಬಿಟ್ಟು ಪುರುಷಾಲಯಗಳಲ್ಲಿ ನಿಸ್ಸಂಕೋಚವಾಗಿ ತಿರುಗಾಡುವುದು-ಅಲೆದಾಡುವುದರಿಂದ ಪವಿತ್ರವಾದ ಪಾತಿವ್ರತ್ಯದಲ್ಲಿ ಕ್ಷತಿಯುಂಟಾಗುತ್ತದೆ. ಏಕೆಂದರೆ ಈ ಸ್ಥಿತಿಯಲ್ಲಿ ನಾರಿಯು ಸಾವಿರಾರು ಪುರುಷರ ವಿಕೃತ, ದೂಷಿತ ಬೇಟೆಯಾಗಬೇಕಾಗುತ್ತದೆ. ಶ್ರೀದೇವೀಭಾಗವತದಲ್ಲಿ ಒಂದು ಕಥೆಯಿದೆ - ಅನೇಕ ರಾಜರುಗಳ ಕಾಮದೃಷ್ಟಿಯು ತನ್ನ ಮೇಲೆ ಬೀಳುತ್ತದೆಯಾದ್ದರಿಂದ ನನ್ನ ಪಾತಿವ್ರತ್ಯಕ್ಕೆ ಆಘಾತವುಂಟಾಗುವುದೆಂಬ ಕಾರಣದಿಂದ ಶಶಿಕಲಾ ಎಂಬ ರಾಜಕನ್ಯೆ ಸ್ವಯಂವರಕ್ಕೆ ಹೋಗುವುದನ್ನು ನಿರಾಕರಿಸಿದ್ದಳು.

ಇದು ಒಂದು ವೈಜ್ಞಾನಿಕ ರಹಸ್ಯ-ಯಾವ ನಾರಿಯ ಮೇಲೆ ಅನೇಕ ಪುರುಷರ ಕಣ್ಣುಗಳ ದೃಷ್ಟಿಯು ಬೀಳುತ್ತದೆಯೋ ಹಾಗೂ ಪರಸ್ಪರ ನೇತ್ರಗಳ ಮಿಲನವಾಗುತ್ತದೆಯೋ (ಆದ್ದರಿಂದಲೇ ಲಜ್ಜಾಶೀಲರಾದ ಸ್ತ್ರೀಯರು ಸ್ವಾಭಾವಿಕವಾಗಿ ಕಣ್ಣುಗಳನ್ನು ಕೆಳಮುಖವಾಗಿಸಿಕೊಂಡಿರುತ್ತಾರೆ) ಅವಳ

ಪಾತಿವ್ರತ್ಯದಲ್ಲಿ ನಿಶ್ಚಯವಾಗಿ ಹಾನಿಯುಂಟಾಗುತ್ತದೆ. ಮನುಷ್ಯನ ಮಾನಸಿಕ ಭಾವಗಳ ವಿದ್ಯುತ್ಪ್ರವಾಹವು ಅವನ ಶರೀರದಿಂದ ನಿರಂತರವಾಗಿ ಹರಿಯುತ್ತಿರುತ್ತದೆ. ಮತ್ತದು ಶಬ್ದ, ಸ್ಪರ್ಶ ಮತ್ತು ದೃಷ್ಟಿಪಾತ ಮೊದಲಾದವುಗಳ ಮುಖಾಂತರ (ಯಾವುದೋ ಅಂಶದಲ್ಲಿ ಯಾವುದೇ ಬಾಹ್ಯಸಾಧನವಿಲ್ಲದೆ ತನಗೆ ತಾನೇ) ಇತರರ ಮನಸ್ಸಿನಮೇಲೆ ಅದರ ಜೊತೆಯಲ್ಲಿ ಶರೀರದ ಮೇಲೆ ಪರಿಣಾಮವನ್ನು ಬೀರಿಯೇ ತೀರುತ್ತದೆ. ಎಲ್ಲಿ ಮೊದಲೇ ಅದಕ್ಕೆ ಅನುಕೂಲವಾದ ಸಜಾತೀಯ ಭಾವವಿರುತ್ತದೋ ಅಲ್ಲಿ ಅದರ ವಿಶೇಷ ಪ್ರಭಾವವುಂಟಾಗುತ್ತದೆ; ಆದರೆ ಎಲ್ಲಿ ಅಂತಹ ಸಜಾತೀಯ ಭಾವವಿರುವುದಿಲ್ಲವೋ, ಅಲ್ಲಿಯೂ ಅಲ್ಪ-ಸ್ವಲ್ಪ ಪ್ರಭಾವವುಂಟಾಗಿಯೇ ಆಗುತ್ತದೆ ಮತ್ತು ಪದೇ ಪದೇ ಈ ರೀತಿ ಆಗುತ್ತಿದ್ದಲ್ಲಿ ಕ್ರಮಶಃ ಭಾವವೂ ಕೂಡ ಸಜಾತೀಯವಾಗುತ್ತದೆ. ಇದರಿಂದ ಯಾವ ಸ್ತ್ರೀಯ ಮೇಲೆ ಕಾಮುಕ ಪುರುಷರ ಕಾಮಶಕ್ತಿಯಿಂದ ಪ್ರೇರಿತವಾದ ಕಾಮ-ಭಾವಪೂರ್ಣ ಕಾಮದೃಷ್ಟಿಯು ಪದೇ ಪದೇ ಬೀಳುತ್ತಿರುತ್ತದೆಯೋ, ಒಂದು ವೇಳೆ ಘನಘೋರ ಪಾತಿವ್ರತ್ಯದ ಪ್ರಬಲ ಭಾವವು ಮೇಲೆ ಹೇಳಿದ ಕಾಮದೃಷ್ಟಿಯು ವಿಕಾರೀ ಭಾವವನ್ನು ನಾಶಪಡಿಸಲು ಅಥವಾ ಸೋಲಿಸಲು ಸಮರ್ಥವಾಗದಿದ್ದರೆ, ಆಗ ಆ ನಾರಿಯ ಮನಸ್ಸಿನಲ್ಲಿ ನಿಶ್ಚಯವಾಗಿ ಚಾಂಚಲ್ಯವುಂಟಾಗುವುದು, ಕಾಮವಿಕಾರ ಉತ್ಪತ್ತಿಯಾಗುವುದು ಮತ್ತು ಒಂದು ವೇಳೆ ಆ ವಿಕಾರೀಸ್ಥಿತಿಯಲ್ಲಿ ಅವಕಾಶವೊದಗಿದಲ್ಲಿ ಪತನವೂ ಆಗಿಹೋಗುವುದು ಎಂಬುದು ಸಿದ್ಧವಾಗುತ್ತದೆ.

ಮನೆಯನ್ನು ಬಿಟ್ಟು ಸ್ವಚ್ಛಂದರಾಗಿ ಪುರುಷವರ್ಗದೊಡನೆ ತಿರುಗಾಡಿರುವ ಸ್ತ್ರೀಯರು ಹೊರಗಿನ ಅನ್ಯ ಕಾರ್ಯಗಳಲ್ಲಿ ಎಷ್ಟೇ ಸುಖ್ಯಾತಿಯನ್ನು ಪಡೆದಿರಲಿ; ಆದರವರು ಒಂದು ವೇಳೆ ಅಂತರ್ಮುಖಿಗಳಾಗಿ ತಮ್ಮ ಚಾರಿತ್ರವನ್ನು ದೃಷ್ಟಿಸಿ ಗಮನಿಸುವರಾದಲ್ಲಿ ಅವರಲ್ಲನೇಕರಿಗೆ ಅವರ ಮನಸ್ಸಿನಲ್ಲಿ ಬಹಳ ಸಲ ವಿಕಾರ ಬಂದಿದೆಯೆಂದೂ ಮತ್ತು ಕೆಲವರಿಗೆ ಪತನವೂ ಆಗಿದೆಯೆಂಬುದು ಅನುಭವಕ್ಕೆ ಬರುತ್ತವೆ. ಪತಿವ್ರತೆಯಾದ ಸ್ತ್ರೀಗೆ ಇದು ಎಷ್ಟು ದೊಡ್ಡ ಹಾನಿಯೆಂಬುದನ್ನು ನೀವೇ ಯೋಚಿಸಿ.

ಕುಸಂಗದ ಕಾರಣ ಪುರುಷರಂತೆ ನಾರಿಯೂ ಕಾಮದೃಷ್ಟಿಯಿಂದ ಪುರುಷರನ್ನು ನೋಡತೊಡಗಿದಲ್ಲಿ, ಪುರುಷನ ಮನೋಭಾವ ಬಹುಬೇಗ ಬದಲಾಯಿಸುತ್ತದೆ ಮತ್ತು ಇಬ್ಬರ ಪತನವೂ ನಿಶ್ಚಯವಾಗುತ್ತದೆ.

*It was discovered that certain subjects, more especially women, could produce changes in the aura by an effort of will causing rays to issue from the body or the colour of the aura to alter, (Stanley Red)*

ಈ ವಿಜ್ಞಾನದ ಅನುಭವಿ ಪಾಶ್ಚಾತ್ಯ ವಿದ್ವಾನ್ ಸ್ಟೇನ್ಲೀ ರೇಡ್ ಹೇಳುತ್ತಾನೆ - ಕೆಲವು ವಸ್ತುಗಳು, ವಿಶೇಷವಾಗಿ ಸ್ತ್ರೀಯರು ತಮ್ಮ ಇಚ್ಛಾಶಕ್ತಿಯಿಂದ ಪುರುಷನ ದಿವ್ಯತೇಜಸ್ಸನ್ನು ಬದಲಾಯಿಸಿಬಿಡುತ್ತಾರೆ. ಪುರುಷನ ಶರೀರದಿಂದ ಹೊರಸೂಸುವ ಅವನ ಮನೋಭಾವಗಳ ವಿದ್ಯುತ್ಪ್ರವಾಹವು ಬದಲಾಗುವುದರಿಂದ 'ಔರಾ' ದ (ದಿವ್ಯ ಪ್ರಭೆ) ವರ್ಣದಲ್ಲಿ ಸಹ ಪರಿವರ್ತನೆಯಾಗುತ್ತದೆ ಎಂದು ಕಂಡುಬಂದಿದೆ.

ಮನುಷ್ಯನ ಶರೀರದಿಂದ ಅವನ ಮಾನಸಿಕ, ಕಾಮ-ಕ್ರೋಧಾದಿ ದುರ್ಭಾವಗಳ ಹಾಗೂ ತ್ಯಾಗ-ಕ್ಷಮಾದಿ ಸದ್ಭಾವಗಳ ವಿದ್ಯುತ್ಕಣಗಳು ನಿರಂತರವಾಗಿ ಹೊರಡುತ್ತಿರುತ್ತವೆ ಅವನ ಶರೀರದ ಸುತ್ತ ವಿವಿಧ ಬಣ್ಣಗಳ ಅಲೆಗಳ ರೂಪದಲ್ಲಿ ಅವು ಪ್ರಕಟವಾಗುತ್ತಿರುತ್ತವೆ. ಸೂಕ್ಷ್ಮ ದೃಷ್ಟಿಯಿಂದ ಇವುಗಳನ್ನು ನೋಡಲೂ ಬಹುದಾಗಿದೆ. ಇವುಗಳನ್ನೇ ಔರಾ **(Auraa)** ಎಂದು ಹೇಳುತ್ತಾರೆ. ವಿಭಿನ್ನ ಪುರುಷರ ದೃಷ್ಟಿಯು ಸ್ತ್ರೀಯರ ಮೇಲೆ ಬೀಳದಿರಲಿ ಮತ್ತದರಿಂದಾಗಿ ವಿಕೃತರಾಗಿ ಸ್ತ್ರೀಯರ ದೃಷ್ಟಿ ಪುರುಷರ ಮೇಲೆ ಬೀಳದಿರಲಿ; ಏಕೆಂದರೆ ಹೀಗಾದರೆ ಸ್ತ್ರೀಯರ ಪವಿತ್ರವಾದ ಪಾತಿವ್ರತ್ಯವು ನಾಶವಾಗುತ್ತದೆ- ಆದ್ದರಿಂದಲೇ ಸ್ತ್ರೀಯರು ಪುರುಷಾಲಯಗಳಲ್ಲಿ, ಪೇಟೆಗಳಲ್ಲಿ ಅಲೆದಾಡದೆ ಬೇರೆಯಾಗಿ ಮನೆಯಲ್ಲಿ ಇರುವ ವಿಧಾನವನ್ನು ಮಾಡಲಾಗಿದೆ. ಆಹಾರ, ನಿದ್ರೆಯ ಸಮಯದಲ್ಲಿ ಸಹ ಪುರುಷನು ಸ್ತ್ರೀಯರನ್ನು ನೋಡದಿರಬೇಕು* ಎಂದೂ ಹೇಳಲಾಗಿದೆ.

ಇಂದು ಸ್ತ್ರೀಯರನ್ನು ಜೊತೆಗೆ ಕರೆದುಕೊಂಡು ಅಲೆದಾಡಿ-ತಿರುಗಾಡಲು ಹಾಗೂ ಒಂದೇ ಮೇಜಿನ ಮೇಲೆ ಒಟ್ಟಿಗೆ ಕುಳಿತು ಊಟಾದಿಗಳನ್ನು ಮಾಡುವ ಪದ್ಧತಿ ಬೆಳೆಯುತ್ತಿರುವುದು ವಸ್ತುತಃ ದೋಷಯುಕ್ತವಾಗಿ ಕಾಣದಿದ್ದರೂ ಸಹ

* **ನಾಶ್ನೀಯಾದ್ ಭಾರ್ಯಯಾ ಸಾರ್ಧಂ ನೈನಾಮೀಕ್ಷೇತ ಚಾಶ್ನತೀಮ್ ।** (ಮನು ೩/೩೪)

ಸ್ತ್ರೀ-ಪುರುಷರು ಒಟ್ಟಿಗೆ ಕುಳಿತು ಭೋಜನ ಮಾಡಬಾರದು ಮತ್ತು ಸ್ತ್ರೀಯು ಭೋಜನ ಮಾಡುತ್ತಿದ್ದರೆ ಅವಳನ್ನು ನೋಡಲೂಬಾರದು.

ಮಹಾನ್ ದೋಷವನ್ನು ಉತ್ಪತ್ತಿಮಾಡುವುದಾಗಿದೆ. ಹೀಗೆ ಮಾಡುವ ಸ್ತ್ರೀ ಪುರುಷರು ಸತ್ಯಸಂಧತೆಯಿಂದ ತಮ್ಮ ತಮ್ಮ ಮನೋದೆಸೆಯ ಚಿತ್ರವನ್ನು ನೋಡಬೇಕು ಮತ್ತು ಚೆನ್ನಾಗಿ ಯೋಚಿಸಿ ನಾರಿಯರ ಭೂಷಣವಾದ ಲಜ್ಜೆಯ ರಕ್ಷಣೆಯಾಗಿ ಅವಳ ಪಾತಿವ್ರತ್ಯ ಧರ್ಮವು ಅಕ್ಷುಣ್ಣವಾಗಿರುವಂತೆ ಉಚಿತವಾದ ವ್ಯವಸ್ಥೆ ಮಾಡಬೇಕು.



# ೧೮. ಸ್ತ್ರೀಗೆ ಪತಿಯೇ ಗುರು

ಸ್ತ್ರೀಯರಲ್ಲಿ ಶ್ರದ್ಧಾ-ವಿಶ್ವಾಸಗಳು ಅಧಿಕವಾಗಿರುವುದು, ಧಾರ್ಮಿಕ ಭಾವನೆ ವಿಶೇಷವಾಗಿರುವುದು ಸತ್ಯ. ಇಂದೂ ಸಹ ಸ್ತ್ರೀಯರು ಧರ್ಮವನ್ನು ಕಾಪಾಡಿಕೊಂಡು ಉಳಿಸಿ-ಬೆಳೆಸಿರುವುದು ಸತ್ಯ. ವಿದ್ಯಾವಂತರಾದ ಗುಮಾಸ್ತರು, ಮೇಲ್ವಿಚಾರಕರುಗಳಿಗೆ ಅವಕಾಶವಾಗಲಿ, ಶ್ರದ್ಧೆಯಾಗಲೀ ಇರುವುದಿಲ್ಲ. ಅವರ ತಾಯಿ ಮತ್ತು ಪತ್ನಿಯರು, ಪುತ್ರ ಮತ್ತು ಪತಿಯ ಶ್ರೇಯೋಭಿಲಾಷೆಯಿಂದ, ಪರಲೋಕದ ನಂಬಿಕೆಯಿಂದ ಮತ್ತು ಆತ್ಮೋದ್ಧಾರದ ಉದ್ದೇಶದಿಂದ ಧರ್ಮದ ಆಚರಣೆ, ಭಗವಂತನ ಭಜನೆ, ದಾನ - ಪುಣ್ಯ, ಅತಿಥಿ - ಸತ್ಕಾರ, ಪೂಜಾ-ಪಾರಾಯಣೆ ಮತ್ತು ವ್ರತೋಪವಾಸ ಮಾಡುತ್ತಾರೆ, ಕಥೆ-ಕೀರ್ತನೆಗಳನ್ನು ಕೇಳುತ್ತಾರೆ, ಮಂದಿರಕ್ಕೆ ದೇವರ ದರ್ಶನಕ್ಕಾಗಿ ಹೋಗುತ್ತಾರೆ ಮತ್ತು ತೀರ್ಥಕ್ಷೇತ್ರಗಳಲ್ಲಿ ಹೋಗಿ ಸಂತ-ಮಹಾತ್ಮರ ದರ್ಶನ, ಸತ್ಸಂಗ ಮಾಡುತ್ತಾರೆ. ಇದೆಲ್ಲ ಮಂಗಳಮಯವಾದುದೇ, ಮತ್ತಿದರಿಂದ ಲೋಕ-ಪರಲೋಕವೆರಡರಲ್ಲಿಯೂ ಸಾಮಾನ್ಯ ಲಾಭವಾಗುತ್ತದೆ, ಆದರೆ ಜೊತೆಗೆ ಇಂದಿನ ಸನ್ನಿವೇಶದಲ್ಲಿ ಪ್ರಾಯಶಃ ಎಲ್ಲ ಕ್ಷೇತ್ರಗಳಲ್ಲಿ ದಂಭ, ಮೋಸ, ಭ್ರಷ್ಟಾಚಾರ, ಅನಾಚಾರ ಹಾಗೂ ವಂಚನೆ ಯಾವ ಪ್ರಕಾರದಲ್ಲಿ ನಡೆಯುತ್ತದೆಯೋ ಹಾಗೆಯೇ ಧರ್ಮ ಹಾಗೂ ಅಧ್ಯಾತ್ಮ ಕ್ಷೇತ್ರಗಳಲ್ಲಿ ಅನಾಚಾರ ಹಾಗೂ ವಂಚನೆ ಲೆಕ್ಕವಿಲ್ಲದಷ್ಟು ಪ್ರಮಾಣದಲ್ಲಿ ನಡೆಯುತ್ತದೆಯೆಂಬುದು ಸತ್ಯವಾಗಿದೆ. ಇದಲ್ಲದೆ, ಇಂದು ಈ ಕ್ಷೇತ್ರದಲ್ಲಿ ಅನಾಚಾರದ ವಿಶೇಷವಾದ ಪ್ರಾಬಲ್ಯವಿದೆಯೆಂದು ಹೇಳಬಹುದು. ಕೆಲವು ತೀರ್ಥ-ಕ್ಷೇತ್ರಗಳಂತೂ ವಿಶೇಷವಾಗಿ ಅನಾಚಾರ ಹಾಗೂ ವ್ಯಭಿಚಾರದ ಸಂಕೇತ ಸ್ಥಾನಗಳಾಗಿವೆ. ಗುರುಗಳ ಸುತ್ತ ಶಿಷ್ಯರ ಪ್ರವಾಹ ಎಲ್ಲೆಲ್ಲೂ ಉಂಟಾಗಿದೆ. ಜನರ ಮನಸ್ಸಿನಲ್ಲಿ, ಅದರಲ್ಲೂ ವಿಶೇಷವಾಗಿ ಸರಳಹೃದಯಿಗಳಾದ ಸ್ತ್ರೀಯರ ಮನಸ್ಸಿನಲ್ಲಿ-ಗುರುಗಳಿಂದ ದೀಕ್ಷಿತರಾಗದಿದ್ದಲ್ಲಿ ಆತ್ಮೋದ್ಧಾರದ ಸಾಧ್ಯತೆ ಇಲ್ಲ ಎಂಬ ವಿಚಾರ ದೃಢ ಮೂಲವಾಗಿಸಿದ್ದಾರೆ. ಗುರುವಿನ

ಸ್ಥಾನ ಭಗವಂತನ ಸ್ಥಾನಕ್ಕಿಂತಲೂ ಮೇಲಿನದಾಗಿದೆ ಹಾಗೂ ಗುರುವಿಗೆ ಸರ್ವಸ್ವವನ್ನು ಅರ್ಪಿಸುವುದೇ ಶಿಷ್ಯನ ಯಾ ಶಿಷ್ಯೆಯ ಏಕಮಾತ್ರ ಕರ್ತವ್ಯವಾಗಿದೆ ಎಂಬ ಸಂಸ್ಕಾರಗಳು ಬೇರೂರಿವೆ. ಪರಮಾರ್ಥಮಾರ್ಗದಲ್ಲಿ ಸದ್ಗುರುವಿನ ಅಗತ್ಯವಿದೆ ಮತ್ತು ಗುರುವಿನ ಬಗೆಗೆ ಸಮರ್ಪಣ ಭಾವವೂ ಅಗತ್ಯವಾಗಿ ಇರಬೇಕೆಂಬುದು ಸತ್ಯವಾದ ಸಿದ್ಧಾಂತವಾಗಿದೆ. ಆದರೆ ಇಂದು ಅಂತಹ ಗುರುಗಳಾಗಲೀ, ಆತ್ಮಸಮರ್ಪಣ ಭಾವವಾಗಲಿ ಪ್ರಾಯಶಃ ಕಾಣಬರುವುದಿಲ್ಲ. ಸ್ತ್ರೀಯರಿಗಾದರೋ ಏಕಮಾತ್ರ ಪತಿಯೇ ಪರಮಗತಿ, ಪರಮದೇವತೆ ಮತ್ತು ಪರಮ ಗುರುವೆಂದು ತಿಳಿಯಲಾಗಿದೆ. ಅವರಿಗೆ ಬೇರೆ ಗುರುಗಳ ಆವಶ್ಯಕತೆಯಿರುವುದಿಲ್ಲ.*

ದೇವದಾಸೀ ಪದ್ಧತಿ ಆರಂಭದಲ್ಲಿ ದೇವತೆಗಳ ಬಗೆಗೆ ಶುದ್ಧವಾದ ಸಮರ್ಪಣ ಭಾವದ ಪ್ರತೀಕವಾಗಿದ್ದುವು ಎಂಬುದು ಸರಿ, ಆದರೆ ನಂತರ ಅವುಗಳಲ್ಲಿ ಮಹತ್ತರವಾದ ಪಾಪವೊದಗಿತು. ಅದೇ ಪ್ರಕಾರ ಗುರು-ಕರಣ ಪದ್ಧತಿಯ ಮೂಲವೂ ಸಹ ಪವಿತ್ರವಾಗಿತ್ತು. ಆದರೆ ಈ ದಿನಗಳಲ್ಲಿ ಬಹಳವಾಗಿ ಅದರ ದುರುಪಯೋಗವಾಗುತ್ತಿದೆ.

ವಾಸ್ತವವಾಗಿ ಸ್ತ್ರೀಯರು ಪರ-ಪುರುಷರಿಂದ ದೂರವಿರಬೇಕು. ಸ್ತ್ರೀ ಪುರುಷರು ಪಕ್ಕ-ಪಕ್ಕದಲ್ಲಿದ್ದುಕೊಂಡು ಧರ್ಮವನ್ನು ರಕ್ಷಿಸುವುದು ಬಹಳ ಕಷ್ಟಕರವಾಗಿದೆ. ಮಹಾತ್ಮರು, ಭಕ್ತರು, ಆಚಾರ್ಯರು ಮತ್ತು ಪಂಡಿತರು,

---

***ಭರ್ತಾ ನಾಥೋ ಗತಿರ್ಭರ್ತಾ ದೈವತಂ ಗುರುರೇವ ಚ ।**
**ತಸ್ಯ ವಶ್ಯಂ ಚರೇದ್ ಯಾ ತು ಸಾ ಕಥಂ ಸುಖಮಾಪ್ನುಯಾತ್ ॥**

(ಬೃಹನ್ನಾರದೀಯಪುರಾಣ ಉ. ೧೪/೪೦)

ಪತಿಯೇನಾಥ, ಗತಿ, ದೇವತೆ ಹಾಗೂ ಗುರುವಾಗಿದ್ದಾನೆ. ಅವನ ಮೇಲೆ ವಶೀಕರಣ ಪ್ರಯೋಗ ಮಾಡುತ್ತಾವ ಸ್ತ್ರೀಯು ಸುಖವಾಗಿ ಹೇಗಿರಬಲ್ಲಳು?

**ಗುರುರಗ್ನಿರ್ದ್ವಿಜಾತೀನಾಂ ವರ್ಣಾನಾಂ ಬ್ರಾಹ್ಮಣೋ ಗುರುಃ ।**
**ಪತಿರೇವ ಗುರುಃ ಸ್ತ್ರೀಣಾಂ ಸರ್ವಸ್ಯಾಭ್ಯಾಗತೋ ಗುರುಃ ॥**

ದ್ವಿಜಾತೀಯರಿಗೆ ಗುರು ಅಗ್ನಿದೇವ, ವರ್ಣಗಳ ಗುರು ಬ್ರಾಹ್ಮಣ, ಸ್ತ್ರೀಯರ ಗುರು ಅವರ ಪತಿ ಮತ್ತು ಅಭ್ಯಾಗತನು ಎಲ್ಲರಿಗೂ ಗುರುವಾಗಿದ್ದಾನೆ.

**ಪತಿರ್ಹಿ ದೇವತಾ ನಾರ್ಯಾಃ ಪತಿರ್ಬಂಧುಃ ಪತಿರ್ಗುರುಃ ।**
**ಪ್ರಾಣೈರಪಿ ಪ್ರಿಯಂ ತಸ್ಮಾದ್ ಭರ್ತುಃ ಕಾರ್ಯಂ ವಿಶೇಷತಃ ॥**

ಸ್ತ್ರೀಗೆ ಪತಿಯೇ ದೈವ, ಪತಿಯೇ ಬಂಧು, ಪತಿಯೇ ಗುರು. ಆದ್ದರಿಂದ ಪ್ರಾಣವನ್ನು ಕೊಟ್ಟಾದರೂ ವಿಶೇಷರೂಪದಿಂದ ಪತಿಗೆ ಪ್ರಿಯವಾದ ಕಾರ್ಯವನ್ನು ಮಾಡಬೇಕು.

ಪೂಜಾರಿಗಳು ಎನಿಸಿಕೊಳ್ಳುವವರ ಮೂಲಕ ಸರಳ ಹೃದಯವುಳ್ಳವರಾದ ಸ್ತ್ರೀಯರ ಪತನವಾಗಿರುವ, ಆಗುತ್ತಿರುವ ನೂರಾರು-ಸಾವಿರಾರು ಉದಾಹರಣೆಗಳಿವೆ. ಕೆಲವೆಡೆಗಳಲ್ಲಿ ಭಗವಂತನಾದ ಶ್ರೀಕೃಷ್ಣನ ಮಹಾನ್ ಪವಿತ್ರ ಮತ್ತು ಲೋಕೋತ್ತರ ವ್ರಜಲೀಲೆ ಮತ್ತು ಗೋಪೀಪ್ರೇಮದ ಹೆಸರಿನಲ್ಲಿ ಪಾಪ ಕಾರ್ಯಗಳು ಮಾಡಲಾಗುತ್ತವೆ. ಇನ್ನೆಲ್ಲೋ ಮರ್ಯಾದಾ ಪುರುಷೋತ್ತಮ ಭಗವಾನ್ ಶ್ರೀರಾಮನ ಹೆಸರಿನಲ್ಲಿ ರಾಮವಿವಾಹ ಮೊದಲಾದ ಪ್ರಸಂಗದಿಂದ ಸ್ತ್ರೀ ಸಮಾಜದ ಮುಂದೆ ಕೆಟ್ಟಪದಗಳು, ಕೆಟ್ಟ ಬೈಗಳು ಹಾಡಲಾಗುತ್ತವೆ ಮತ್ತು ನಾರೀಸಮಾಜವನ್ನು ಪತನದ ಪಾತಾಳಕ್ಕೆ ತಳ್ಳಲಾಗುತ್ತದೆಯಾದರೆ, ಮತ್ತೆಲ್ಲೋ ಗುರು ದೇವನು ಸ್ವಯಂ ಭಗವಂತನ ಸ್ವರೂಪವಾಗಿ ಶಿಷ್ಯೆಯರಿಂದ ಆತ್ಮ ಸಮರ್ಪಣೆ ಮಾಡಿಸುತ್ತಾರೆ. ಎಲ್ಲಿಯವರೆಗೆ ಹೇಗೆಂದು ಹೇಳುವುದು. ಆ ದಿನ ನಮಗೆ ಒಂದು ಉದ್ದವಾದ ಪತ್ರ ದೊರಕಿತು. ಅದರಲ್ಲಿ ಒಬ್ಬ ಸಜ್ಜನನು ಹೇಗೆ, ಯಾವ ರೀತಿಯಲ್ಲಿ ಅವರ ಗುರುಭಗವಂತನ ಮುಖಾಂತರ ಅವನ ಧರ್ಮಪತ್ನಿಯನ್ನು ಯಾವ ಪ್ರಕಾರ ಧರ್ಮಚ್ಯುತಮಾಡಲಾಯಿತೆಂಬುದರ ರೋಮಾಂಚಕಾರಿ ವರ್ಣನೆಯಿತ್ತು. ಭಗವಂತ ಮತ್ತು ಧರ್ಮದ ಹೆಸರಿನಲ್ಲಿ ಭಗವಂತನ ಮಂದಿರದಲ್ಲಿ, ಭಗವಂತನ ವಿಗ್ರಹದೆದುರು ಎಂತಹ ದುರಾಚರಣೆಗಳು ಮಾಡಲಾಗುತ್ತವೆಯೆಂದರೆ ಅವುಗಳ ಕಲ್ಪನೆ ಮಾತ್ರದಿಂದಲೂ ಮಹಾನ್ ದುಃಖವಾಗುತ್ತದೆ. ವಾಸ್ತವವಾಗಿ ಹೀಗಾದಾಗ ಏನು ಹೇಳುವುದು? ಆದ್ದರಿಂದ ನಮ್ಮ ಸರಳ ಹೃದಯರಾದ ಮತ್ತು ಶ್ರದ್ಧಾಸಂಪನ್ನರಾದ ದೇವಿಯರು ತಮ್ಮ ಸತೀತ್ವವನ್ನೇ ಎಲ್ಲಕ್ಕಿಂತಲೂ ಹೆಚ್ಚು ಮೌಲ್ಯವುಳ್ಳ ಧನವೆಂದು ತಿಳಿಯಲಿ ಮತ್ತು ಯಾವುದೇ ಸಂತ-ಮಹಾತ್ಮರು, ಗುರು, ಆಚಾರ್ಯ, ಭಕ್ತ, ಪ್ರೇಮೀ, ರಸಿಕ, ದೇಶಸೇವಕ, ಸಮಾಜಸೇವಕ ಮೊದಲಾದವರ ದುಷ್ಟಸಹವಾಸದಲ್ಲಿ ಬೀಳದಿರಲಿ. ಏಕಾಂತದಲ್ಲಿ ಯಾವುದಾದರೂ ಪರಪುರುಷನೊಡನೆ ಸೇರುವುದಾಗಲಿ, ಯಾರನ್ನಾದರೂ ಸ್ಪರ್ಶಿಸುವುದು, ಯಾರನ್ನಾದರೂ ಗುರುವನ್ನಾಗಿಸಿಕೊಂಡು ಅಥವಾ ಪ್ರೇಮಿ ಮಹಾತ್ಮನೆಂದು ಒಪ್ಪಿ ಕೆಟ್ಟ ಚರ್ಚೆಯಲ್ಲಿ ಒಂಟಿಯಾಗಿ ಅಥವಾ ಅನ್ಯಸ್ತ್ರೀಯರೊಡನೆ ಸೇರುವುದು, ಇದಾವುದನ್ನೂ ಮಾಡಕೂಡದು; ಮತ್ತೆ ಆ ಚರ್ಚೆಯಲ್ಲಿ ಸೇರಕೂಡದು. ನಿಜವಾದ ಸಂತ-ಮಹಾತ್ಮರು, ಭಕ್ತರು ಪ್ರೇಮಿಗಳು ಇಂತಹ ದುರಾಚಾರವನ್ನು ಎಂದಿಗೂ ಮಾಡಲಾರರು. ಹೀಗೆ ಮಾಡುವವರು ಸಂತ-ಮಹಾತ್ಮರುಗಳ ವೇಷದಲ್ಲಿ

ಅಡಗಿರುವ, ತಮ್ಮ ಕುತ್ಸಿತ ಕಾಮನೆಗಳ ಪೂರ್ತಿಗಾಗಿ ವೇಷಹಾಕಿಕೊಂಡು, ಈ ಪವಿತ್ರ ವೇಷಗಳನ್ನು ಕಳಂಕಿತವಾಗಿಸುತ್ತಿರುವ ಪಾಪಿಗಳಾಗಿದ್ದಾರೆ; ಸತ್ಯವೇನೆಂದರೆ ಈ ಘೋರ ಕಲಿಯುಗದಲ್ಲಿ ಇಂತಹ ಜನರು ಬಹಳವಾಗಿ ಹೋಗಿದ್ದಾರೆ. ಇವರುಗಳಿಂದ ದೂರವಿರಬೇಕು.

ಧಾರ್ಮಿಕ ಕ್ಷೇತ್ರದಲ್ಲಿರುವ ಈ ಕೆಡುಕು ರಾಜನೈತಿಕ ಮತ್ತು ಸಾಮಾಜಿಕ ಕ್ಷೇತ್ರದಲ್ಲಿಯೂ ಕಡಿಮೆಯೇನೂ ಇಲ್ಲ. ಸೋದರಿ ಎಂದು ಹೇಳುತ್ತ ಸಂಬೋಧಿಸುವ ಅನೇಕ ದುಷ್ಟವ್ಯಕ್ತಿಗಳು, ದೇಶಭಕ್ತರು ಮತ್ತು ಸಮಾಜ ಸೇವಕರ ಪವಿತ್ರ ಉಡುಪುಗಳನ್ನು ಧರಿಸಿರುವ ಮತ್ತು ಸ್ತ್ರೀಸಮಾಜದ ಕಷ್ಟ-ಕಾರ್ಪಣ್ಯಗಳ ಕುರಿತು ಸಹಾನುಭೂತಿಯ ಕಣ್ಣೀರು ಸುರಿಸುತ್ತಿರುವವರು ಇದೇ ಪ್ರಕಾರದ ಕುಕರ್ಮಗಳಲ್ಲಿ ನಿರತರಾಗಿರುತ್ತಾರೆ. ಇದೇ ದುರಾಚಾರಕ್ಕಾಗಿ ಇಂದು ಅನೇಕ ವಿಧವಾಶ್ರಮ ಮತ್ತು ಮಹಿಳಾಶ್ರಮಗಳು ನಡೆಸಲಾಗುತ್ತಿವೆ. ಇದು ನಮ್ಮ ಮಹಾನ್ ಪತನವಾಗಿದೆಯೆಂಬುದು ನಗ್ನ ಸತ್ಯವಾಗಿದೆ. ಸಾವಧಾನರಾಗಿ !

❑❑

## ೧೯. ಸ್ತ್ರೀ-ಶಿಕ್ಷಣ ಮತ್ತು ಸಹಶಿಕ್ಷಣ

ಬಹುಶಃ ಎಲ್ಲಧಾರ್ಮಿಕ ಹಾಗೂ ವಿದ್ವಾಂಸ ಮಹಾನುಭಾವರುಗಳ ಅಭಿಪ್ರಾಯವೇನೆಂದರೆ - ವರ್ತಮಾನ ಧರ್ಮಹೀನ ಶಿಕ್ಷಣಪ್ರಣಾಲಿ ಹಿಂದೂ ನಾರಿಯರ ಆದರ್ಶಕ್ಕೆ ಸರ್ವಥಾ ಪ್ರತಿಕೂಲವಾಗಿದೆಯಲ್ಲದೆ, ಯುವಕ-ಯುವತಿಯರು ಒಟ್ಟಿಗೆ ಶಿಕ್ಷಣ ಪಡೆಯುವುದಂತೂ ಇನ್ನೂ ಹೆಚ್ಚು ಹಾನಿಕರವಾಗಿದೆ. ಈ ಸಹಶಿಕ್ಷಣದ ಭೀಷಣ ಪರಿಣಾಮವನ್ನು ಪ್ರತ್ಯಕ್ಷ ನೋಡಿದ ನಂತರವೂ, ಮೋಹವಶರಾಗಿ ಇಂದು ಅದೇ ಮಾರ್ಗದಲ್ಲಿ ನಡೆಯಲು ಆಗ್ರಹಮಾಡಲಾಗುತ್ತಿದೆ. ಇದರ ಕಾರಣ ಪ್ರತ್ಯಕ್ಷವಾಗಿದೆ. ಯಾವ ವಿಷಯಗಳು ನಮ್ಮ ಸಮಾಜದಲ್ಲಿ ಪತನವೆಂದು ತಿಳಿಯಲಾಗುತ್ತವೆಯೋ ಆ ವಿಷಯಗಳೇ ಇಂದಿನ ಜಗತ್ತಿನ ದೃಷ್ಟಿಯಲ್ಲಿ ಉತ್ಥಾನ ಅಥವಾ ಉನ್ನತಿಯ ಚಿಹ್ನೆಯೆಂದು ತಿಳಿಯಲ್ಪಡುತ್ತವೆ.

ಪಾಶ್ಚಾತ್ಯ ಸಭ್ಯತೆಯ ಆದರ್ಶ ಇಂದು ನಮ್ಮ ಹೃದಯಗಳಲ್ಲಿ ಎಲ್ಲಕ್ಕಿಂತ ಉನ್ನತ ಸ್ಥಾನವನ್ನು ಪಡೆದುಕೊಂಡುಬಿಟ್ಟಿದೆ. ಆದ್ದರಿಂದ ಅಂಧರಾಗಿ ಅದರ ಕಡೆಗೆ ಸ್ವಯಂ ಮುನ್ನುಗ್ಗುವುದು ಮತ್ತು ಇತರರನ್ನು ಕರೆದುಕೊಂಡು ಹೋಗುವ ಪ್ರಯತ್ನಮಾಡುವುದು ಸ್ವಾಭಾವಿಕವಾಗಿದೆ.

ಮೊದಲು ಸಮಾನ ಶಿಕ್ಷಣವನ್ನು ಕುರಿತು ವಿಚಾರಮಾಡೋಣ. ಮನುಷ್ಯನ ಒಳಗೆ ಅಡಗಿರುವ ಪವಿತ್ರವಾದ ಹಾಗೂ ಅಭ್ಯುದಯಕಾರಕ ಶಕ್ತಿಗಳ ಉಚಿತ ವಿಕಾಸವು ಶಿಕ್ಷಣದ ಸಾಮಾನ್ಯ ಉದ್ದೇಶವಾಗಿದೆ. ಆದರೆ ಸ್ತ್ರೀ-ಪುರುಷರ ಶಕ್ತಿ ಒಂದೇ ಆಗಿದೆಯೇ? ಪುರುಷ ಮತ್ತು ಸ್ತ್ರೀಯ ಶಕ್ತಿಯ ವಿಕಾಸಕ್ಷೇತ್ರವು ಒಂದೇ ಆಗಿದೆಯೇ? ಎಲ್ಲ ವಿಷಯಗಳಲ್ಲಿಯೂ ಪುರುಷನಿಗೆ ಸಮಾನರಾಗಿ ಸ್ತ್ರೀಯನ್ನು ಶಿಕ್ಷಿತಳನ್ನಾಗಿ ಮಾಡುವ ಅವಶ್ಯಕತೆಯಿದೆಯೇ? ಆಳವಾಗಿ ವಿಚಾರ ಮಾಡಿದಲ್ಲಿ ಇಲ್ಲ ಎಂಬ ಸ್ಪಷ್ಟ ಉತ್ತರ ದೊರಕುತ್ತದೆ. ಇಬ್ಬರ ಶರೀರ-ರಚನೆಯಲ್ಲಿ ಭೇದವಿದೆ, ಮತ್ತು ಇಬ್ಬರ ಕಾರ್ಯಕ್ಷೇತ್ರಗಳೂ ವಿಭಿನ್ನವಾಗಿವೆ. ಆದ್ದರಿಂದ ಈ ಭೇದವನ್ನು ಗಮನದಲ್ಲಿಸಿಕೊಂಡೇ ಶಿಕ್ಷಣದ ವ್ಯವಸ್ಥೆ ಮಾಡಬೇಕು. ಈ ಪ್ರಕೃತಿಸ್ಥವಾದ ಭಿನ್ನತೆಯನ್ನು ಅಳಿಸಿಹಾಕಿ ಇಂದು ನಾವು ಪ್ರಮಾದವಶರಾಗಿ ಸ್ತ್ರೀ-ಪುರುಷರನ್ನು ಎಲ್ಲಕಾರ್ಯಗಳಲ್ಲಿ ಸಮಾನವಾಗಿ ನೋಡಬಯಸುತ್ತೇವೆ. ಈ ಅಸಂಭವವಾದ ಸಾಮ್ಯವಾದೀ ಮೋಹಿನೀ ಆಸೆಯು ನಮ್ಮ ಮತಿಯನ್ನು ತಮಸ್ಸಿನಿಂದ ಮುಚ್ಚಿಹಾಕಿಬಿಟ್ಟಿದೆಯಾದ್ದರಿಂದ ಇಂದು ಪ್ರತ್ಯಕ್ಷವೂ ಅಪ್ರತ್ಯಕ್ಷವಾಗುತ್ತಿದೆ. ಗಮನವಿಟ್ಟು ನೋಡಿದಲ್ಲಿ ಇಬ್ಬರಲ್ಲಿ ಎರಡು ಪ್ರಕಾರದ ಶಕ್ತಿಗಳನ್ನು ಒಪ್ಪಬೇಕಾಗುತ್ತದೆ ಮತ್ತು ಇಬ್ಬರ ಎರಡು ಕ್ಷೇತ್ರಗಳೂ ಪ್ರಮಾಣೀಕೃತವಾಗುತ್ತವೆ. ಸ್ತ್ರೀಯರ ಕ್ಷೇತ್ರ ಮನೆ ಮತ್ತು ಪುರುಷರ ಕ್ಷೇತ್ರ ಹೊರಗೆ. ಸ್ತ್ರೀಯು ಗೃಹಿಣಿಯಾಗಿದ್ದಾಳೆ. ಪುರುಷನು ಹೊರಗಿನ ಯಜಮಾನನಾಗಿದ್ದಾನೆ. ಮನೆ ಮತ್ತು ಹೊರಗಡೆ ಎಂದಾಗ ಸ್ತ್ರೀಯು ಸದಾ ಮನೆಯೊಳಗೆ ಸೆರೆಯಾಗಿರಬೇಕು. ಮತ್ತು ಪುರುಷನು ಸದಾ ಮನೆಯ ಹೊರಗಡೆ ಇರಬೇಕೆಂದು ಅರ್ಥವಲ್ಲ. ಸ್ತ್ರೀ-ಪುರುಷರಿಬ್ಬರೂ ಕೂಡಿಯೇ ಒಂದು ನಿಜವಾದ ಮನೆಯೆಂಬುದಾಗಿದೆ. ಪತಿಯು ಅದೇ ಮನೆಗೋಸ್ಕರ ಹೊರಗಡೆ ಹೋಗಿ ಬರುತ್ತಾನೆ ಮತ್ತು ಸ್ತ್ರೀಯು ಅದೇ ಮನೆಗೋಸ್ಕರ ಮನೆಯಲ್ಲಿರುತ್ತಾಳೆ. ಇದೇ ಪ್ರಕಾರ ಅವಶ್ಯಕತೆಯುಂಟಾದಲ್ಲಿ ಧಾರ್ಮಿಕ ಅಥವಾ ಸಾಮಾಜಿಕ ಕಾರ್ಯದ ನಿಮಿತ್ತ ಸ್ತ್ರೀಯು ಮನೆಯ ಮರ್ಯಾದೆಗನುಸಾರವಾಗಿ ಪತಿ-ಪುತ್ರರ ಜೊತೆ ಹೊರಗೆ ಹೋಗಿ ಬರುತ್ತಾಳೆ ಅದೇ ಮನೆಗಾಗಿ ಮನೆಯನ್ನು ಮರೆತು ಸ್ವತಂತ್ರಳಾಗಿ ಷೋಕಿಗಾಗಿ ಅಲ್ಲ. ಪತಿಯು ಮನೆಗೋಸ್ಕರವಾಗಿ ಮನೆಗೆ ಬರುತ್ತಾನೆ, ಮನೆಯನ್ನು ಹೊರಗಿನ ಸಫಲತೆಯಲ್ಲಿ ಉಬ್ಬಿಹೋಗಿ, ಅಭಿಮಾನದಲ್ಲಿ ಮುಳುಗಿ, ಅಧಿಕಾರ ನಡೆಸುವುದಕ್ಕಾಗಿ ಅಲ್ಲ.

ಮನೆ-ಹೊರಗಿನ ಈ ವ್ಯವಸ್ಥೆ, ಬರುವುದು - ಹೋಗುವುದು, ಸಂಧಿಸುವುದು - ಸೇರುವುದು, ಸಂಪಾದಿಸುವುದು - ಊಟಮಾಡುವುದು, ಪೂಜೆ - ಪಾಠ, ದಾನ - ಪುಣ್ಯ, ಆಚಾರ - ವ್ಯವಹಾರ ಎಲ್ಲ ಈ ಒಂದೇ ಮನೆಯನ್ನು ಸುರಕ್ಷಿತ ಮತ್ತು ಸಮುನ್ನತವಾಗಿ ಮಾಡುವುದಕ್ಕಾಗಿಯೇ, ಸ್ತ್ರೀಗೆ ಮಾತೃತ್ವದಲ್ಲಿರುವ ಸುಖ, ಮನೆಯ ಸ್ವತಂತ್ರತೆಯಲ್ಲಿರುವ ಆನಂದ, ಆಫೀಸಿನಲ್ಲಿ ಗುಮಾಸ್ತೆಯಾಗಿರುವ ಅವಳಿಗೆ ಎಲ್ಲಿಂದ ದೊರಕೀತು? ಸ್ತ್ರೀಯ ವಿಶೇಷವಾದ ಕ್ಷೇತ್ರವೆಂದರೆ ಮಾತೃತ್ವ, ಅವಳ ಎಲ್ಲ ಅಂಗಾಂಗಗಳು ಪ್ರಾರಂಭದಿಂದ ಈ ಮಾತೃತ್ವಕ್ಕಾಗಿಯೇ ಯತ್ನಶೀಲವಾಗಿವೆ. ಅವಳು ಮಾತೃತ್ವವನ್ನು ಪೋಷಿಸುವ ಗುಣಗಳಿಂದಲೇ ಮಹಾನ್ ಆಗಿದ್ದಾಳೆ. ಅವಳು ತಾಯಿಯಾಗಿಯೇ ದೊಡ್ಡ-ದೊಡ್ಡ ಯಶಸ್ವಿ ಪುರುಷರನ್ನು ಹಡೆಯುತ್ತಾಳೆ. ಎಲ್ಲ ಪ್ರಕಾರದ ಪುರುಷೋಚಿತವಾದ ದೊಡ್ಡ ದೊಡ್ಡ ಪ್ರಲೋಭಗಳನ್ನು ತಳ್ಳಿಹಾಕಿ, ಬಹಳ ದೊಡ್ಡ ತ್ಯಾಗ ಮಾಡಿಯೇ ನಾರಿಯು ಈ ಮಾತೃತ್ವದ ಗೌರವಪೂರ್ಣ ಪದವಿಯನ್ನು ಪಡೆದು ಸುಖಿಯಾಗುತ್ತಾಳೆ. ಯಾವ ಶಿಕ್ಷಣದಿಂದ ಈ ಮಾತೃತ್ವಕ್ಕೆ ಧಕ್ಕೆಯುಂಟಾಗುತ್ತದೋ, ಯಾವ ಶಿಕ್ಷಣದಿಂದ ಸ್ತ್ರೀಯು ಪವಿತ್ರವಾದ ಮಾತೃತ್ವದ ಆಧಾರ ಸ್ವರೂಪೀ ಸತೀತ್ವಕ್ಕೆ ಕೊಡಲಿಯ ಪೆಟ್ಟು ಬೀಳುತ್ತದೆಯೋ- ಅದು ಶಿಕ್ಷಣವಲ್ಲ, ಕುಶಿಕ್ಷಣವಾಗಿದೆ.

ಓರ್ವ ಫ್ಯಾಶನೆಬಲ್ ಪಾಶ್ಚಾತ್ಯ ಯುವತಿಯು ತನ್ನ ಬಾಲಕನನ್ನು ರಾತ್ರಿ ವೇಳೆಯಲ್ಲಿ ಅಧಿಕವಾಗಿ ಕೆಮ್ಮುತ್ತಿದ್ದ ಕಾರಣ, ಬಹಳ ಅಳುತ್ತಿದ್ದು ತನ್ನ ಸುಖ-ಶಯನಕ್ಕೆ ವಿಘ್ನಕಾರಕವಾಗಿತ್ತೆಂಬ ಕಾರಣದಿಂದ ಅವನನ್ನು ಕೊಂದು ಹಾಕಿದಳು ಎಂದು ಒಂದು ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಒಬ್ಬ ಯುವತಿಯು ಮಗುವಿನ ಪಾಲನೆ-ಪೋಷಣೆಯಿಂದ ತನ್ನನ್ನು ಬಿಡಿಸಿಕೊಳ್ಳುವುದಕ್ಕಾಗಿ ಆತ್ಮಹತ್ಯೆ ಮಾಡಿಕೊಂಡಿದ್ದಳು. ಮಾತೃತ್ವದ ಈ ವಿನಾಶ ಎಷ್ಟು ಭಯಂಕರವಾದುದು? ಆದರೆ, ಯಾವ ಉಚ್ಚಶಿಕ್ಷಣಕ್ಕಾಗಿ ನಾವು ವ್ಯಾಕುಲರಾಗಿದ್ದೇವೆಯೋ, ಯಾವ ಸಭ್ಯತೆಯ ಪ್ರಭಾವವು ಇಂದಿನ ನಮ್ಮ ಸ್ತ್ರೀ-ಶಿಕ್ಷಣವನ್ನು ನಡೆಸುತ್ತಿದೆಯೋ ಆ ಸಭ್ಯತೆಯ ಮಾತೃತ್ವನಾಶದ ನಮೂನೆಯು ಇದೇ. ಇಂದು ನಾವು ಸ್ತ್ರೀಯರ ಮಾತೃತ್ವದ ವಿನಾಶಗೈದು ಅವರಿಗೆ ಮುಂದಾಳಾಗುವುದನ್ನು ಕಲಿಸುತ್ತೇವೆ. ಆದರೆ, ಒಂದು ವೇಳೆ ಸ್ತ್ರೀಯು ತನ್ನ ಸ್ವಾಭಾವಿಕವಾದ ತ್ಯಾಗದ ಆದರ್ಶವನ್ನು ಮರೆತಳೆಂದರೆ - ಅವಳು ಸ್ನೇಹಮಯಿ ತಾಯಿ, ಪ್ರೇಮಮಯಿ

ಪತ್ನಿ ಅಥವಾ ತ್ಯಾಗಮಯಿ ದೇವಿಯಾಗಲಿಲ್ಲವೆಂದಾದರೆ- ಅವಳ ನೇತೃತ್ವ ಯಾರ ಮೇಲಾದೀತು? ಎಂಬಂಶವನ್ನು ಮರೆತುಬಿಡುತ್ತೇವೆ.

ವಿದೇಶೀ ಭಾಷೆಯಲ್ಲಿ ಬಿ.ಎ, ಎಂ.ಎ, ಆಗಿ ಬಿಡುವುದು ಯಾವ ವಿಶೇಷ ಶಿಕ್ಷಣವಲ್ಲವೆಂಬುದನ್ನು ನೆನಪಿಡಬೇಕು. ಪರಭಾಷೆಯನ್ನು ಕಲಿತ ಮಾತ್ರದಿಂದ ಯಾವ ಸ್ತ್ರೀಯೂ ವಿದುಷಿಯಾಗುವುದಿಲ್ಲ; ಅದರಿಂದಲೇ ಅವಳಲ್ಲಿ ಯಾವ ದಿವ್ಯಗುಣವೂ ಬಂದು ಬಿಡುವುದಿಲ್ಲ. ಯಾವ ಹಾನಿಯೂ ಉಂಟಾಗುವುದಿಲ್ಲವೆಂದಾದರೆ ವಿದೇಶೀ ಭಾಷೆಯನ್ನು ಕಲಿಯುವುದರಿಂದ ಯಾವ ಅಡ್ಡಿಯೂ ಇಲ್ಲ; ಆದರೆ ತನ್ನ ಶುದ್ಧ ಸಂಸ್ಕೃತಿಯನ್ನು ಬಲಿಕೊಟ್ಟು, ವಿದೇಶೀ ಭಾಷೆಯನ್ನು ಕಲಿತು ಶಿಕ್ಷಿತಳೆನಿಸಿಕೊಳ್ಳುವುದಾದರೋ ಬಹಳ ನಷ್ಟಕರವಾಗಿದೆ. ಈ ಶಿಕ್ಷಣದ ಪರಿಣಾಮವಾಗಿ ಸ್ತ್ರೀಯರಲ್ಲಿ ಇಲ್ಲಿಯವರೆಗೆ ಯಾವ ಹೊಸ ಸಾಮಾಜಿಕ ಪ್ರಯೋಗಗಳು ಪ್ರಾರಂಭವಾಗಿವೆಯೋ, ಅವುಗಳಿಂದಲೂ ಅವರ ಮತ್ತು ಸಮಾಜದ ನೈತಿಕ ಮತ್ತು ಧಾರ್ಮಿಕ ಎರಡೂ ದೃಷ್ಟಿಗಳಿಂದ ಯಥೇಚ್ಛ ಹಾನಿಯಾಗುತ್ತಿದೆ. ಸ್ತ್ರೀಯರು ಓದಿ-ಬರೆದು, ಶಿಕ್ಷಿತರಾಗಬಾರದೆಂಬುದು ನಮ್ಮ ಅಭಿಪ್ರಾಯವಲ್ಲ. ದ್ರೌಪದಿಯು ವಿದುಷಿಯಾಗಿದ್ದಳು, ರಾಜ್ಯಸಂಚಾಲನೆ ಮಾಡಬಲ್ಲವಳಾಗಿದ್ದಳು ಮತ್ತು ಮಹಾಭಾರತ ಯುದ್ಧದ ಮಂತ್ರಣಾ ಸಭೆಯಲ್ಲಿಯೂ ಅವಳು ತನ್ನ ಪತಿಯರೊಡನೆ ಇರುತ್ತಿದ್ದಳು; ಆದರೆ ಅವಳು ಆದರ್ಶ ಸದ್ಗೃಹಿಣಿಯೂ ಆಗಿದ್ದಳು.

ಆದ್ದರಿಂದ ಸದ್‌ಗೃಹಿಣಿಯಾಗಿಯೇ ಸ್ತ್ರೀಯರು ವಿದುಷಿಯರಾಗಲಿ; ಇಂತಹುದೇ ವಿದ್ಯಾಭ್ಯಾಸದ ಆವಶ್ಯಕತೆಯಿದೆ. ಈ ದೃಷ್ಟಿಯಿಂದ ಇಂದಿನ ವಿಶ್ವವಿದ್ಯಾಲಯಗಳ ಶಿಕ್ಷಣ ನಾರೀಜಾತಿಗೆ ನಿರರ್ಥಕವೆಂಬುದು ಮಾತ್ರವಲ್ಲ ಅತ್ಯಂತ ಹಾನಿಕರ. ಯಾವ ಶಿಕ್ಷಣವು ಸ್ತ್ರೀಯರ ಸಹಜ-ಸ್ವಭಾವ ಗುಣಗಳಾದ ಮಾತೃತ್ವ, ಸತೀತ್ವ, ಸದ್ಗೃಹಿಣಿಯಾಗುವಿಕೆ, ಶಿಷ್ಟಾಚಾರ ಮತ್ತು ಸ್ತ್ರೀಯೋಚಿತ ಹಾರ್ದಿಕ ಉಪಯೋಗೀ ಸೌಂದರ್ಯ-ಮಾಧುರ್ಯಗಳನ್ನು ನಾಶಮಾಡುತ್ತದೆಯೋ, ಅದನ್ನು ಉಚ್ಚ ಶಿಕ್ಷಣವೆಂದು ಹೇಳುವುದು ನಿಜವಾಗಿಯೂ ಬಹಳ ಆಶ್ಚರ್ಯಕರ ವಿಷಯವಾಗಿದೆ. ಯಾವ ಶಿಕ್ಷಣದಿಂದ ಸದ್ಗುಣಗಳು ಉಳಿದು ವೃದ್ಧಿಯಾಗಬಲ್ಲವೋ ಅದೇ ವಿದ್ಯೆಯನ್ನು ಬೋಧಿಸಿ ನಾರಿಯರನ್ನು ವಿದುಷಿಯರನ್ನಾಗಿ ಮಾಡಬೇಕು ಮತ್ತು ಇದರ ಅಗತ್ಯವೂ ಇದೆ. ಸಂಸ್ಕೃತಿಯ ರಕ್ಷಣೆ ಹಾಗೂ ಸದ್ಗುಣಗಳ ವಿಕಾಸ ಯಾವುದರಿಂದಾಗುತ್ತದೆಯೋ ಅದೇ ಯಥಾರ್ಥ ಶಿಕ್ಷಣವು. ಇದು ಯಾರಲ್ಲಿರುತ್ತದೋ

ಅವಳೇ ಸುಶಿಕ್ಷಿತಳು. ಆದ್ದರಿಂದ ವರ್ತಮಾನ ಸ್ತ್ರೀ ಶಿಕ್ಷಣದಲ್ಲಿ ಆಮೂಲಾಗ್ರ ಪರಿವರ್ತನೆಯಾಗಬೇಕು ಮತ್ತು ನಾರಿಗೆ ತನ್ನ ಸ್ವರೂಪದ ಹಾಗೂ ಕರ್ತವ್ಯದ ಯಥಾರ್ಥ ಜ್ಞಾನವುಂಟಾಗುವಂತಹ ಶಿಕ್ಷಣ ಪದ್ಧತಿಯಾಗಬೇಕು.

ಈಗ ಸಹಶಿಕ್ಷಣದ ಬಗೆಗೆ ವಿಚಾರ ಮಾಡೋಣ. ಸ್ತ್ರೀಯರಲ್ಲಿ ಬಹಳವಾಗಿ ಅನೇಕವಾದ ಸ್ವಾಭಾವಿಕ ಗುಣಗಳಿವೆ. ಆ ಗುಣಗಳಿಂದಾಗಿ ಅವರು ಮಹಾನ್ ಪುರುಷರ ಮಾತೆಯರಾಗುತ್ತಾರೆ. ಆ ಗುಣಗಳ ವಿಕಾಸವೇ ಸ್ತ್ರೀ ಶಿಕ್ಷಣದ ಉದ್ದೇಶವಾಗಬೇಕು. ಆದರೆ ಅದರ ಜೊತೆಯಲ್ಲಿ ಯಾವ ಪದಾರ್ಥ ಎಷ್ಟು ಉತ್ಕೃಷ್ಟವಾಗಿರುತ್ತದೋ, ವಿರುದ್ಧಮಾರ್ಗದಲ್ಲಿ ನಡೆದರೆ ಅದರಿಂದ ಆಗುವ ಹಾನಿಯೂ ಅಷ್ಟೇ ಹೆಚ್ಚಾಗುತ್ತದೆ - ಎಂಬುದನ್ನು ನೆನಪಿಡಬೇಕು. ಸ್ತ್ರೀಯನ್ನು ಉನ್ನತವಾಗಿಸುವ, ತ್ಯಾಗ, ಸಹನಶೀಲತೆ, ಸರಳತೆ, ತಪಸ್ಸು, ಸೇವೆ ಮೊದಲಾದ ಅನೇಕ ಆದರ್ಶ ಗುಣಗಳಿವೆ. ಒಂದು ವೇಳೆ ಸ್ತ್ರೀಯು ಚರಿತ್ರಹೀನಳಾದರೆ ಅವಳ ಇದೇ ಗುಣಗಳು ವಿರುದ್ಧವಾದ ದಿಕ್ಕಿನಲ್ಲಿ ಪ್ರವಹಿಸಿ ಅವಳನ್ನು ಅತ್ಯಂತ ಭಯಂಕರಳಾಗಿ ಮಾಡಿಬಿಡುತ್ತವೆ.

ಸ್ತ್ರೀ ಮತ್ತು ಪುರುಷರ ಶರೀರ ರಚನೆಯು ಹೇಗಿದೆಯೆಂದರೆ ಅವರಲ್ಲಿ ಒಬ್ಬರು ಇನ್ನೊಬ್ಬರನ್ನು ಆಕರ್ಷಿಸುವ ವಿಲಕ್ಷಣ ಶಕ್ತಿಯಿದೆ. ನಿತ್ಯ ಸಮೀಪದಲ್ಲಿದ್ದುಕೊಂಡು ಸಂಯಮದಿಂದಿರುವುದು ಅಸಂಭವವೆಂಬಂತಿದೆ. ಪ್ರಾಚೀನ ಕಾಲದ ತಪೋವನದ ನಿರ್ಮಲ ವಾತಾವರಣದಲ್ಲಿ ವಾಸಿಸುವ ಜೈಮಿನಿ, ಸೌಭರಿ, ಪರಾಶರರಂತಹ ಮಹರ್ಷಿಗಳೂ, ನ್ಯೂಟನ್ ಮತ್ತು ಮಿಲ್ಟನ್‌ರಂತಹ ವಿವೇಕಿ ಪುರುಷರು ಮತ್ತು ವರ್ತಮಾನಕಾಲದ ದೊಡ್ಡ ದೊಡ್ಡ ಸಾಧಕ ಪುರುಷರೂ ಸಹ ಸಂಸರ್ಗದೋಷದಿಂದ ಇಂದ್ರಿಯ ಸಂಯಮವನ್ನು ಉಳಿಸಿಕೊಳ್ಳಲಿಲ್ಲ. ಅಂದಮೇಲೆ, ವಿಲಾಸ-ಭವನ ರೂಪವಾದ ಸಿನೇಮಾಗಳಿಗೆ ಹೋಗುವ, ಕೊಳಕಾದ ಕಾದಂಬರಿಗಳನ್ನೋದುವ, ತನು-ಮನಗಳಲ್ಲಿ ಮತ್ತು ವಾಣಿಯಿಂದ ಸದಾ ಶೃಂಗಾರದ ಮನನ ಮಾಡುವ, ಭೋಗವಾದಕ್ಕೆ ಆಶ್ರಯಕೊಡುವ, ಕೇವಲ ಅರ್ಥಕರೀ (ಹಣ ಸಂಪಾದನೆ) ವಿದ್ಯೆಯ ಕ್ಷೇತ್ರವಾದ ಕಾಲೇಜುಗಳಲ್ಲಿ ವ್ಯಾಸಂಗಮಾಡುವ ಮತ್ತು ಯಥೇಚ್ಛ ಆಚರಣೆಗಳ ಕೇಂದ್ರಸ್ಥಾನವಾದ ಛಾತ್ರಾವಾಸಗಳಲ್ಲಿ ವಾಸಿಸುವ, ವಿಲಾಸಿತ ಮೂರ್ತಿಗಳಾದ ಯುವಕ-ಯುವತಿಯರಿಂದ ಶುಕದೇವನ ಸದೃಶ ಇಂದ್ರಿಯ ಸಂಯಮವನ್ನು ನಿರೀಕ್ಷಿಸುವುದು ತಿಳಿದೂ ತಿಳಿದೂ ತಾನೇ ಮೋಸ ಹೋಗುವುದಾಗಿದೆ. ಆದರೇನು ಮಾಡುವುದು? ದೊಡ್ಡ ದೊಡ್ಡ ದಿಗ್ಗಜ ವಿದ್ವಾಂಸರೂ ಕೂಡ ಯೂರೋಪಿನ

ಉದಾಹರಣೆಯನ್ನು ಮುಂದುಮಾಡಿ ಸಹಶಿಕ್ಷಣದ ಸಮರ್ಥನೆ ಮಾಡುತ್ತಿರುವುದು ಮತಿವೈಚಿತ್ರ್ಯವಾಗಿದೆ.

ಕೆಲವರು ಸಂಸ್ಕೃತ ನಾಟಕಗಳ ಆಧಾರದ ಮೇಲೆ ಪ್ರಾಚೀನ ಗುರುಕುಲಗಳಲ್ಲಿ ಸಹಶಿಕ್ಷಣವಿದ್ದುದನ್ನು ಸಮರ್ಥಿಸುತ್ತಾರೆ. ಆದರೆ ಪ್ರಾಚೀನ ಗ್ರಂಥಗಳಲ್ಲೆಲ್ಲಿಯೂ ಕನ್ಯೆಯರು ಮತ್ತು ಸ್ತ್ರೀಯರು ಋಷಿಗಳ ಆಶ್ರಮಕ್ಕೆ ಹೋಗಿ ಒಟ್ಟಿಗೆ ವಿದ್ಯಾಭ್ಯಾಸಮಾಡುತ್ತಿದ್ದರೆಂಬುದಕ್ಕೆ ಪ್ರಮಾಣ ಸಿಗುವುದಿಲ್ಲವೆಂಬುದನ್ನು ಅವರು ತಿಳಿಯಬೇಕು; ಗುರು-ಕನ್ಯೆಯರೊಡನೆ ಸಹೋದರ-ಸಹೋದರೀ ಸಂಬಂಧಗಳು ಬ್ರಹ್ಮಚಾರೀ ಗುರುಕುಲದಲ್ಲಿ ಅವಶ್ಯವಾಗಿ ಇರುತ್ತಿದ್ದುವು. ಆದರೆ ಗುರುಕುಲಗಳಲ್ಲಿ ಅತ್ಯಂತ ಕಠೋರ ನಿಯಮಗಳಿದ್ದುವು. ಎಲ್ಲ ವಿಷಯಗಳಲ್ಲಿ ಸಂಯಮವಿತ್ತು ಮತ್ತು ಇಂದಿನ ಕಾಲೇಜು-ಹಾಸ್ಟಲುಗಳಂತೆ ವಿಲಾಸಿತನ ಹಾಗೂ ಸ್ತ್ರೀ-ಪುರುಷರ ಪರಸ್ಪರ ಕಾಮವೃತ್ತಿಯನ್ನು ಪ್ರಚೋದಿಸುವ ಸಾಧನಗಳು ಅಲ್ಲಿರಲಿಲ್ಲ. ಇಷ್ಟಾದರೂ ಕಚ-ದೇವಯಾನಿಯರ ಇತಿಹಾಸದ ಅನುಸಾರ ಅಲ್ಲಲ್ಲಿ ಆಕರ್ಷಣೆಯುಂಟಾಗುವ ಸಂಭವವಿತ್ತು. ಆದ್ದರಿಂದ ಇಂದಿನ ಸಹಶಿಕ್ಷಣದ ಸಮರ್ಥನೆ ಇದರಿಂದ ಎಂದಿಗೂ ಆಗಲಾರದು.

ಕೆಲವು ವರ್ಷಗಳ ಹಿಂದೆ ಲಾಹೋರ್ ನಗರದ ಒಂದು ಸುಧಾರಕ ಪತ್ರಿಕೆಯಲ್ಲಿ ಬಾಲಕ-ಬಾಲಕಿಯರ ಸಹಶಿಕ್ಷಣದ ವಿರುದ್ಧ ಒಬ್ಬ ಜವಾಬ್ದಾರಿಯುತ ಸಜ್ಜನನು ಬರೆದ ಒಂದು ಲೇಖನ ಪ್ರಕಟವಾಗಿತ್ತು. ಅದರಲ್ಲಿ ಹೀಗೆ ಬರೆದಿತ್ತು.. ಲೇಡಿ ಹೆಲ್ತ್ ಆಫೀಸರ ಘೋಷಣೆಯ ಸ್ವಾಧ್ಯಾಯ ಮಾಡಲಾಗುತ್ತದೆಯಾದರೆ ಅವರು ..... ದ ವಿದ್ಯಾಲಯದಲ್ಲಿ ವ್ಯಾಸಂಗಮಾಡುವ ವಿದ್ಯಾರ್ಥಿನಿಯರ ಸ್ವಾಸ್ಥ್ಯದ ಉಸ್ತುವಾರಿಯನ್ನು ಮಾಡಿ ಘೋಷಿಸಿದ್ದಾಳೇನೆಂದರೆ – ಹನ್ನೆರಡು ವರ್ಷಕ್ಕೆ ಮೀರಿದ ವಯಸ್ಸಿನ ಕುಮಾರಿ ಹುಡುಗಿಯರ ಪೈಕಿ ಶೇಕಡ ಸುಮಾರು ೯೦ ಗರ್ಭವತಿಯರು ಮತ್ತು ಗರ್ಭಪಾತ ಮಾಡಿಸಿಕೊಂಡವರು ಕಂಡು ಬರುತ್ತಾರೆ. ನಿಷ್ಪಕ್ಷತೆಯಿಂದ ನೋಡಿದರೆ ಎಲ್ಲ ಕಡೆ ಇದೇ ಬೆಂಕಿ ಹತ್ತಿರುವುದು ಕಂಡುಬರುತ್ತದೆ; ಆದರೆ ತಂದೆ-ತಾಯಿಯರು ಮತ್ತು ದೇಶದ ಮುಖಂಡರು ಏನು ಯೋಚಿಸುತ್ತಿದ್ದಾರೆಂಬುದು ನಮ್ಮ ತಿಳುವಳಿಕೆಗೆ ನಿಲುಕದ ವಿಷಯವಾಗಿದೆ.

ಶೇಕಡ ೯೦ ಆದರೂ ಬಹುದೂರದ ಮಾತು, ಶೇಕಡ ೧೦ ಆದರೂ ಭಯಾನಕವೇ. ಈ ಸಂಖ್ಯೆಯು ಸತ್ಯವೆಂದು ನಂಬಲಾಗುವುದಿಲ್ಲ, ಮುದ್ರಣದಲ್ಲಿ ತಪ್ಪಾಗಿರಬಹುದು, ಆದರೆ ಇಂದು ಶಾಲಾ-ಕಾಲೇಜುಗಳಲ್ಲಿ ವ್ಯಾಸಂಗಮಾಡುವ

ಕುಮಾರಿ ಕನ್ಯೆಯರ ಚಾರಿತ್ರ್ಯವು ಕೆಡುವ ಸಂಭವ ಬಹಳ ಅಧಿಕವಾಗಿದೆ. ಇಂತಹ ಘಟನೆಗಳ ಸಂಖ್ಯೆ ದಿನೇದಿನೇ ಬಹುವೇಗದಿಂದ ಹೆಚ್ಚುತ್ತಿದೆ ಮತ್ತಿದರಿಂದಲೇ ಇಂದಿನ ಈ ಹುಡುಗಿಯರು ಸೀತೆ - ಸಾವಿತ್ರಿಯ ಹೆಸರೆತ್ತಿದರೂ ಸಿಡಿಗುಟ್ಟಲು ಪ್ರಾರಂಭಿಸತೊಡಗಿದ್ದಾರೆ.* ಹುಡುಗಿಯರದು ಇಂತಹ ಸ್ಥಿತಿಯಾಗಿರುವಾಗ ಸ್ವೇಚ್ಛಾಚಾರವನ್ನೇ ಆದರ್ಶವೆಂದು ಒಪ್ಪುವ ಶಿಕ್ಷಿತ ವಯಸ್ಕ ಸ್ತ್ರೀಯ ಸ್ಥಿತಿಯು ಏನಾಗಬಲ್ಲದು ಎಂಬುದನ್ನು ಯೋಚಿಸಿದರೇ ಹೃದಯವು ನಡುಗುತ್ತದೆ. ಪಾಶ್ಚಾತ್ಯ ದೇಶಗಳಲ್ಲಾದರೂ ಹೀಗಾಗುತ್ತದೆ, ಆದರಿಲ್ಲಿಯೂ ಸಹ ಈಗೀಗ ಹಾಗಾಗತೊಡಗಿದೆ. ಇದೇ ನಮ್ಮ ಉನ್ನತಿ, ಇದೇ ನಮ್ಮ ಜಾಗ್ರತಿ. ಆದ್ದರಿಂದ ಈ ವಿಷಯಕುರಿತು ಗಂಭೀರವಾಗಿ ವಿಚಾರಮಾಡಬೇಕು. ಪ್ರಗತಿಯ ಹೆಸರಿನಲ್ಲಿ ಹೆಚ್ಚುತ್ತಿರುವ ಈ ಪತನದ ಪ್ರವಾಹವನ್ನು ತಡೆಯುವ ಪ್ರಯತ್ನ ಮಾಡಬೇಕು.



* ಕೆಲವು ವರ್ಷಗಳ ಹಿಂದೆ ಹಿಂದುಸ್ತಾನ್ ಟೈಮ್ಸ್‌ದ ಪ್ರತಿನಿಧಿಯು ಸಿಮ್ಲಾದ ಒಂದು ಸಭ್ಯ ಸಮಾಜದ ವರ್ಣನೆ ಮಾಡುತ್ತ ಹೀಗೆ ಬರೆದಿದ್ದಾನೆ - ಒಬ್ಬ ಶ್ರೀಮತಿಯು ಪ್ರಾಚೀನ ಸ್ತ್ರೀಯರನ್ನು ಚೆನ್ನಾಗಿ ಪರಿಹಾಸ್ಯ ಮಾಡಿದಳು ಮತ್ತು ಇನ್ನೊಬ್ಬಳಾದರೋ ಸೀತಾ-ಸಾವಿತ್ರಿಯನ್ನು ದಫನ ಮಾಡಿಬಿಡಿ. ಅವರು ನಮಗೆ ಯಾವ ಬಗೆಯ ಉಪಕಾರ ಮಾಡಿದ್ದಾರೆ? ಎಂದು ಅವಳು ಹೇಳಿದಳು.

Site could have done better than meekly allow her husband to persist in his foolish decision to go to the forest.... And I think Savitri could have better employed her time and energy than running after Yama to fetch her husband's soul.

ರಾಮನು ವನಕ್ಕೆ ತೆರಳುವ ಮೂರ್ಖತಾಪೂರ್ಣ ನಿಶ್ಚಯವನ್ನು ಮಾಡಿದಾಗ ಸೀತೆಯು ಅದನ್ನು ಪ್ರತಿಭಟಿಸಬೇಕಾಗಿತ್ತು... ಮತ್ತು ನನ್ನ ತಿಳುವಳಿಕೆಯಂತೆ ಸಾವಿತ್ರಿಯೂ ಸಹ ಪತಿಯನ್ನು ಪುನರ್ಜೀವಿತಗೊಳಿಸುವುದಕ್ಕಾಗಿ ಯಮನ ಹಿಂದೆ ಓಡುವುದನ್ನು ಬಿಟ್ಟು ತನ್ನ ಸಮಯ ಮತ್ತು ಶಕ್ತಿಯನ್ನು ಯಾವುದಾದರೂ ಒಳ್ಳೆಯ ಕಾರ್ಯದಲ್ಲಿ ತೊಡಗಿಸಬಹುದಾಗಿತ್ತು. ಇಷ್ಟೇ ಅಲ್ಲ, ಅವರು ಇದನ್ನು ಹೇಳಿದರು- ನಿಸ್ಸಂದೇಹವಾಗಿ ಈ ಕಥೆಗಳು ಸ್ತ್ರೀಯರ ಮನಸ್ಸಿನಲ್ಲಿ ಪತಿಯನ್ನುಳಿದು ಅವರಿಗೆ ಯಾವ ಸ್ವತಂತ್ರವಾದ ಅಸ್ತಿತ್ವವೂ ಇಲ್ಲವೆಂಬ ವಿಚಾರವನ್ನು ಸ್ಥಿರವಾಗಿ ಬೇರೂರಿಸುವುದಕ್ಕಾಗಿ ಕಟ್ಟಿದ ಕಥೆಗಳಾಗಿವೆ ಮತ್ತು ನಾವುಗಳು ಇದರ ವಿರುದ್ಧ ಹೋರಾಡಬೇಕು. ಆದ್ದರಿಂದ ಸೀತಾ ಮತ್ತು ಸಾವಿತ್ರಿಯಂತಹ ಮೂರ್ಖರುಗಳೊಡನೆ ನಮ್ಮನ್ನು ಪದೇ-ಪದೇ ಎಳೆದಾಡುತ್ತಿದ್ದಾರೆಯೋ, ದೇಶದ ಸರ್ವೋತ್ತಮ ಹಿತಕ್ಕಾಗಿ ಬೇಗನೆ ನಾವು ಅದರಿಂದ ಮುಕ್ತರಾಗಬೇಕೆಂಬುದಕ್ಕೆ ನನ್ನ ಸಮ್ಮತಿಯಿದೆ ಮತ್ತು ಇದು ಏತಕ್ಕೋಸ್ಕರ? ಪತಿಯ ಪೂಜೆಯನ್ನು ನಾವು ಎಂದಿಗೂ ಸಹಿಸೆವು. ನಾವು ಪತಿ ಪರಮಾತ್ಮನನ್ನು ಇಚ್ಛಿಸುವುದೂ ಇಲ್ಲ, ಪತ್ನೀ ದೇವಿಯರನ್ನು ಇಚ್ಛಿಸುವುದೂ ಇಲ್ಲ ಎಂದು ಅವರು ಹೇಳುತ್ತಾರೆ.

# ೨೦. ಸಂತಾನ ನಿರೋಧ

ವರ್ತಮಾನ ಕಾಲದಲ್ಲಿ ಅನೇಕ ಕಾರಣಗಳಿಂದಾಗಿ ಸಂತಾನನಿರೋಧದ ಪ್ರಶ್ನೆಯು ಕೂಡ ಉದ್ಭವಿಸಿದೆ ಮತ್ತು ಕೆಲವು ದೃಷ್ಟಿಯಿಂದ ಅದು ಅವಶ್ಯಕವೆಂದೂ ತಿಳಿದು ಬರುತ್ತದೆ. ಭಾರತದಂತಹ ಬಡದೇಶದಲ್ಲಿ ಈ ಮಹಾನ್ ತುಟ್ಟಿಯ ಯುಗದಲ್ಲಿ ಹೆಚ್ಚು ಸಂತಾನವು ತಂದೆ-ತಾಯಿಯರ ಬಹಳ ಸಂತಾಪಕ್ಕೆ ಕಾರಣವಾಗುತ್ತದೆ. ಅದನ್ನು ಸೀಮಿತಗೊಳಿಸುವುದು ನಿಜವಾಗಿ ಲಾಭಪ್ರದವೆಂದು ಒಪ್ಪಬಹುದು. ಆದರೆ ಏನು ಮಾಡುವುದು; ಇದಾದರೋ ವಿಧಿಯ ವಿಧಾನವಾಗಿದೆ. ಪೂರ್ವಕರ್ಮದ ಫಲವು ಫಲಿಸದೆ ಬಿಡುವುದಿಲ್ಲವಾದ್ದರಿಂದ ಅದು ಸಹಜವಾಗಿ ನಿವಾರಣೆಯಾಗುವುದಲ್ಲ. ಯಾವ ಜೀವವು ಎಲ್ಲಿ ಜನಿಸಬೇಕೆಂದಿದೆಯೋ ಅಲ್ಲಿ ಅದರ ಜನ್ಮವಾಗಿಯೇ ತೀರುವುದು. ಇದು ಸಿದ್ಧಾಂತವಾಗಿದೆ; ಆದರೆ ಇದನ್ನು ಯಾರೂ ಒಪ್ಪದಿರುವುದಾದರೂ ಕೂಡ ಸಂತತಿನಿರೋಧದ ಎಲ್ಲಕ್ಕಿಂತ ಶ್ರೇಷ್ಠವಾದ ಏಕಮಾತ್ರ ಉಪಾಯ ಇಂದ್ರಿಯ ಸಂಯಮ. ಸಂತತಿನಿರೋಧದ ಆವಶ್ಯಕತೆ ಮತ್ತು ಸಾಧನವನ್ನು ತಿಳಿಸುವ ಮಿಸ್ ಸೇಂಗರ್ ಅಂತಹ ವಿದೇಶಿ ರಮಣಿಯ ಸದ್ಭಾವಗಳನ್ನು ಅನಾದರಿಸದೆ ಏನು ಹೇಳಬೇಕಾಗುತ್ತದೆಯೆಂದರೆ- ಅವರು ತಿಳಿಸಿರುವ ಸಾಧನವು ಭಾರತೀಯ ಸಂಸ್ಕೃತಿಗನುಸಾರವಾಗಿ ನೀತಿ, ಸದಾಚಾರ ಮತ್ತು ಧರ್ಮ, ಈ ಎಲ್ಲ ದೃಷ್ಟಿಗಳಿಂದ ಹಾನಿಕರವಾದುದು ಮಾತ್ರವಲ್ಲ ಪಾಪಪೂರ್ಣವೂ ಆಗಿದೆ. ಈ ಪ್ರಕಾರದ ಸಂತತಿ ನಿರೋಧದ ಪ್ರಣಾಲಿಯಲ್ಲಿ ವ್ಯಭಿಚಾರದ ವೃದ್ಧಿ ಮತ್ತು ಕಾಮವಾಸನೆಯ ನಿಷ್ಕಂಟಕ ಚರಿತಾರ್ಥದ ಸಂಭವವೇ ಪ್ರತ್ಯಕ್ಷರೂಪದಿಂದ ಅಡಗಿದೆ. ಮಹಾತ್ಮಗಾಂಧಿಯವರು ಒಮ್ಮೆ ಲೇಖನದಲ್ಲಿ ಬರೆದಿದ್ದರು- ಈ ಕೃತ್ರಿಮ ಸಾಧನಗಳಿಂದ ಎಂತೆಂತಹ ಕೆಟ್ಟಪರಿಣಾಮಗಳು ಉಂಟಾಗಿವೆಯೆಂದರೆ ಜನರಿಗೆ ಅವುಗಳ ಪರಿಚಯ ಬಹು ಕಡಿಮೆ. ಶಾಲಾ ಕಾಲೇಜುಗಳ ಹುಡುಗ-ಹುಡುಗಿಯರ ಗುಪ್ತ ವ್ಯಭಿಚಾರವು ಯಾವ ಬಿರುಗಾಳಿಯನ್ನೆಬ್ಬಿಸಿದೆಯೆಂಬುದನ್ನು ನಾನು ಬಲ್ಲೆ. ಶಾಲಾ-ಕಾಲೇಜುಗಳಲ್ಲಿ ತಮ್ಮ ವ್ಯಾಸಂಗದ ಜೊತೆಗೆ ಕೃತ್ರಿಮ ಸಂತಾನ-ನಿಗ್ರಹ ಸಾಹಿತ್ಯ ಮತ್ತು ಮಾಸಿಕ ಪತ್ರಿಕೆಯನ್ನು ಹೆಚ್ಚು ಆಸಕ್ತಿಯಿಂದ ಓದುತ್ತಿರುತ್ತಾರಲ್ಲದೆ ತಮ್ಮ ಬಳಿ ಕೃತ್ರಿಮ ಸಾಧನಗಳನ್ನಿಟ್ಟುಕೊಂಡಿರುವ ಯುವತಿ ಹುಡುಗಿಯರೂ ಇದ್ದಾರೆಂಬುದನ್ನು ಬಲ್ಲೆ. ಈ ಸಾಧನಗಳನ್ನು ವಿವಾಹಿತ ಸ್ತ್ರೀಯರಿಗೆ ಮಾತ್ರ ಸೀಮಿತವಾಗಿಡುವುದು ಅಸಂಭವವಾಗಿದೆ. ವಿವಾಹದ ಪವಿತ್ರತೆಯು ಅದರ ಸ್ವಾಭಾವಿಕವಾದ ಪರಿಣಾಮವಾದ ಸಂತಾನೋತ್ಪತ್ತಿಯನ್ನು ಬಿಟ್ಟು ಕೇವಲ ತನ್ನ ಪಾಶವಿಕ ವಿಷಯ-ವಾಸನೆಯ

ಪೂರ್ತಿಯನ್ನೇ ಅದರ ಎಲ್ಲಕ್ಕಿಂತ ಹೆಚ್ಚಿನ ಉಪಯೋಗವೆಂದು ತಿಳಿದಾಗ ವಿವಾಹದ ಪವಿತ್ರತೆಯು ಲೋಪವಾಗಿ ಹೋಗುತ್ತದೆ.

ಇದರಿಂದ, ಮನುಷ್ಯನ ಹೃದಯದಲ್ಲಿ ಕೃತ್ರಿಮ ಸಂತತಿ ನಿಗ್ರಹದ ಈ ಆಂದೋಲನದಿಂದ ಪವಿತ್ರತೆಯ ಸ್ಥಾನದಲ್ಲಿ ಯಾವ ರೀತಿಯ ತಿರಸ್ಕೃತ ಪಾಶವಿಕ ಕಾಮದ ಆಧಿಪತ್ಯವಾಗುತ್ತಿದೆ ಮತ್ತು ಯಾವ ಪ್ರಕಾರ ನಮ್ಮ ಅಪರಿಪಕ್ವಮತಿಯ ಬಾಲಕ-ಬಾಲಕಿಯರು ಇದಕ್ಕೆ ಬಲಿಯಾಗಿ ತಮ್ಮ ಸರ್ವನಾಶ ಮಾಡಿಕೊಳ್ಳುತ್ತಿದ್ದಾರೆಂಬುದು ಸಿದ್ಧವಾಗುತ್ತದೆ.

ಸಂತತಿ ನಿರೋಧಕ್ಕೆ ಸಂಯಮದ ಅಗತ್ಯವಿದೆ. ಒಂದು ಪ್ರಸವದ ನಂತರ ಇನ್ನೊಂದು ಪ್ರಸವದ ನಡುವೆ ಐದು ವರ್ಷದ ಸಮಯವಿದ್ದಲ್ಲಿ ಸಂತತಿ ನಿರೋಧ ತಾನೇತಾನಾಗಿ ಆಗುತ್ತದೆ.

□□

## ೨೧. ಹಿಂದೂ ವಿವಾಹದ ವಿಶೇಷತೆ

ಆರ್ಯ ಸಂಸ್ಕೃತಿಯಲ್ಲಿ ವಿವಾಹವು ಒಂದು ಪವಿತ್ರ ಸಂಸ್ಕಾರವಾಗಿದೆ. ನರ-ನಾರಿಯರ ಬಲಯುತವಾದ ಇಂದ್ರಿಯಲಾಲಸೆಯನ್ನು ಸಂಯಮಿಸಿ, ಪ್ರವೃತ್ತಿಯಲ್ಲಿಯೇ ನಿವೃತ್ತಿಯ ಭಾವವನ್ನಿಟ್ಟು ಜೀವನವನ್ನು ಭಗವಂತನ ಕಡೆಗೆ ತಿರುಗಿಸುವುದಕ್ಕಾಗಿ ಈ ಸಂಸ್ಕಾರವಿದೆ. ಇತರೆ ಧರ್ಮಗಳಲ್ಲಿ ವಿವಾಹವು ಒಂದು ರೀತಿಯ ವ್ಯಾಪಾರ-ನಿಯಮಾವಳಿಯಾಗಿದೆ. ಆದ್ದರಿಂದ ಅದಕ್ಕೆ ಕಾನೂನಿನ ರಿಜಿಸ್ಟ್ರೇಷನ್ ಅವಶ್ಯಕವಾಗುತ್ತದೆ. ಯಾವುದಾದರೂ ವ್ಯಾಪಾರದಲ್ಲಿ ಇಬ್ಬರು ಹಿಸ್ಸೇದಾರರಲ್ಲಿ ವೈಮನಸ್ಯವುಂಟಾದಲ್ಲಿ ಯಾವಾಗಲೆಂದರಾವಾಗ ಬೇರೆಯಾಗಬಹುದು ಅದರಂತೆ ಆ ವಿವಾಹದ ಷರತ್ತು ಮುರಿದಲ್ಲಿ ಯಾವಾಗರಂದಾವಾಗ ವಿವಾಹ ಸಂಬಂಧವು ಮುರಿದು ಬೀಳಬಲ್ಲದು. ಆದರೆ ಹಿಂದೂ ವಿವಾಹವು ಹೀಗಾಗಿರದೇ ಧಾರ್ಮಿಕ ಕೃತ್ಯವಾಗಿದೆ, ಆಧ್ಯಾತ್ಮಿಕಸಾಧನವಾಗಿದೆ. ಅದರಲ್ಲಿ ರಿಜಿಸ್ಟ್ರೇಷನ್‌ನ ಅಗತ್ಯವಾಗಲಿ ಮತ್ತದು ಮುರಿದು ಬೀಳುವ ಪ್ರಶ್ನೆಯಾಗಲಿ ಇಲ್ಲ. ಅದರಲ್ಲಿ ಶಾಸ್ತ್ರಸಂಯಮಿತ ಉಪಭೋಗವಿದೆ, ಪಿತೃಋಣದ ಮುಕ್ತಿಗಾಗಿ ಸಚ್ಚರಿತ್ರ ಪುತ್ರನ ಉತ್ಪಾದನೆಯಿದೆ. ಯಜ್ಞ-ದಾನ-ಪುಣ್ಯಾದಿಗಳ ಮುಖಾಂತರ ಹಾಗೂ ಪಿತೃತರ್ಪಣ-ಶ್ರಾದ್ಧಾದಿ ಸತ್ಕರ್ಮಗಳ ಮುಖಾಂತರ ಶುಭ-ಧರ್ಮದ ಸಂಗ್ರಹವಿದೆ. ಸಂಯಮಪೂರ್ಣ ಸಾಧನೆಯ ಮೂಲಕ ಭಗವತ್ಪ್ರಾಪ್ತಿಯ ಪರಮಲಾಭವನ್ನು ಪಡೆಯಬೇಕಾಗಿದೆ. ಆದ್ದರಿಂದ ಹಿಂದೂ ನರ-ನಾರಿಯರ ಈ ಪವಿತ್ರ ಸಂಬಂಧ

ಕೇವಲ ಜೀವನ ಪರ್ಯಂತ ಮಾತ್ರವಲ್ಲ, ಮೃತ್ಯುವಿನ ನಂತರವೂ ಇರುತ್ತದೆ. ನಮ್ಮ ವಿವಾಹದ ವೈದಿಕ ವಿಧಿಯೆಂತಹುದೆಂದರೆ ಅದರಿಂದ ಇಬ್ಬರು ಸೇರಿ ಒಬ್ಬರು ಇನ್ನೊಬ್ಬರ ಅರ್ಧಾಂಗವಾಗುತ್ತಾರೆ ಮತ್ತು ಇಬ್ಬರೂ ತ್ಯಾಗಪೂರ್ವಕ ಜೀವನವನ್ನು ಪ್ರೇಮಮಯವಾಗಿಸಿ ಪರಸ್ಪರ ಸುಖ ನೀಡುತ್ತಿರುತ್ತಾರೆ. ಇಬ್ಬರ ಸುಖವೂ ಸೇರಿಯೇ ಒಬ್ಬರ ಸುಖವಾಗುತ್ತದೆ. ನಾರಿಯು ಪತಿಯ ಅರ್ಧಾಂಗಿನೀ ಮತ್ತು ಮನೆಯ ಸಾಮ್ರಾಜ್ಞಿಯಾಗುತ್ತಾಳೆ. ಸದಾ ಇಬ್ಬರದೂ ಜೊತೆಯಿದೆ-ಇಬ್ಬರದೂ ನಿಃಸಂಕೋಚವಾದ ವ್ಯವಹಾರವು ಮಾಲೀಕ ಮತ್ತು ಗುಲಾಮರ ವ್ಯವಹಾರದಂತಲ್ಲ, ಅದು ಅಭಿನ್ನಾತ್ಮ ವ್ಯವಹಾರದಂತೆ ಇದೆ. ಎರಡು ದೇಹಗಳು ಒಂದು ಆತ್ಮವಿದ್ದಂತೆ. ಆಚರಣೆಯಲ್ಲಿ ಒಮ್ಮೆ ಸಖ್ಯಭಾವ ಒಮ್ಮೆ ಸ್ವಾಮಿ-ಸೇವಕಭಾವ, ಇನ್ನೊಮ್ಮೆ ಪ್ರಿಯೆ-ಪ್ರಿಯತಮ ಭಾವ, ಇನ್ನ್ಯಾವಾಗಲೋ ಮಾತೆ-ಪುತ್ರನಂತಹ ಭಾವವೂ ಇದೆ. ಆದರೆ ಸರ್ವತ್ರ ಕೇವಲ ಏಕಾತ್ಮಭಾವವಿದೆ. ಈ ಏಕಾತ್ಮಭಾವವೇ ಹಿಂದೂ ವಿವಾಹದ ವಿಶೇಷತೆಯಾಗಿದೆ.

❑❑

## ೨೨. ವಿವಾಹ ವಿಚ್ಛೇದನ

ಈಗ ಕೆಲವು ಜನರು ಹಿಂದೂ-ನಾರಿಯರಿಗೆ ಕಾನೂನಿನ ಚೌಕಟ್ಟಿನಲ್ಲಿ ವಿವಾಹ-ವಿಚ್ಛೇದನದ ಅಧಿಕಾರವು ಪ್ರಾಪ್ತವಾಗಲೆಂದು ಪ್ರಯತ್ನಿಸುತ್ತಿದ್ದಾರೆ. ಯಾವ ಜನರು ಈ ಸಮಯದಲ್ಲಿ ಹಿಂದೂ-ವಿವಾಹ ಸಂಬಂಧವಾದ ಹೊಸ ಕಾನೂನನ್ನು ಮಾಡಲಿಚ್ಛಿಸುತ್ತಾರೋ ಅವರ ನಿಯತ್ತನ್ನು ಸಂದೇಹ ದೃಷ್ಟಿಯಿಂದ ನೋಡುವ ಕಾರಣವಿಲ್ಲ, ನನ್ನ ಊಹೆ ಮತ್ತು ತಿಳಿವಳಿಕೆಯಂತೆ ಆ ಸಜ್ಜನರು ನಿಜವಾಗಿಯೂ ಭಾರತೀಯ ಹಿಂದೂ ನಾರಿಯ ಶ್ರೇಯೋಭಿಲಾಷೆಯಿಂದಲೇ ಈ ಪ್ರಕಾರದ ಪ್ರಯತ್ನ ಮಾಡುತ್ತಿದ್ದಾರೆಂದು ಹೇಳಬಹುದಾಗಿದೆ. ಅವರ ಕಣ್ಣಮುಂದೆ ನಡೆದಿರುವ, ನಡೆಯುತ್ತಲಿರುವ ಪ್ರಸಂಗಗಳಿಂದ ಅವರ ಕಣ್ಣಮುಂದೆ ನಡೆದಿರುವ, ನಡೆಯುತ್ತಲಿರುವ ಪ್ರಸಂಗಗಳಿಂದ ಅವರ ಮನಸ್ಸಿನಲ್ಲಿ, ಕಾನೂನಿನಲ್ಲಿ ಪರಿವರ್ತನೆಯಾದುದಲ್ಲದೆ ಹಿಂದೂ-ಸ್ತ್ರೀಯರ ಮೇಲೆ ನಡೆಯುತ್ತಲಿರುವ ಸಾಮಾಜಿಕ ಅತ್ಯಾಚಾರಗಳ ಕೊನೆಯಾಗುವುದಿಲ್ಲವೆಂದು ಅವರ ಮನಸ್ಸಿಗೆ ನಾಟಿರಬೇಕು. ಇಂತಹ ವಿಚಾರವುಳ್ಳ ಸಜ್ಜನರ ಆದರ್ಶವಾದವೇನೋ ಉತ್ತಮವಾದುದೇ, ಆದರೆ ಅದರ ಪ್ರಯೋಗ ಈ ಯುಗದಲ್ಲಿ ಸಾಧ್ಯವಿಲ್ಲ; ಇದಲ್ಲದೆ, ಆದರ್ಶವಾದದ ಪ್ರಯೋಗ ಕೇವಲ ನಾರೀ-ಜಾತಿಗೆ

ಏಕಾಗಬೇಕು? ಪುರುಷರ ಪ್ರತಿ ಏಕೆ ಆಗಬಾರದು? ಪುರುಷನು ತಾನಿಚ್ಛಿಸಿದಂತೆ ಎಷ್ಟೇ ಅನಾಚಾರ, ಸ್ವೇಚ್ಛಾಚಾರ, ವ್ಯಭಿಚಾರ ಮತ್ತು ಅತ್ಯಾಚಾರ ಮಾಡಲಿ ಯಾವ ಅಡ್ಡಿಯೂ ಇಲ್ಲ, ಅವನು ಸರ್ವಥಾ ಸ್ವತಂತ್ರ, ಆದರೆ ಎಲ್ಲ ನಿಯಮಗಳು, ಎಲ್ಲ ಬಂಧನ ಕೇವಲ ಸ್ತ್ರೀಗೆ ಇರಲಿ! ಇದು ನಡೆಯಲಾರದು ಎಂದು ಹೇಳುತ್ತಾರೆ ಮತ್ತು ಅವರ ದೃಷ್ಟಿಕೋನದಿಂದ ಹೀಗೆ ಹೇಳುವುದು ಸರಿಯಾಗಿಯೇ ಇದೆ. ಉತ್ತಮ ಆದರ್ಶಗಳ ಕೂಗು ಹಾಕುವುದರಿಂದ ಪ್ರಯೋಜನವಿಲ್ಲ. ಈ ಪ್ರಕಾರವಾಗಿ ಘೋಷಣೆ ಮಾಡುವವರಲ್ಲಿ ಸ್ವಯಂ ಆದರ್ಶವನ್ನು ಪಾಲಿಸುವವರು ಎಷ್ಟು ಮಂದಿ ಇದ್ದಾರೆ, ಇದಲ್ಲದೆ ಈ ಯುಗದಲ್ಲಿ ಹಳೆಯ ಆದರ್ಶಗಳಿಗನುಗುಣವಾಗಿ ನಡೆಯುವುದೂ ಸಂಭವವಿಲ್ಲ. ಯುಗಧರ್ಮಕ್ಕನುಸಾರವಾಗಿ ಪರಿವರ್ತನೆ ಮಾಡಲೇಬೇಕಾಗುತ್ತದೆ. ಹಳೆಯ ಪರಂಪರೆಯನ್ನೇ ಅವಲಂಬಿಸುವುದು ಹುಚ್ಚುತನವಾಗಿದೆ ಇತ್ಯಾದಿ ಹೇಳುತ್ತಾರೆ.

ಪುರುಷರ ಮುಖಾಂತರ ಅಲ್ಲಲ್ಲಿ ತಮ್ಮ ಮನೆಯ ಸ್ತ್ರೀಯರ ಪ್ರತಿ ಹಾಗೂ ವಿಧವೆ ಸಹೋದರಿಯರ ಪ್ರತಿ ಆಗಿರುವ ಅಮಾನುಷ ಅತ್ಯಾಚಾರಗಳನ್ನು ನೋಡಿ-ಕೇಳಿ ಸಹೃದಯ ಪುರುಷರ ಮನಸ್ಸು ಪ್ರಾಚೀನ ಪದ್ಧತಿಯ ಬಗೆಗೆ ವಿದ್ರೋಹ ಮಾಡುತ್ತದೆ ಮತ್ತು ಅದು ಸ್ವಾಭಾವಿಕವಾದ ಉಪಾಯದಿಂದ ಇಂತಹ ಅತ್ಯಾಚಾರಗಳನ್ನು ತಡೆಯುವ ಪ್ರಯಾಸ ಮಾಡುತ್ತದೆ; ಆದರೆ ಈ ಪ್ರಕಾರವಾಗಿ ಸುಧಾರಣೆಯ ವಾಸ್ತವಿಕ ಇಚ್ಛೆಯುಂಟಾದರೂ, ಆ ಸಮಯದಲ್ಲಿ ಒಂದು ವೇಳೆ ಕೆಲವು ಜನರು ಸುಳ್ಳು ಹೇಳಿ ಅದರಿಂದ ಅನುಕೂಲವನ್ನು ಅನುಭವಿಸುತ್ತಾರಾದರೆ ಸತ್ಯವನ್ನು ಬಿಡಬೇಕು, ಸುಳ್ಳನ್ನು ಹೇಳುವುದೇ ಉಚಿತವಾದುದು ಎಂದು ಹೇಳಲಾಗುವುದಿಲ್ಲ ಎಂದು ಆ ಸಜ್ಜನರು ಯೋಚಿಸುವುದಿಲ್ಲ. ಇದಲ್ಲದೆ ಹಾಗೆ ಹೇಳದೆ ಸತ್ಯಭಾಷಣ ಮತ್ತು ಸತ್ಯಪಾಲನೆಯಲ್ಲಿ ಯುಗಪ್ರಭಾವದಿಂದ ಅಥವಾ ನಮ್ಮ ದೌರ್ಬಲ್ಯದಿಂದ ಅಡ್ಡಿ-ಆತಂಕಗಳು ಹುಟ್ಟಿಕೊಂಡಿವೆ ಮತ್ತವುಗಳನ್ನು ದೂರಮಾಡುವ ಪ್ರಯತ್ನ ಮಾಡಬೇಕೆಂದು ಹೇಳುವುದು ಯುಕ್ತವಾಗುತ್ತದೆ. ಇದೇ ವಾಸ್ತವಿಕ ಸುಧಾರಣೆಯಾಗಿದೆ. ಕೆಲವರು ಆದರ್ಶದ ರಕ್ಷಣೆಯನ್ನು ಮಾಡುವುದಿಲ್ಲ. ಅಂತಹ ಜನರಿಗಾಗಿ ಆದರ್ಶತ್ಯಾಗದ ಆದೇಶ ನೀಡದೆ ಆದರ್ಶವನ್ನು ಸರ್ವಥಾ ಬಿಡುವ ಪ್ರಯತ್ನ ಮಾಡದೆ, ಆದರ್ಶ ರಕ್ಷಣೆ ಮಾಡಲು ಅಸಮರ್ಥರಾದವರಿಗೆ ಅದರ ರಕ್ಷಣೆ ಮಾಡಬಲ್ಲ ಯೋಗ್ಯವಾದ ಮನೋವೃತ್ತಿ

ಮತ್ತು ಪರಿಸ್ಥಿತಿಯನ್ನು ಉಂಟುಮಾಡುವುದು - ಸಮಸ್ತ ಅಡ್ಡಿ ಆತಂಕಗಳನ್ನು ಅಳಿಸಿಹಾಕುವುದು - ಇದೇ ಕರ್ತವ್ಯವಾಗಿದೆ.

ಆದರೆ ಹೀಗೆ ಮಾಡದೆ, ಒಂದು ಕಣ್ಣು ಕುರುಡಾಗಿದೆ ಇನ್ನೊಂದನ್ನು ಕಿತ್ತುಹಾಕು- ಈ ನೀತಿಯನ್ನು ಅನುಸರಿಸಿ ಕೆಲವು ಜನರು ಆದರ್ಶದ ರಕ್ಷಣೆ ಮಾಡುತ್ತಿಲ್ಲ, ಆದ್ದರಿಂದ ಯಾರು ಮಾಡುತ್ತಿದ್ದಾರೆಯೋ ಅವರುಗಳಿಗೆ ಅದರ ಬಾಗಿಲನ್ನು ಮುಚ್ಚಿಬಿಡು. ಆದರ್ಶಗಳನ್ನೇ ಇಲ್ಲವಾಗಿಸಿಬಿಡು- ಹೀಗೆಂದು ಹೇಳುವುದು ವಸ್ತುತಃ ಪ್ರಮಾದವಾಗಿದೆ. ಹಾಗಿದ್ದರೂ ಹೀಗೆ ಹೇಳಲಾಗುತ್ತಿದೆ. ಯಾರ ನಿಯತ್ತಿನ ದೋಷವೂ ಇದಕ್ಕೆ ಕಾರಣವಲ್ಲ, ಆಧುನಿಕ ಸಭ್ಯತೆಯ ಪ್ರಭಾವ ಹಾಗೂ ವಿಜಾತೀಯ ಆದರ್ಶವನ್ನು ಅನುಸರಿಸಿ ನಿರ್ಮಿಸಿಕೊಂಡಿರುವ ಆಧುನಿಕ ಶಿಕ್ಷಣವೇ ಅದರ ಪ್ರಧಾನ ಕಾರಣವಾಗಿದೆ. ಇದರ ಪರಿಣಾಮ ರೂಪವಾಗಿ ನಮ್ಮದಾದ ನಮ್ಮ ಸಂಸ್ಕೃತಿಯ ಪ್ರತಿ, ನಮ್ಮ ಪ್ರಾಚೀನ ಸಂಪ್ರದಾಯಗಳ ಪ್ರತಿ ನಮ್ಮ ದೋಷ - ಬುದ್ಧಿ ದೃಢಮೂಲವಾಗಿ ಹೋಗಿದೆ. ಆದ್ದರಿಂದಲೇ ಹೃದಯಾಂತರಾಳದಿಂದ ಹಿಂದೂಸ್ಥಾನದ ಕಲ್ಯಾಣವನ್ನು ಬಯಸುವ ಉತ್ತಮ ಸ್ಥಿತಿಯಲ್ಲಿರುವ ಹಿರಿಯ ಪುರುಷರೂ ಸಹ ಈ ವಿಚಾರಧಾರೆಯ ಕಾರಣದಿಂದ ಮಾತುಮಾತಿಗೂ ವಿದೇಶಿ ಸಂಸ್ಕೃತಿಯ ಪ್ರಶಂಸೆ ಮಾಡುತ್ತಾರೆ. ಮತ್ತು ನಮ್ಮ ಸಭ್ಯತೆಯಲ್ಲಿ ನಮ್ಮ ಅಶ್ರದ್ಧೆ ಮತ್ತು ಅನಾದರ ಹಾಗೂ ಪಾಶ್ಚತ್ಯಸಭ್ಯತೆಯಲ್ಲಿ ನಮ್ಮ ಶ್ರದ್ಧೆ ಮತ್ತು ಗೌರವ ಎಷ್ಟು ಹೆಚ್ಚಿದೆಯೆಂದರೆ ನಾವು ಇಂದು ಅಲ್ಲಿಯ ದೋಷಗಳನ್ನು ಸಹ ಗುಣವೆಂದು ತಿಳಿದು ಗ್ರಹಿಸಲು ಆತುರರಾಗಿದ್ದೇವೆ. ನಮಗೆ ನಮ್ಮ ಮೇಲೆಯೇ ಎಷ್ಟು ಅಸಹ್ಯವುಂಟಾಗಿದೆಯೆಂದರೆ ನಮ್ಮ ಪ್ರತಿಯೊಂದು ಪ್ರಾಚೀನ ಪದ್ಧತಿಯಲ್ಲಿ ನಮಗೆ ತೀವ್ರವಾದ ದುರ್ಗಂಧ ಬರಲು ತೊಡಗಿದೆ. ನಾವು ಅದರಿಂದ ಸಿಟ್ಟಾಗುತ್ತಿದ್ದೇವೆ ಮತ್ತಿಲ್ಲಿ ನಮ್ಮ ಮಾನಸಿಕ ಗುಲಾಮತನ ಎಷ್ಟು ಹೆಚ್ಚಿದೆಯೆಂದರೆ ಯಾವುದನ್ನು ಇತರರು ತಮ್ಮ ದೋಷವೆಂದು ಒಪ್ಪಿ ಅದರಿಂದ ಮುಕ್ತರಾಗಲು ಚಡಪಡಿಸುತ್ತಿದ್ದಾರೋ, ಅದನ್ನೇ ನಾವು ಗುಣವೆಂದು ಒಪ್ಪಿ ಅದನ್ನು ಆಲಿಂಗಿಸಲು ಕಾತುರರಾಗಿದ್ದೇವೆ. ಇದರ ದೆಸೆಯಿಂದಲೇ ಇಂದಿನ ಪ್ರಗತಿಶೀಲ ಭಾರತೀಯ ತರುಣರು ಪರದೇಶಿ ಸಭ್ಯತೆಯ ನಿಂದೆ ಮಾಡುತ್ತಿದ್ದೂ ಪಾಶ್ಚಾತ್ಯ ಸಭ್ಯತೆಯ ಹಿಂದೆ ಓಡುವುದು, ಅದನ್ನೇ ಸ್ವೀಕರಿಸುವುದು ಮತ್ತು ಅದೇ

ಸಭ್ಯತೆಯಲ್ಲಿ ಶಿಕ್ಷಿತರಾಗಿ ಅವರಂತೆ ಆಗುವುದು, ಅದೇ ಸಭ್ಯತೆಯನ್ನು ಗೌರವಿಸುವುದು ಮತ್ತು ವಿಕಾಸದ ಹೆಸರಿನಲ್ಲಿ ತಮ್ಮನ್ನು ಮಹಾನ್ ವಿನಾಶಕಾರಿಯಾದ ಬೆಂಕಿಯಲ್ಲಿ ಹಾಕಿಕೊಳ್ಳುತ್ತಿದ್ದಾರೆ.

ಪಾಶ್ಚಾತ್ಯ ಜಗತ್ತಿನ ಮನೀಷಿಗಳು ಸಮಾಜದ ಅಧಃಪತನವಾಗುತ್ತಿರುವುದನ್ನು ನೋಡಿ ಯಾವ ದೋಷಗಳನ್ನು ಸಮಾಜದಿಂದ ತೆಗೆದುಹಾಕಲು ಇಚ್ಛಿಸುತ್ತಾರೆಯೋ, ನಮ್ಮ ಶಿಕ್ಷಿತ ಪ್ರತಿಭಾಶಾಲಿಗಳಾದ ಭಾರತೀಯರು ಅದನ್ನೇ ಗ್ರಹಿಸಲು ವ್ಯಾಕುಲರಾಗಿದ್ದಾರೆ. ಕೆಲವು ದಿನಗಳ ಹಿಂದೆ ಈಸಾಯಿ ಜಗತ್ತಿನ ಧರ್ಮಾಚಾರ್ಯನಾದ ರೋಮ್ ದೇಶದ ಪೋಪ್ ಮಹಾಶಯನು ಹೇಳಿದ್ದೇನೆಂದರೆ - ಯುರೋಪಿನಲ್ಲಿ ವಿವಾಹ-ವಿಚ್ಛೇದನ ಸಂಖ್ಯೆ ವೇಗವಾಗಿ ಹೆಚ್ಚುತ್ತಿದೆ. ವಿದ್ಯಾರ್ಥಿಗಳಲ್ಲಿ ಈಶ್ವರ-ವಿಶ್ವಾಸವೆಂಬುದು ಇಳಿಮುಖವಾಗುತ್ತಿದೆ ಮತ್ತು ಅಶ್ಲೀಲ ನಾಟಕಗಳ ಪ್ರಚಾರ ಹೆಚ್ಚುತ್ತಿದೆ. ಇದು ಬಹು ಕೆಟ್ಟ ವಿಷಯವಾಗಿದೆ. ಸುಧಾರಣಾವಾದಿಗಳ ನಗಾರಿ-ಖಾನೆಯ ಮುಂದೆ ಬಡ ಪೋಪನ ಈ ಅರಗಿಣಿಯ ಕ್ಷೀಣಧ್ವನಿ ಯಾರ ಕಿವಿಯಲ್ಲಿ ಬಿದ್ದೀತು?

ವಿವಾಹ ವಿಚ್ಛೇದನದ ಆಲೋಚನೆ ಮಾಡುತ್ತ ಆಂಗ್ಲ ವಿದುಷಿ ಮಹಿಳೆ ಶ್ರೀಮತಿ ಎನ್. ಮ್ಯೆಕಿಟ್, ಎಂ. ಎ. ಬರೆದಿದ್ದಾರೆ-

ಎಲ್ಲ ಯುಗಗಳಲ್ಲಿ ನರ-ನಾರಿಯರ ಜೀವನಕ್ಕೆ ಎರಡು ಪ್ರಧಾನ ಅವಲಂಬನಗಳಿವೆ, ಒಂದು ವಿವಾಹ ಮತ್ತೊಂದು ಮನೆ. ಈ ಯುಗದಲ್ಲಿ ಈ ಎರಡೂ ಅವಲಂಬನಗಳು ವಿವಾಹ-ವಿಚ್ಛೇನದನವೆಂಬ ಅಮಂಗಲಕಾರಿಯಾದ ಪ್ರೇತದ ಪ್ರಭಾವದಿಂದ ತಮಸಾಚ್ಛನ್ನವಾಗಿಹೋಗಿವೆ. ಈ ಪ್ರೇತವು ನರನಾರಿಯರ ಹೃದಯದಲ್ಲಿ ಭಯವನ್ನು ತುಂಬಿದೆ. ವಿವಾಹ-ವಿಚ್ಛೇದನದಿಂದ ಸಮಾಜದ ಸರ್ವನಾಶವಾಗುತ್ತದೆಂದೂ, ಮತ್ತಿದು ಸಮಾಜ ಹಿತಕ್ಕೆ ಸರ್ವಥಾ ಪ್ರತಿಕೂಲವೆಂಬ ಅಂಶವನ್ನು ಅನೇಕ ಯುಕ್ತಿಗಳಿಂದ ಪ್ರಮಾಣೀಕರಿಸಲಾಗುತ್ತದೆ. ಇದರಲ್ಲಿ ಒಂದು ಯುಕ್ತಿ ಏನೆಂದರೆ - ವಿವಾಹ ವಿಚ್ಛೇದನದಿಂದ ಮನೆ ಛಿದ್ರವಾಗುತ್ತದೆ ಮತ್ತು ಪರಿವಾರ ನಾಶವಾಗುತ್ತದೆ. ವಿವಾಹದ ಪ್ರಧಾನ ಉದ್ದೇಶ ಸಂತಾನೋತ್ಪಾದನೆ. ಈ ಉದ್ದೇಶವನ್ನು ಪೂರ್ತಿಗೊಳಿಸಲು ಪಾರಿವಾರಿಕ ಬಂಧನವು ಅವಶ್ಯಕವಾಗಿದೆ. ಪತಿ-ಪತ್ನಿಯರು ಮರಣ ಕಾಲದವರೆಗೆ ಪರಸ್ಪರ ಪೂರ್ಣವಿಶ್ವಾಸವಿಟ್ಟು ದಾಂಪತ್ಯ-ಬಂಧನವನ್ನು ಸುದೃಢವಾಗಿಸದಿದ್ದರೆ ಮೇಲೆ ಹೇಳಿದ ಉದ್ದೇಶವು ಸಿದ್ಧಿಸಲಾರದು.

ಇಂದು ಸ್ವತಂತ್ರ ಪ್ರೇಮದ *(Free Love)* ಹೊಸರೀತಿ ನಡೆದಿದೆ. ಇದಕ್ಕನುಸಾರವಾಗಿ ಆಧುನಿಕ ನರ-ನಾರಿಯರು ವಿವಾಹ ಬಂಧನವನ್ನು ಶಿಥಿಲವಾಗಿಸಿ ಪತ್ರ-ಪ್ರೇಮದ ಸ್ವಾಭಾವಿಕ ಅಧಿಕಾರದ ನಿರ್ಬಂಧವನ್ನು ಸ್ಥಾಪನೆಮಾಡಲು ಬಯಸುತ್ತಾರೆ. ಈ ಹೊಸವ್ಯವಸ್ಥೆಯ ಪರಿಣಾಮವಾಗಿ ಮನುಷ್ಯನ ವಂಶವೃದ್ಧಿಯು ಆಗಬಹುದು. ಆದರೆ ಸರ್ವಥಾ ಸ್ವತಂತ್ರ ಪದ್ಧತಿಯಿಂದ ನಡೆಯುವುದು. ಪಿತೃತ್ವ-ಮಾತೃತ್ವದ ಧಾರಣೆಯು ಲುಪ್ತವಾಗುವುದು ಮತ್ತು ಮಕ್ಕಳು ಕೀಟ-ಪತಂಗಗಳಂತೆ ಸಾಕಲ್ಪಡುತ್ತಾರೆ. ಎಲ್ಲರೂ ಸಮಾನರಾಗುತ್ತಾರೆ. ಅವರಲ್ಲಿ ವ್ಯಕ್ತಿತ್ವವಾಗಲೀ ಯಾವುದೇ ಉದ್ದೇಶದ ವಿಶಿಷ್ಟತೆಯೇ ಆಗಲಿ ಇರುವುದಿಲ್ಲ.

ಡಾಕ್ಟರ್ ಡೇನೇವಲ್ ಮಹಾಶಯನು ಬರೆಯುತ್ತಾನೆ - ನಮ್ಮ ತಿಳುವಳಿಕೆಯಂತೆ ವಿವಾಹದ ತಾತ್ಪರ್ಯ ದಾಯಿತ್ವದ ನಿರ್ವಹಣೆ ಅಥವಾ ಬಂಧನ. ಇದರಲ್ಲಿ ದಾಯಿತ್ವ ಶೂನ್ಯತೆ ಅಥವಾ ನಿರ್ಬಂಧದ ಸ್ವತಂತ್ರತೆಯ ಯಾವ ಸಂಕೇತವು ಸಿಗುವುದಿಲ್ಲ. ಮುಚ್ಚಿದ ಮನೆ ನಿರಾಪದ (ಸುರಕ್ಷಿತ) ಮತ್ತು ಶಾಂತಿಮಯವಾಗಿರುತ್ತದೆ. ಬಾಗಿಲು ತೆರೆದಿದ್ದರೆ ಅದರಲ್ಲಿ ಕಳ್ಳ-ಕಾಕರು ಬರಬಲ್ಲರು ಮತ್ತು ವಿಧವಿಧವಾದ ಉತ್ಪಾತ, ಉಪದ್ರವಗಳು ಬಂದು ಮನೆಯ ಶಾಂತಿ ಭಂಗಮಾಡಬಲ್ಲವು. ಇದು ಬಂಧನದ ಸುಖ. ಯಾವ ಮನೆಯ ಬಾಗಿಲು ತೆರೆದಿದೆಯೋ, ಅದು ಮನೆಯಲ್ಲ, ಅದಾದರೋ ಧರ್ಮಶಾಲೆಯಾಗಿದೆ.

ವಿವಾಹದ ಜೊತೆಯಲ್ಲಿ ಒಂದು ವೇಳೆ ವಿವಾಹ-ವಿಚ್ಛೇದನದ ಬಾಗಿಲನ್ನು ತೆರೆದುಬಿಟ್ಟಲ್ಲಿ ಸ್ತ್ರೀ-ಪುರುಷರಿಬ್ಬರಲ್ಲಿ ಯಾವ ವೈಶಿಷ್ಟ್ಯವೂ ಇರುವುದಿಲ್ಲ. ನಂತರ ವಿವಾಹ ಮತ್ತು ವಿಚ್ಛೇದ ಹಾಗೂ ನಿತ್ಯ ಹೊಸ-ಹೊಸ ಜೋಡಿಯ ನಿರ್ಮಾಣ - ಈ ತಮಾಷೆ ನಡೆಯುತ್ತಿರುವುದು..... ಪಾಶ್ಚಾತ್ಯ ಸಮಾಜದಲ್ಲಿ ವಿವಾಹವು ಒಂದು ಪ್ರಕಾರದ ಶರತ್ತುನಾಮೆಯಾದರೂ ಅದರಲ್ಲಿ ಈ ಸಂಬಂಧ ಮೃತ್ಯುಕಾಲದವರೆಗೆ ಎಂಬ ಸ್ಪಷ್ಟ ನಿರ್ದೇಶವಿರುತ್ತದೆ. ಆರಂಭದಿಂದಲೇ ಪತಿ-ಪತ್ನಿಯರ ಮನಸ್ಸುಗಳಲ್ಲಿ -ಇಷ್ಟಪಟ್ಟಾಗ ಮಿಲನವು ಮುರಿದು ಬೀಳಬಲ್ಲದು ಎಂಬ ಧಾರಣೆ ಜಾಗೃತವಾಗಿರುತ್ತದೆಯಾದರೆ ದೇಹ-ಮನಸ್ಸುಗಳನ್ನು ಶುದ್ಧವಾಗಿರಿಸಿಕೊಳ್ಳುವುದು ಬಹು ಕಷ್ಟವಾಗುವುದು. ನಂತರ ಪ್ರೇಮ-ಸ್ನೇಹದ ಮೇರೆಯನ್ನು ಯಾರೂ ಒಪ್ಪುವುದಿಲ್ಲ ಮತ್ತೆ ಯಾರ ಮಗುವನ್ನು ಯಾರು ಸಾಕುವರು. ವಿವಾಹ ವಿಚ್ಛೇದನದ ವಿಷಯದ ಜೊತೆಯಲ್ಲಿಯೇ

ಪುನರ್ವಿವಾಹದ ವಿಷಯವೂ ಚಿತ್ತದಲ್ಲಿ ಬಂದೇ ಬರುತ್ತದೆ. ಎಷ್ಟೇ ಶಿಕ್ಷಿತನಾಗಿರಲಿ ಪುನರ್ವಿವಾಹದಿಂದೊದಗುವ ಯಾರಿಗಾದವರಿಗೆ ದೇಹ ಸಮರ್ಪಿಸಬಹುದೆಂಬ ಕಲ್ಪನೆಯ ಬಗೆಗೆ ಸುಸಂಸ್ಕೃತ ಮನಸ್ಸಿನಲ್ಲಿ ವಿದ್ರೋಹ ಉಂಟಾಗುವುದಿಲ್ಲವಾದರೆ ಮತ್ತೆ ಮನಸ್ಸಿನ ಸಂಸ್ಕೃತಿಯ ಗೌರವವಾದರೂ ಏನು. ಹೀಗಾದಾಗ ವಿವಾಹವು ಕಾನೂನು ಸಮ್ಮತವಾಗಿ ಉಪ ಪತ್ನಿಯನ್ನು ಇಟ್ಟುಕೊಳ್ಳುವುದೆಂದಾಗುವುದು.

ಪ್ರೇಮ ಮತ್ತು ಕಾಮದಲ್ಲಿ ದೊಡ್ಡ ಅಂತರವಿದೆ. ಪ್ರೇಮದಲ್ಲಿ ತ್ಯಾಗವಿದೆ, ಉತ್ಸರ್ಗವಿದೆ, ಬಲಿದಾನವಿದೆ, ಮನುಷ್ಯ ಜೀವನದ ಪೂರ್ಣ ಪರಿಣತಿ ಪ್ರೇಮದಿಂದಲೇ ಆಗುತ್ತದೆ. ಪ್ರೇಮವು ತ್ಯಾಗಸ್ವರೂಪ ಮತ್ತು ಉತ್ಸರ್ಗ ಪರಾಯಣವಾಗಿದೆ. ಕಾಮವಾದರೋ ವಿಷಯಲೋಲುಪವಾಗಿದೆ, ಭೋಗ ಪರಾಯಣವಾಗಿದೆ. ಎಲ್ಲಿ ಕೇವಲ ತನ್ನ ಇಂದ್ರಿಯ-ಸುಖದ ಇಚ್ಛೆಯಿದೆಯೋ, ಅದರ ಹೆಸರು ಪ್ರೇಮವಾಗಿರಲಿ ಆದರೆ ಅಲ್ಲಿ ಅದು ಕಾಮವೇ ಆಗಿದೆ. ವಸ್ತುತಃ ಅದರಲ್ಲಿ ಪ್ರೇಮಕ್ಕೆ ಸ್ಥಾನವಿಲ್ಲ. ಪಶುವಿನಲ್ಲಿ ಪ್ರೇಮವಿರುವುದಿಲ್ಲ. ಆದ್ದರಿಂದ ಅವುಗಳ ದಾಂಪತ್ಯವು ಕ್ಷಣಿಕ ಭೋಗವಿಲಾಸ ಪೂರ್ಣವಾಗುವುದರೊಡನೆ ಮುಗಿದು ಹೋಗುತ್ತದೆ. ಆದ್ದರಿಂದಲೇ ಕಾಮವನ್ನು ಪಾಶವಿಕವೃತ್ತಿ ಎಂದು ಹೇಳಲಾಗುತ್ತದೆ. ಮನುಷ್ಯನಲ್ಲಿ ಪ್ರೇಮವಿದೆ, ಆದಕಾರಣ ಅವನಲ್ಲಿ ಕ್ಷಣಿಕ ಲಾಲಸೆಯ ಪೂರ್ತಿಯಿಲ್ಲ. ಅದು ಸತ್ಯವಾಗಿದೆ, ಶಾಶ್ವತವಾಗಿದೆ. ವಿವಾಹವು ಉತ್ಸರ್ಗ ಮತ್ತು ಪ್ರೇಮದ ಮೂರ್ತಿಮತ್ತಾದ ಸ್ವರೂಪವಾಗಿದೆ. ಆದ್ದರಿಂದಲೇ ವಿವಾಹ ಬಂಧನವೂ ನಿತ್ಯವಾಗಿದೆ, ಅಚ್ಛೇದ್ಯವಾಗಿದೆ. ಎಲ್ಲಿ ವಿವಾಹ-ವಿಚ್ಛೇದದ ಮಾತಿದೆಯೋ ಅಲ್ಲಿ ಮನುಷ್ಯನ ಪಶುತ್ವದ ಸೂಚನೆಯಿದೆ. ವಿವಾಹದಲ್ಲಿ ವಿಚ್ಛೇದದ ಸಂಭವ ಉಂಟಾದಾಗ ಅಲ್ಲಿಯೇ, ಆಗಲೇ ನರ-ನಾರಿಯ ಪವಿತ್ರ ಮತ್ತು ಮಧುರ ಸಂಬಂಧ ಅತ್ಯಂತ ಕೀಳಾಗಿಹೋಗುತ್ತದೆ. ಮತ್ತೆ ಮನುಷ್ಯ ಮತ್ತು ಪಶುಗಳಲ್ಲಿ ಯಾವ ಭೇದವೂ ಇರುವುದಿಲ್ಲ. ವಿವಾಹ ವಿಚ್ಛೇದನ ಪರಂಪರೆಯನ್ನು ನಡೆಸುವುದು ಮಾನವತೆಯನ್ನು ಕೊಂದು ಅದನ್ನು ನಾಯಿಗಳ ರೂಪದಲ್ಲಿ ಪರಿಣತಗೊಳಿಸಿದಂತೆ.

ಹಿಂದೂ ವಿವಾಹವು ಇತರೆ ಜಾತಿಗಳಂತೆ ಯಾವ ಕರಾರು-ಪತ್ರ ಅಲ್ಲ; ಪವಿತ್ರ ಧರ್ಮಸಂಸ್ಕಾರವಾಗಿದೆ. ಇದು ಒಂದು ಮಹಾಯಜ್ಞ, ಸ್ವಾರ್ಥವು ಇದರ ಆಹುತಿ ಮತ್ತು ನೈಷ್ಕರ್ಮ್ಯಸಿದ್ಧಿ ಅಥವಾ ಮೋಕ್ಷ ಇದರ ಪರಮ ಧನವಾಗಿದೆ.

ಯಜ್ಞದ ಪವಿತ್ರಾಗ್ನಿಯಿಂದ ಇದರ ಆರಂಭವಾಗುತ್ತದೆ. ಆದರೆ ಸ್ಮಶಾನದ ಚಿತಾಗ್ನಿಯೂ ಕೂಡ ಈ ಬಂಧನವನ್ನು ಮುರಿಯಲಾರದು. ತ್ಯಾಗದ ಮುಖಾಂತರ ಪ್ರೇಮದ ಪವಿತ್ರತೆಯ ಸಂರಕ್ಷಣೆ ಮಾಡುವುದು ಮತ್ತು ಪ್ರೇಮವನ್ನು ಉತ್ತರೋತ್ತರ ಉಚ್ಚಸ್ಥಿತಿಗೆ ತೆಗೆದುಕೊಂಡು ಹೋಗುವುದು ವಿವಾಹದ ಮಹಾನ್ ಉದ್ದೇಶವಾಗಿದೆ. ಪ್ರೇಮ,ಪ್ರೀತಿ, ಸ್ನೇಹ, ಅನುರಾಗ, ಮೈತ್ರಿ, ಮುದಿತಾ, ಕರುಣೆ ಮೊದಲಾದ ಪವಿತ್ರ ಮತ್ತು ಮಧುರ ಭಾವ ಮನುಷ್ಯ ಜೀವನದ ಪರಮ ವಾಂಛನೀಯ ಸಂಪತ್ತಾಗಿದೆ. ಈ ಪರಮ ಸಂಪತ್ತಿನ ರಕ್ಷಣೆಯು ತ್ಯಾಗ, ಕ್ಷಮೆ, ಸಹನಶೀಲತೆ, ಧೈರ್ಯ ಮತ್ತು ಸೇವೆ ಮೊದಲಾದ ಸದ್ವೃತ್ತಿಗಳ ಮುಖಾಂತರ ಆಗುತ್ತದೆ ಮತ್ತು ಇವುಗಳಿಂದಲೇ ಈ ಭಾವಗಳ ವೃದ್ಧಿಯೂ ಆಗುತ್ತದೆ.

ಹಿಂದೂ ವಿವಾಹ ಸಂಸ್ಕಾರದಲ್ಲಿ ಪತಿ–ಪತ್ನಿಯರಲ್ಲಿ, ನಮ್ಮ ಸಂಬಂಧ ಸರ್ವಥಾ ಅವಿಚ್ಛಿನ್ನರಾಗಿರಲೆಂಬ ನಿಶ್ಚಿತವಾದ ಧೋರಣೆ ಇರುತ್ತದೆ. ಇದು ಜನ್ಮಜನ್ಮಾಂತರದಲ್ಲಿಯೂ ಮುರಿದುಬೀಳುವುದಿಲ್ಲ. ಇದೇ ಪ್ರಕಾರ ಪ್ರಾರ್ಥನೆ ಮತ್ತು ಬಯಕೆಯನ್ನು ಮಾಡಲಾಗುತ್ತದೆ. ಆದ್ದರಿಂದ ಯಾವಾಗಲಾದರೂ, ಯಾವುದಾದರೂ ಕಾರಣವಶದಿಂದ, ಒಂದು ವೇಳೆ ಯಾವುದಾದರೂ ಮಾತಿಗಾಗಿ ಪರಸ್ಪರ ಮತಭೇದ ಉಂಟಾದರೂ ಅಥವಾ ಪರಸ್ಪರ ಜಗಳವಾದರೂ ಬಹುಕಾಲದವರೆಗೆ ನಿಲ್ಲುವುದಿಲ್ಲ. ತ್ಯಾಗ, ಕ್ಷಮೆ, ಸಹಿಷ್ಣುತೆ, ಧೈರ್ಯ ಮೊದಲಾದ ವೃತ್ತಿಗಳು ಇಬ್ಬರ ಮನಸ್ಸನ್ನೂ ಶೀಘ್ರವಾಗಿ ಸುಧಾರಣೆ ಮಾಡಿ ಕಲಹವನ್ನು ಶಾಂತಗೊಳಿಸುತ್ತದೆಯಾದ್ದರಿಂದ ಪ್ರೇಮವು ಅಕ್ಷುಣ್ಣವಾಗಿರುತ್ತದೆ. ಪತಿ–ಪತ್ನಿಯಲ್ಲಿ ಪರಸ್ಪರ ಹೊಂದಿಕೊಂಡು ಹೋಗುವ ಇಚ್ಛೆಯಿರುವುದರಿಂದ ಜೀವನದಲ್ಲಿ ದುಃಖದ ದಿನಗಳು ಅಧಿಕ ಕಾಲದವರೆಗೆ ಸ್ಥಾಯಿಯಾಗಿರುವುದಿಲ್ಲ. ನಾವಿಬ್ಬರೂ ಜೀವನ ಪರ್ಯಂತ ಜೊತೆಗಾರರಾಗಿದ್ದೇವೆಂಬ ಧಾರಣೆ ಅತ್ಯಂತ ದೃಢವಾಗಿರುವ ಕಾರಣ ಪರಸ್ಪರ ವಿಶ್ವಾಸ ಮತ್ತು ಪ್ರೇಮ ಕೇಂದ್ರೀಭೂತವಾಗಿಬಿಡುತ್ತವೆ. ಯಾವುದೇ ಪ್ರಕಾರ, ಯಾವುದೇ ಕಾರಣಕ್ಕೆ ವಶರಾಗಿ ಸಾಮಾನ್ಯ ಉತ್ತೇಜನ, ಆವೇಶ, ಕ್ರೋಧ ಅಥವಾ ಅವಿಶ್ವಾಸವು ಉದಯಿಸಿದರೂ ಸಂಬಂಧವು ಮುರಿದುಬೀಳುವಂತಹ ಯಾವ ಕಾರ್ಯವೂ ಬಹುಶಃ ಆಗುವುದಿಲ್ಲ.

ಉತ್ತೇಜನೆ, ಆವೇಶ ಅಥವಾ ಕ್ರೋಧಾದಿಗಳ ಕಾರ್ಯ ಅದೇ ಸಮಯದಲ್ಲಿ ಆಗುವುದಿಲ್ಲವಾದರೆ, ನಡುವೆ ಸ್ವಲ್ಪ ಸಮಯದ ಅಂತರ

ದೊರೆತರೆ ಅವುಗಳ ಶಕ್ತಿ ಕ್ಷೀಣವಾಗಿ ಹೋಗುತ್ತದೆ ಮತ್ತು ಎಷ್ಟು ಹೆಚ್ಚು ಸಮಯ ಸಿಕ್ಕಿದರೆ ಅಷ್ಟೇ ಉತ್ತೇಜನಾದಿಗಳ ವೇಗ ಇಳಿದು ಹೋಗುತ್ತದೆ. ಸ್ವಲ್ಪ ಸಮಯಾನಂತರವಾದರೋ ಅವು ಸರ್ವಥಾ ನಷ್ಟವಾಗಿ ಹೋಗುತ್ತವೆ. ಆದರೆ ವಿಚ್ಛೇದದ ಬಾಗಿಲು ತೆರೆದಿದೆಯಾದರೆ ಆವೇಶವುಂಟಾದೊಡನೆ ಅದರ ಒತ್ತಡದಿಂದ ಪ್ರಜ್ಞೆಯು ಹೋಯಿತೆಂದರೆ ಅಲ್ಲಿಯೇ ಸಂಬಂಧ ಮುರಿಯಿತು. ವಿವಾಹ-ವಿಚ್ಛೇದ ಮಾಡಲಾಯಿತು. ಈ ಕಾರಣದಿಂದ ಅಮೇರಿಕಾದಂತಹ ದೇಶದಲ್ಲಿ ಪ್ರತಿವರ್ಷ ಸುಮಾರು ಏಳೆಂಟುಲಕ್ಷ ವಿವಾಹ-ವಿಚ್ಛೇದನಗಳಾಗುತ್ತಿವೆ ಮತ್ತು ಇವುಗಳ ಸಂಖ್ಯೆ ಉತ್ತರೋತ್ತರ ಹೆಚ್ಚುತ್ತಿದೆ. ರಷ್ಯದಲ್ಲಂತೂ ಇಂದು ವಿವಾಹ ನಾಳೆ ವಿಚ್ಛೇದನ-ಇದೇ ಆಟ ನಡೆಯುತ್ತಿದೆ. ನಮ್ಮ ಸಂಸ್ಕೃತಿಯಲ್ಲಿ ವಿವಾಹ ಬಂಧನದ ಕಾರಣ ಸ್ತ್ರೀ-ಪುರುಷರು ಪಾರಿವಾರಿಕ ಜೀವನದಲ್ಲಿ ಎಂತಹ ಬಂಧನಕ್ಕೊಳಗಾಗುತ್ತಾರೆಂದರೆ, ಸಾಮಯಿಕ ಉತ್ತೇಜನದಿಂದ ಬೇರೆಯಾಗುವ ಇಚ್ಛೆಯಾಗುತ್ತಾದರೂ ಕೂಡ ಹಾಗೆ ಸಹಜವಾಗಿ ಆಗಿ ಬಿಡುವುದಿಲ್ಲ. ಅದರಿಂದ ಪಾರಿವಾರಿಕ ಸಂಘಟನೆ ಮುರಿದು ಬೀಳುವುದಿಲ್ಲ.

ಇದರ ಜೊತೆಗೆ ವಿವಾಹವಾಗುತ್ತಲೆ ಪತಿ-ಪತ್ನಿಯರಿಬ್ಬರಿಗೂ ಇವಳು ನನ್ನ ಧರ್ಮಪತ್ನಿ ಮತ್ತಿವನು ನನ್ನ ಪತಿ ದೇವನಾಗಿದ್ದಾನೆ, ನಮ್ಮ ಈ ಸಂಬಂಧ ಪ್ರೇಮಮಯವಾದ ಪವಿತ್ರಸಂಬಂಧ ನಿತ್ಯ ಮತ್ತು ಅವಿಚ್ಛೇದಿತವಾಗಿದೆ ಎಂಬ ಭಾವನೆಯು ಜಾಗೃತವಾಗಿ ಇಬ್ಬರ ಮನಸ್ಸುಗಳು ಕೇಂದ್ರೀಭೂತವಾಗುತ್ತವೆ. ಈ ಕಾರಣದಿಂದ ಅವರ ಮನಸ್ಸುಗಳಿಗೆ ಬೇರೆಲ್ಲಿಯೂ ಹೋಗಬೇಕಾಗಿ ಬರುವ ಸಂಭವವಿರುವುದಿಲ್ಲ. ಯಾವುದೇ ಎಷ್ಟೇ ಸುಂದರ, ಆಕರ್ಷಕ ಮತ್ತು ಗುಣವಂತರಾದ ಸ್ತ್ರೀ-ಪುರುಷರೇ ಆಗಿರಲಿ ಅವರಿಂದ ನಮಗೇನು ಕೆಲಸ ಎಂಬ ಭಾವನೆ ದೃಢವಾಗುತ್ತದೆ. ಇಂತಹ ಸ್ಥಿತಿಯಲ್ಲಿ ನರ-ನಾರಿಯರ ಅಬಾಧ ಮಿಲನದ ಮಾತಂತೂ ದೂರ ಉಳಿಯಿತು. ಪರಸ್ತ್ರೀ ಅಥವಾ ಪರಪುರುಷನ ಚಿಂತನೆಯು, ಕಾಮಲೋಲುಪ ದೃಷ್ಟಿಯಿಂದ ಒಮ್ಮೆ ನೋಡಿದರೂ ಮಹಾನ್ ಪಾಪವೆನಿಸುತ್ತದೆ. ಪ್ರಾಯಶಃ ಒಳ್ಳೆಯ ಸ್ತ್ರೀ-ಪುರುಷರು ಈ ಪಾಪದಿಂದ ಉಳಿಯಲು ಪ್ರಯತ್ನ ಮಾಡುತ್ತಲೂ ಇರುತ್ತಾರೆ. ಪಾಶ್ಚಾತ್ಯ ದೇಶಗಳಲ್ಲಿ ಹೀಗಿಲ್ಲ. ಅಲ್ಲಿ ವ್ಯಭಿಚಾರವೆನಿಸುವುದಿಲ್ಲ. ಆದ್ದರಿಂದಲೇ ಈ ಸ್ವಾಧೀನತೆಯನ್ನು ಉಪಭೋಗಿಸಲು ಅವರು ಕಾತುರರಾಗಿರುತ್ತಾರೆ. ಇದರ ಹೆಸರೇ ಅವರ ದೇಶದಲ್ಲಿ ಸ್ವತಂತ್ರ ಪ್ರೇಮವಾಗಿದೆ. ವಿವಾಹ ಬಂಧನದಿಂದ ಈ ಪಾಪದಲ್ಲಿ ಸ್ವಾಭಾವಿಕವಾಗಿಯೇ ಅಡ್ಡಿಯುಂಟಾಗುತ್ತದೆ; ಮತ್ತು ವಿವಾಹ-ವಿಚ್ಛೇದನದ ಈ ಪಾಪಕ್ಕೆ

ಪ್ರೋತ್ಸಾಹ ದೊರಕುತ್ತದೆ. ಆದ್ದರಿಂದ ವಿವಾಹ ವಿಚ್ಛೇದನದ ಕಾನೂನು ಆದನಂತರ, ಬೇರೆ ಕಾರಣವಿಲ್ಲದಿದ್ದರೂ ಕೂಡ ಬಹಳ ವಿವಾಹ-ವಿಚ್ಛೇದದ ಪ್ರಸಂಗಗಳಾದರೋ ಕೇವಲ ಇದೇ ನಿಮಿತ್ತದಿಂದ ಆಗ ತೊಡಗಿದವು.*

ವಿವಾಹಿತ ಸ್ತ್ರೀ-ಪುರುಷರ ಪರಸ್ಪರ ವ್ಯವಹಾರದ ಸಂಬಂಧವಾಗಿ ಆಲೋಚನೆ ಮಾಡುತ್ತ ಶ್ರೀಮತಿ ರಾಬಿನ್‌ಸನ್ ಹೇಳುತ್ತಾಳೆ - ಹಿಸ್ಸೇದಾರಿಯ ಕಾರುಬಾರಿನಲ್ಲಿ ಪಾಲುದಾರರು ಪರಸ್ಪರ ಹೊಂದಿಕೊಂಡು ಹೋಗಬೇಕಾಗುತ್ತದೆ; ಮನಸ್ಸಿಗೆ ಬಂದಂತೆ ಕಾರುಬಾರು ನಡೆಸುವುದು ಹೇಗೆ ನಡೆಯಲಾರದೋ ಹಾಗೆಯೇ ಪತಿ-ಪತ್ನಿಯರ ಪಾಲುದಾರಿಕೆಯಲ್ಲಿ ಮನೆಯ ನಿಯಮಗಳೂ ಇವೆ. ಇಬ್ಬರೂ ಪರಸ್ಪರ ಹೊಂದಿಕೊಂಡು, ಸಲಹೆ ಸಹಕಾರಗಳೊಡನೆ ಕೆಲಸ ಮಾಡುವರಾದರೆ ಮನೆಯ ವ್ಯವಹಾರವು ಅಂದವಾದ ರೀತಿಯಲ್ಲಿ ನಡೆಯುವುದು. ಈ ಸಹಯೋಗದ ಮೇಲೆ

---

* ವಿದೇಶಗಳಲ್ಲಿ ಯಥಾರ್ಥವಾಗಿ ಆಗುತ್ತಿರುವುದು ಇದೇ. ಕೆಲಸಮಯದ ಹಿಂದೆ ಒಬ್ಬ ಪ್ರಸಿದ್ಧ ವಕೀಲ ಮಹೋದಯನು ಸಂಡೇ ಎಕ್ಸ್‌ಪ್ರೆಸ್‌ನ ಪ್ರತಿನಿಧಿಯೊಡನೆ ಹೇಳಿದ-ವಿವಾಹ-ವಿಚ್ಛೇದನಕ್ಕೆ ಸಂಬಂಧಿಸಿದಂತೆ ಇರುವ ಬಹಳ ಕಾರಣಗಳ ಪೈಕಿ, ವಿವಾಹಿತ ತರುಣಿಯರು ಪಾರಿವಾರಿಕ ಜೀವನವನ್ನು ಸುಖವಾಗಿಸುವುದಕ್ಕೆ ಸ್ವಲ್ಪವೂ ಚಿಂತಿಸದಿರುವುದು ಒಂದು ಪ್ರಧಾನ ಕಾರಣವಾಗಿದೆ. ಅವರು ಅಲ್ಲ-ಸಲ್ಲದ ವಿಷಯಗಳನ್ನು ಮುಂದುಮಾಡಿಕೊಂಡು (ಒಂದು ಉಡುಪಿಗಾಗಿ, ಫ್ಯಾಶನ್, ನಗೆಚಾಟಿಕೆ, ಹುಬ್ಬೇರಿಸುವುದು, ಮೂದಲಿಸುವುದು, ಸಿಗರೇಟು, ಬಿಸ್ಕತ್ತು ಮತ್ತು ಟೀ ಕಾಫಿಯವರೆಗೆ) ತಮ್ಮ ಪತಿಯರೊಡನೆ ಜಗಳವಾಡುತ್ತಾರೆ. ವಕೀಲ ಮಹೋದಯನು ಇನ್ನೂ ಹೇಳುತ್ತ-ನನ್ನ ಬಳಿ ವಿವಾಹ-ವಿಚ್ಛೇದನಕ್ಕೆ ಸಂಬಂಧಿಸಿದ ಹೆಚ್ಚು ಮೊಕದ್ದಮೆಗಳು ಯುವಕ-ಯುವತಿಯರದ್ದೇ ಇರುತ್ತವೆ. ಅವರು ಸಾಮಯಿಕ ಉತ್ತೇಜನಕ್ಕೆ ವಶರಾಗಿ ಆತುರದಿಂದ ವಿವಾಹವಾಗುತ್ತಾರೆ ಮತ್ತು ಕೆಲವು ತಿಂಗಳು ಸಮುದ್ರದ ದಡದಕಡೆಗೆ ಹೋಗಿ ಆಮೋದ-ಪ್ರಮೋದ ಮಾಡಿ ಜೀವನದಿಂದ ಬೇಸತ್ತು ವಿಚ್ಛೇದನದ ಬಗೆಗೆ ಯೋಚಿಸಲು ತೊಡಗುತ್ತಾರೆ. ಕೆಲವು ನ್ಯಾಯಾಲಯಗಳಲ್ಲಿ ಸ್ತ್ರೀಯರ ಕಣ್ಣೀರಿನ ದೃಶ್ಯಗಳನ್ನು ನೋಡಲಾಗುವುದಿಲ್ಲ. ಅವಳು ಮೌನವಾಗಿದ್ದರೂ ಅವಳ ಮುಖ ಮುದ್ರೆಯಿಂದ ಕರುಣೆಯು ಮಾತನಾಡುತ್ತದೆ. ಕಾರಣವೇನೆಂದರೆ ಕೆಲವು ಪಕ್ಷಗಳ ಬೆಳದಿಂಗಳ ರಾತ್ರಿಗಳ ನಂತರವೇ ಅವರ ಎಲ್ಲ ಸುಖ-ಸ್ವಪ್ನಗಳು ವಿಲಾಸಪ್ರಿಯ ಪುರುಷರ ಮುಖಾಂತರ ಮುರಿಯಲಾಗುತ್ತವೆ. ಯಾವ ಪ್ರೌಢ ಯುವತಿಯನ್ನು ಅವರ ಗಂಡಂದಿರು ಪರಿತ್ಯಾಗ ಮಾಡಿರುತ್ತಾರೋ ಅವರ ದುಃಖವಂತೂ ಹೇಳತೀರದು. ಯಾವ ಸುಂದರ ತರುಣಿಯರು ತಮ್ಮ ಪರಿತ್ಯಾಗಕ್ಕೆ ಕಾರಣರೋ ಆ ಪತಿಯರನ್ನು ನ್ಯಾಯಾಲಯದಲ್ಲಿ ನೋಡಿ ನೋಡಿ, ಬಿಕ್ಕಿ ಬಿಕ್ಕಿ ಅಳುತ್ತಿರುವ ದೃಶ್ಯವಂತೂ ದುಃಖಪೂರ್ಣವಾದುದು. ಇಂತಹ ತಂದೆ-ತಾಯಿಯರಿಗೆ ಜನಿಸಿದ ಮಕ್ಕಳು ಸಹ ದುರದೃಷ್ಟವಂತರು. ಇದೇ ಪ್ರಕಾರವಾಗಿ ವಿವಾಹ-ವಿಚ್ಛೇದನದ ಸಂಖ್ಯೆ ವೇಗದಿಂದ ಹೆಚ್ಚುತ್ತಿದೆ. ವಿವಾಹ ಮತ್ತು ವಿವಾಹ-ವಿಚ್ಛೇದ ಗೊಂಬೆಯಾಟದಂತಾಗಿವೆ ಮತ್ತು ಮುರಿದು ಬೀಳುತ್ತವೆ, ಪಶುಗಳಂತಹ ವ್ಯವಹಾರವಾಗಿಹೋಗಿದೆ. ಇಂದು ಭಾರತವಾಸಿಗಳಾದ ನಾವು ಕೂಡ ಇದನ್ನೇ ಉನ್ನತಿ ಎಂದು ಒಪ್ಪುತ್ತೇವೆ ಮತ್ತು ಇದನ್ನೇ ಬಯಸುತ್ತೇವೆ. ಇದಕ್ಕಿಂತ ಮಿಗಿಲಾದ ದುರ್ದೈವ ಮತ್ತೇನಿರಬಲ್ಲದು.

ಇಬ್ಬರ ಸುಖ-ಶಾಂತಿಗಳು ಆಧಾರಿತವಾಗಿವೆ. ಇದೇ ವಿವಾಹದ ಮುಖ್ಯ ಉದ್ದೇಶವಾಗಿದೆ. ಪರಸ್ಪರ ದೋಷಗಳನ್ನು ಅಥವಾ ತಪ್ಪುಗಳನ್ನು ಕ್ಷಮೆಯ ದೃಷ್ಟಿಕೋನದಿಂದ ನೋಡಿ ನಡೆಯುವುದರಿಂದಲೇ ಪಾಲುದಾರಿಕೆಯು ನಿಭಾಯಿಸಲ್ಪಡುತ್ತದೆ. ಇಲ್ಲವಾದಲ್ಲಿ ವಿವಾಹದ ವಿಚ್ಛೇದ ಖಂಡಿತವಾಗಿ ಆಗಿ ಬಿಡುತ್ತದೆ. ಈ ಸಹಯೋಗಿತ್ವಕ್ಕೆ ಯಾವ ಪವಿತ್ರ ವೃತ್ತಿಯಿಂದ ಪೋಷಣೆ ದೊರಕುತ್ತದೋ ಅದರ ಹೆಸರೇ ಪ್ರೇಮ, ಪ್ರೀತಿ ಅಥವಾ ಅನುರಾಗ. ಮನಸ್ಸಿಗೆ ಬಂದಂತೆ ತೃಪ್ತಿ ಅಥವಾ ಸ್ವೇಚ್ಛಾಚಾರದ ಸುಖವನ್ನೇ ಜೀವನದ ಉದ್ದೇಶವನ್ನಾಗಿ ಮಾಡಿಕೊಂಡಾಗ ಅದರ ಪರಿಣಾಮರೂಪವಾಗಿ ಕ್ಷೋಭೆ ಅಥವಾ ಪಶ್ಚಾತ್ತಾಪವೇ ಪ್ರಾಪ್ತವಾಗುತ್ತವೆ. ಆದ್ದರಿಂದ ಪತಿ-ಪತ್ನಿಯರು ಪರಸ್ಪರ ಸಹನೆಯಿಂದ ವ್ಯವಹರಿಸಬೇಕು. ಸ್ವತಂತ್ರತೆ ಅಥವಾ ಸ್ವೇಚ್ಛಾಚಾರಕ್ಕೆ ಬಲಿಯಾಗಬಾರದು.

ಈ ಸಹಯೋಗಭಾವದ ರಕ್ಷಣೆಯು ಯಾವ ಪ್ರೇಮದಿಂದಾಗುತ್ತದೆಯೋ, ವಿವಾಹ ವಿಚ್ಛೇದನದ ಮಾರ್ಗವು ತೆರೆದಿದ್ದಾಗ ಆ ಪ್ರೇಮದ ಉತ್ಪತ್ತಿಯೇ ನಿಂತು ಹೋಗುತ್ತದೆ. ಮತ್ತೆ ಸಹಯೋಗವು ಹೇಗಾದೀತು? ಸಹಯೋಗವುಂಟಾಗದಿದ್ದಾಗ ವಿಚ್ಛೇದನದ ಸಂಖ್ಯೆ ಉತ್ತರೋತ್ತರ ಹೆಚ್ಚುತ್ತದೆ. ಯುರೋಪಿನಲ್ಲಿ ಆಗುತ್ತಿರುವುದು ಇದೇ ಮತ್ತು ಅಲ್ಲಿಯ ಸಮಾಜ ಅಶಾಂತಿ ಮತ್ತು ಅನಾಚಾರದ ಮನೆಯಾಗಿದೆ. ವಿವಾಹ-ವಿಚ್ಛೇದನವಾಗುವುದರಿಂದ ಹಾಗೂ ಸ್ತ್ರೀಯ ಮತ್ತೊಬ್ಬ ಪುರುಷನೊಡನೆ ಮತ್ತು ಪುರುಷನು ಇನ್ನೊಬ್ಬ ಸ್ತ್ರೀಯೊಡನೆ ಆದ ವಿವಾಹದಲ್ಲಿ ಮೊದಲ ವಿವಾಹದ ಫಲವಾಗಿ ಹುಟ್ಟಿದ ಮಕ್ಕಳು ಅನಾಥರಾಗುವರು. ಸ್ತ್ರೀಯರಲ್ಲಿರುವ ಮಾತೃತ್ವದ ಮಹಾನ್ ವೃತ್ತಿ ಮತ್ತು ತಂದೆಯಲ್ಲಿರುವ ಪಿತೃತ್ವದ ಪವಿತ್ರಭಾವ ಕ್ರಮವಾಗಿ ನಾಶವಾಗುವುದು. ಇನ್ನಾದರೋ ಮಕ್ಕಳ ಪೋಷಣೆಯನ್ನು ರಷ್ಯಾದಂತೆ ರಾಜ್ಯವು ಮಾಡಬೇಕು ಅಥವಾ ಅವುಗಳ ದುರ್ದೆಶೆಯಾಗಬೇಕು.

ಅಮೇರಿಕದ ಭೂತಪೂರ್ವ ಪ್ರೆಸಿಡೆಂಟ್ ರೂಸವೆಲ್ಟ್ ಮಹೋದಯನು ತನ್ನ ಜೀವನ ಸ್ಮೃತಿಯಲ್ಲಿ ಹೇಳಿದ್ದಾನೆ-

ನನ್ನ ವಯಸ್ಸು ಆ ಸಮಯದಲ್ಲಿ ಹತ್ತುವರ್ಷದ್ದಾಗಿತ್ತು. ನಾನು ಅಸ್ವಸ್ಥನಾಗಿದ್ದೆ. ಹಾಸಿಗೆಯ ಮೇಲೆ ಬಿದ್ದುಕೊಂಡು ಪುಸ್ತಕದಲ್ಲಿನ ಚಿತ್ರಗಳನ್ನು ನೋಡುತ್ತಿದ್ದೆ. ಪಕ್ಕದಲ್ಲಿ ಕುಳಿತಿದ್ದ ಅಮ್ಮ ನನಗೆ ಚಿತ್ರಗಳ ಭಾವಗಳನ್ನು

ತಿಳಿಸುತ್ತಿದ್ದಳು. ನನಗೆ ಚೆನ್ನೆನಿಸುತ್ತಿತ್ತು. ನಿದ್ರೆ ಬಾರದಿದ್ದರೆ ನನ್ನ ತಾಯಿಯು ನನ್ನನ್ನು ಮುದ್ದಾಡಿ ಸಮಾಧಾನ ಮಾಡುತ್ತಿದ್ದಳು. ತಂದೆ ಮತ್ತು ತಾಯಿಯರಿಬ್ಬರೂ ನನ್ನೊಡನೆ ವ್ಯಾಕುಲಪಡುತ್ತಿದ್ದರು. ಎಷ್ಟೋ ಕಥೆಗಳನ್ನು ಹೇಳುತ್ತಿದ್ದರು! ಕಥೆಗಳು ಮತ್ತು ಆ ತಂದೆ-ತಾಯಿಯ ಸ್ನೇಹ; ಆ ಸ್ನೇಹವೇ ನನ್ನೆಲ್ಲ ಕಷ್ಟಗಳನ್ನು ತೊಡೆದುಹಾಕಿತು. ಹೀಗಾಗದಿದ್ದರೆ, ಒಂದು ವೇಳೆ ರೋಗಿಯಾದ ನನ್ನನ್ನು ಹಾಸಿಗೆಯ ಮೇಲೆ ಹಾಕಿ ಮತ್ತು ಇಬ್ಬರೋ ಮೂವರೋ ನರ್ಸ್‌ಗಳ ಮೇಲೆ ಭಾರಹೊರಸಿ ನನ್ನ ತಂದೆ-ತಾಯಿಯರು ಹೊರಗೆ ಪಾರ್ಟಿಯಲ್ಲಿ (ಸಂತೋಷ ಕೂಟದಲ್ಲಿ), ನಾಟಕದಲ್ಲಿ ಸಾಯಂ-ಭೋಜನದಲ್ಲಿ ಅಥವಾ ರಾಜನೈತಿಕ ಆಲೋಚನ ಸಮಿತಿಯಲ್ಲಿ ಭಾಗವಹಿಸಲು ಹೊರಟುಹೋಗಿದ್ದರೆ ನನ್ನ ಗತಿ ಏನಾಗುತ್ತಿತ್ತೆಂದು ವಿಚಾರ ಮಾಡುತ್ತಲೇ ನನ್ನ ಶರೀರ ನಡುಗಿಹೋಗುತ್ತದೆ. ಆಗ ರೂಸವೆಲ್ಟನಾಗುವ ಆಸೆಯೇ ಇರುತ್ತಿರಲಿಲ್ಲ.

ಮಾತೃತ್ವ ಮತ್ತು ಪಿತೃತ್ವದ ಭಾವನೆಯು ನಾಶವಾದ ಮೇಲೆ ಸಮಾಜವು ಯಾವ ಭಯಂಕರ ಸ್ಥಿತಿಗೆ ಪ್ರಾಪ್ತವಾಗುತ್ತದೆಂದು ಕಲ್ಪನೆ ಮಾಡಿದರೂ ಹೃದಯವು ಕಂಪಿಸುತ್ತದೆ.

ವಿವಾಹ-ವಿಚ್ಛೇದನದ ಕಾನೂನು ಆಗುವುದಾದರೆ ಅದು ಸ್ತ್ರೀಗೆ ಮಾತ್ರ ಅನ್ವಯಿಸುವುದಿಲ್ಲ, ಪುರುಷನಿಗೂ ಅನ್ವಯಿಸುತ್ತದೆ. ಹೀಗಾದಾಗ ಹೆಚ್ಚು ಹಾನಿಯು ಸ್ತ್ರೀ-ಜಾತಿಗೇ ಆಗುವುದು; ಏಕೆಂದರೆ, ಭಾರತವರ್ಷದಲ್ಲಿ ಇಂದಿನವರೆಗೂ ಹೋಲಿಕೆಯಲ್ಲಿ ಪುರುಷನಿಗಿಂತ ಸ್ತ್ರೀ-ಜಾತಿಯ ಪತನ ಕಡಿಮೆಯಾಗಿದೆ. ವಿಚ್ಛೇದನ ಕೊಡಲು ಬರುವ ಸ್ತ್ರೀಯರ ಸಂಖ್ಯೆ ಕಡಿಮೆ, ಪುರುಷರದು ಹೆಚ್ಚು, ಆದ್ದರಿಂದ ಯಾವ ದೃಷ್ಟಿಯಿಂದ ನೋಡಿದರೂ ವಿಚ್ಛೇದನದ ಕಾನೂನು ಶ್ರೇಯಸ್ಕರವಲ್ಲ. ಇದರಿಂದ ಎಲ್ಲ ಪ್ರಕಾರದಲ್ಲೂ ಹಾನಿಯೇ ಆದ್ದರಿಂದ ಪ್ರತಿಯೊಬ್ಬ ನರ-ನಾರಿಯು ಇದನ್ನು ವಿರೋಧಿಸಬೇಕು. ಆದರೆ ಇಂದು ಭಾರತದ ಶಿಕ್ಷಿತ ನಾರಿ-ಸಮಾಜವು ಪತನವನ್ನೇ ಏಳಿಗೆಯೆಂದು ಒಪ್ಪಿ ವಿಚ್ಛೇದನ ಕಾನೂನಿಗೆ ಚಡಪಡಿಸುತ್ತಿದೆ. ಇದು ಎಷ್ಟು ದುಃಖದ ವಿಷಯವಾಗಿದೆ.

ಹಿಂದೂ ಶಾಸ್ತ್ರದ ಪ್ರಕಾರ ಸತೀತ್ವ ಪರಮಪುಣ್ಯವಾದುದು ಮತ್ತು ಪರ-ಪುರುಷ-ಚಿಂತನಮಾತ್ರವೂ ಮಹಾಪಾಪ. ಆದ್ದರಿಂದಲೇ ಇಂದು ಈ ನಿಮ್ನಸ್ಥಿತಿಯುಂಟಾದ ಕಾಲದಲ್ಲಿಯೂ, ಸ್ವೇಚ್ಛಾಪೂರ್ವಕವಾಗಿ ಪತಿಯ ಶವವನ್ನು

ತೊಡೆಯಲ್ಲಿಟ್ಟುಕೊಂಡು ಆನಂದಭರಿತರಾಗಿ ಪ್ರಾಣತ್ಯಾಗ ಮಾಡುವ ಸತಿಯರು ಹಿಂದೂ ಸಮಾಜದಲ್ಲಿ ಸಿಕ್ಕುತ್ತಾರೆ. ಭಾರತವರ್ಷದ ಸ್ತ್ರೀ ಜಾತಿಯ ಗೌರವ ಅವಳ ಸತೀತ್ವ ಮತ್ತು ಮಾತೃತ್ವದಲ್ಲಿಯೇ ಇದೆ. ಸ್ತ್ರೀಜಾತಿಯ ಈ ಗೌರವ ಭಾರತದ ಗೌರವವಾಗಿದೆ. ಆದ್ದರಿಂದ ಪ್ರತಿ ಭಾರತೀಯ ನರ-ನಾರಿಯರು ಪ್ರಾಣವನ್ನು ಪಣವಿಟ್ಟಾದರೂ ಇದನ್ನು ರಕ್ಷಣೆ ಮಾಡಬೇಕು.

□□

## ೨೩. ವಿಧವಾ-ಜೀವನವನ್ನು ಪವಿತ್ರವಾಗಿರಿಸುವ ಸಾಧನ

ವಿಧವೆಯರ ದುಃಖವು ಹೇಳತೀರದು; ಅದರ ಕಲ್ಪನೆಯನ್ನು ಬೇರಾರು ಮಾಡಲಾರರು; ಆದರೆ ವಿಧವೆಯ ಕಾಮವಾಸನೆಯನ್ನು ಹೊಡೆದೆಬ್ಬಿಸಿ ಅವಳನ್ನು ಕಾಮೋಪಭೋಗದಲ್ಲಿ ತೊಡಗಿಸುವುದರಿಂದ, ಅವಳನ್ನು ವಿಷಯ ಸುಖಗಳ ಸೇವಕಿಯಾಗಿ ಮಾಡುವುದರಿಂದ, ಅವಳಿಗೆ ಮರು-ವಿವಾಹದ ವ್ಯವಸ್ಥೆ ಮಾಡುವುದರಿಂದ ಅವಳ ದುಃಖ ದೂರಾಗುವುದಿಲ್ಲ, ಅವರವರ ಕರ್ಮವೇ ದುಃಖಕ್ಕೆ ಕಾರಣವಾಗಿದೆ. ಭವಿಷ್ಯದಲ್ಲಿ ನಾವು ಸುಖವನ್ನು ಬಯಸುತ್ತೇವಾದರೆ ನಾವು ಸಂಯಮಪೂರ್ಣ ಸತ್ಕರ್ಮಗಳನ್ನು ಮಾಡಬೇಕು. ಇದರ ಪರಿಣಾಮ ಸುಖಮಯವಾಗುತ್ತದೆ. ವಿಷಯ ಸೇವನೆಯ ಸ್ವಾತಂತ್ರ್ಯದ ಪರಿಣಾಮ ಸುಖವಾಗಲಾರದು. ಸ್ತ್ರೀಯು ವಿಧವೆ ಏಕಾಗುತ್ತಾಳೆ? ಇದಕ್ಕೆ ಕಾರಣ ಅವಳು ಪೂರ್ವಜನ್ಮದಲ್ಲಿ ಮಾಡಿದ ಅಸತ್ ಆಚರಣೆಯೇ ಆಗಿದೆ. ಇಲ್ಲಿಯೂ ಈ ಜನ್ಮದಲ್ಲಿಯೂ ದುರಾಚರಣೆಯಲ್ಲಿ ಮತ್ತೆ ಪ್ರವೃತ್ತಳಾಗುವುದಾದರೆ ಅವಳ ಭವಿಷ್ಯ ಇನ್ನೂ ಸಂಕಟಪೂರ್ಣವಾಗುವುದು. ಸತಿ ಅನುಸೂಯೆಯು ಹೇಳಿದ್ದಾಳೆ-

**ಬಿನು ಶ್ರಮ ನಾರಿ ಪರಮ ಗತಿ ಲಹಈ । ಪತಿಬ್ರತ ಧರ್ಮ ಛಾಡಿ ಛಲ ಗಹಈ ॥**

**ಪತಿ ಪ್ರತಿಕೂಲ ಜನಮ ಜಹಂ ಜಾಈ । ವಿಧವಾ ಹೋಇ ಪಾಇ ತರುನಾಈ ॥**

ನಿಷ್ಕಪಟ ಭಾವದಿಂದ ಪಾತಿವ್ರತ್ಯ ಧರ್ಮವನ್ನು ಪಾಲಿಸುವ ಸ್ತ್ರೀಯು ಅನಾಯಾಸವಾಗಿ ಪರಮಗತಿಯನ್ನು ಹೊಂದುತ್ತಾಳೆ. ಹೀಗೆಯೇ ಪತಿಗೆ ಪ್ರತಿಕೂಲಳಾಗಿ ನಡೆಯುವ ಸ್ತ್ರೀಯು ಎಲ್ಲಿ ಜನ್ಮತಾಳಿದರೂ ಯೌವನಾವಸ್ಥೆಯಲ್ಲಿಯೇ ವಿಧವೆಯಾಗುತ್ತಾಳೆ.

ಸ್ಕಂದಪುರಾಣದಲ್ಲಿ ಹೇಳಲಾಗಿದೆ-

**ಯಾ ನಾರೀ ತು ಪತಿಂ ತ್ಯಕ್ತ್ವಾ ಮನೋವಾಕ್ಕಾಯಕರ್ಮಭಿಃ ।**
**ರಹಃ ಕರೋತಿ ವೈ ಜಾರಂ ಗತ್ವಾವಾ ಪುರುಷಾಂತರಮ್ ॥**
**ತೇನ ಕರ್ಮವಿಪಾಕೇನ ಸಾ ನಾರೀ ವಿಧವಾ ಭವೇತ್ ॥**

ಯಾವ ನಾರಿಯು ತನ್ನ ಪತಿಯನ್ನು ತ್ಯಜಿಸಿ ಮನಸಾ ವಾಚಾ ಕಾಯಾ ಹಾಗೂ ಕರ್ಮದಿಂದ ಜಾರನನ್ನು ಸೇವಿಸುತ್ತಾಳೋ; ಅನ್ಯ ಪುರುಷನ ಬಳಿ ಸೇರುತ್ತಾಳೋ, ಅವಳು ಆ ಕರ್ಮದ ಫಲವಾಗಿ ಜನ್ಮಾಂತರದಲ್ಲಿ ವಿಧವೆಯಾಗುತ್ತಾಳೆ.

ಎಲ್ಲಿಯವರೆಗೆಂದರೆ - ಪಾಪಗಳ ಕಾರಣದಿಂದ ಪುರುಷರೂ ಕೂಡ ಮುಂದಿನ ಜನ್ಮದಲ್ಲಿ ಸ್ತ್ರೀ ಯೋನಿಯಲ್ಲಿ ಜನಿಸಿ ವಿಧವೆಯರಾಗಬೇಕಾಗುತ್ತದೆ-

**ಯಃ ಸ್ವನಾರೀಂ ಪರಿತ್ಯಜ್ಯ ನಿರ್ದೋಷಾಂ ಕುಲಸಂಭವಾಮ್ ।**
**ಪರದಾರರತೋ ಹಿ ಸ್ಯಾದನ್ಯಾಂ ವಾ ಕುರುತೇ ಸ್ತ್ರಿಯಮ್ ॥**
**ಸೋऽನ್ಯಜನ್ಮನಿ ದೇವೇಶಿ ಸ್ತ್ರೀ ಭೂತ್ವಾ ವಿಧವಾ ಭವೇತ್ ।**

(ಸ್ಕಂದಪುರಾಣ)

ಶಿವನು ಉಮಾದೇವಿಯೊಡನೆ ಹೇಳುತ್ತಾನೆ-

ದೇವೇಶ್ವರಿ! ಯಾವ ಪುರುಷನು ತನ್ನ ನಿರ್ದೋಷಿಯೂ, ಕುಲೀನಳೂ ಆದ ತನ್ನ ಪತ್ನಿಯನ್ನು ಬಿಟ್ಟು ಪರಸ್ತ್ರೀಯರಲ್ಲಿ ಆಸಕ್ತನಾಗುತ್ತಾನೋ ಅಥವಾ ಬೇರೆ ಸ್ತ್ರೀಯನ್ನು ಪತ್ನಿಯಾಗಿ ಮಾಡಿಕೊಳ್ಳುತ್ತಾನೋ, ಅವನು ಜನ್ಮಾಂತರದಲ್ಲಿ ಸ್ತ್ರೀ-ಯೋನಿಯಲ್ಲಿ ಸ್ತ್ರೀಯಾಗಿ ಜನಿಸಿ ವಿಧವೆಯಾಗುತ್ತಾನೆ.

ಇದರಿಂದ ವೈಧವ್ಯವು ಪೂರ್ವಕರ್ಮಗಳ ಫಲಸ್ವರೂಪವಾಗಿಯೇ ಉಂಟಾಗುವುದೆಂದು ಸಿದ್ಧವಾಗುತ್ತದೆ. ಶುಭ ಕರ್ಮ, ತಪಸ್ಸು ಅಥವಾ ಭಗವದ್ಭಜನೆಯಿಂದಲೇ ಇದರ ನಿವಾರಣೆ ಆಗುವುದು. ಪುನರ್ವಿವಾಹ ಅಥವಾ ವಿಷಯ-ಸೇವನೆಯಿಂದ ಈ ದೋಷ ನಿವಾರಣೆಯಾಗಲಾರದು. ಇಷ್ಟು ಮಾತ್ರವೇ ಅಲ್ಲ-ಅದರಿಂದ ದೋಷವು ಇನ್ನೂ ಹೆಚ್ಚುವುದು. ಜನ್ಮಾಂತರದಲ್ಲಿ ವಿಶೇಷ ದುಃಖಕ್ಕೆ ಕಾರಣವಾಗುವುದು. ಮುಕ್ತಿಯಂತೂ ಪ್ರಾಪ್ತವಾಗುವುದೇ ಇಲ್ಲ. ಮಾನವ ಜೀವನವು ಭಾವೀ ದುಃಖಗಳಿಗೆ ವಿಶಾಲವಾದ ಭೂಮಿಕೆಯಾಗುವುದು. ಆದ್ದರಿಂದಲೇ ವಿಧವಾ ಸ್ತ್ರೀಯು ಪತಿಯ ಅಭಾವದಲ್ಲಿ ತನ್ಮಯಳಾಗಿ

ಪರಮಪತಿಯಾದ ಭಗವಂತನಲ್ಲಿ ಮನಸ್ಸನ್ನು ತೊಡಗಿಸಬೇಕೆಂದು ಆದೇಶಿಸಲಾಗಿದೆ.

ಹಿಂದೂ ಸ್ತ್ರೀಯ ವಿವಾಹವು ಮುರಿಯಬಹುದಾದ ವ್ಯಾಪಾರವಲ್ಲ, ಅದಾದರೋ ಸದಾ ಅಖಂಡವಾಗಿರುತ್ತದೆ. ಪತಿಯ ಪರಲೋಕಗಮನದ ನಂತರವೂ ಹೇಗಿದ್ದಿತೋ ಹಾಗೆಯೇ ಇರುತ್ತದೆ. ಇಂದು ಸಮಾಜದಲ್ಲಿ ಹಿಂದೂ-ವಿಧವೆಯ ಸಂಬಂಧವಾಗಿ ಒಂದು ಕಡೆಯಿಂದ ಯಾವ ಔದಾಸೀನ್ಯ ಇನ್ನೊಂದು ಕಡೆಯಿಂದ ಉತ್ಸಾಹ ನೋಡಲಾಗುತ್ತದೆಯೋ, ಅವೆರಡೂ ಅವಳಿಗೆ ವಸ್ತುತಃ ಮಹಾನ್ ವಿಪತ್ತಿಸ್ವರೂಪವಾಗಿವೆ. ಒಂದು ಕಡೆಯಾದರೋ ಸಮಾಜದ ಪುರುಷರು ವಿಧವೆಗೆ ಬಗೆಬಗೆಯಾದ ದುಃಖವನ್ನು ಕೊಟ್ಟು ಅವಳನ್ನು ಧರ್ಮಚ್ಯುತಳನ್ನಾಗಿ ಮಾಡಿ ಪಥಭ್ರಷ್ಟಳಾಗಿಸುತ್ತಾರೆ. ಇನ್ನೊಂದು ಕಡೆ ಅವಳಲ್ಲಿ ದಯೆತೋರಿಸಿ ಅವಳನ್ನು ಕಾಮದ ವಿಷದ ಬಳ್ಳಿಯನ್ನು ಸೇವಿಸಲು ಉತ್ಸಾಹಿಸುವುದರ ಮೂಲಕ ಪಥಭ್ರಷ್ಟವಾಗಿಸುತ್ತಾರೆ. ಇಂತಹ ಸ್ಥಿತಿಯಲ್ಲಿ ವಿಧವೆಯ ಜೀವನ ದುಃಖಮಯವಾಗುವುದು ಸ್ವಾಭಾವಿಕ ಮತ್ತು ವಿಧವೆಯ ದುಃಖಭರಿತವಾದ ಅಳಲಿನಿಂದ ಸಮಾಜದ ಅಮಂಗಲವೂ ಆಗತಕ್ಕದ್ದೇ. ಈ ವಿನಾಶದಿಂದ ಸಮಾಜವನ್ನು ಉಳಿಸಬೇಕಾದಲ್ಲಿ ವಿಧವೆಯ ಜೊತೆಗೆ ಸುಂದರ, ಪವಿತ್ರ ಮತ್ತು ಆದರ್ಶಪೂರ್ಣ ವ್ಯವಹಾರ ಮಾಡಬೇಕು. ಅವಳ ಜೀವನವು ಪವಿತ್ರ ಸಂನ್ಯಾಸಿಯ ಜೀವನದಂತೆ ತ್ಯಾಗಮಯವಾಗಿರಲು ಸಾಧ್ಯವಾಗುವಂತೆ ವ್ಯವಸ್ಥೆಮಾಡಿ ಅದರ ಪ್ರಚಾರ ಮಾಡಬೇಕು. ವಿಧವೆಯ ಜೀವನವನ್ನು ಪವಿತ್ರ ಹಾಗೂ ಸುಖಮಯವಾಗಿ ಮಾಡಲು ಕೆಲವು ಉಪಾಯಗಳು ಇಂತಿವೆ-

೧. ವಿಧವಾ-ಜೀವನದ ಗೌರವದ ಅರಿವನ್ನು ವಿಧವೆಗೆ ಮಾಡಿಸುವುದು:- ವಿಧವಾ-ಜೀವನವು ತಿರಸ್ಕೃತ ಮತ್ತು ದುಃಖಮಯವಲ್ಲ, ಪವಿತ್ರ ದೈವಿ ಜೀವನವಾಗಿದೆ; ಭೋಗ-ಜೀವನದ ಸಮಾಪ್ತಿಯಾದೊಡನೆ ಆತ್ಯಂತಿಕ ಸುಖ ಮತ್ತು ಪರಮಾನಂದದ ಪ್ರಾಪ್ತಿಯನ್ನು ಮಾಡಿಸುವ ಅಧ್ಯಾತ್ಮಿಕ ಜೀವನದ ಪ್ರಾರಂಭ ವಾಗುವುದು ಇಲ್ಲಿಂದ ಎಂಬ ಅಂಶವನ್ನು ಹೃದಯಂಗಮವಾಗುವಂತೆ ಮಾಡಬೇಕು. ಮನುಷ್ಯ ಜೀವನದ ಪರಮ ಲಕ್ಷ್ಯವು ಭಗವತ್ಪ್ರಾಪ್ತಿಯೆಂಬುದನ್ನು ಮನದಟ್ಟು ಮಾಡಿಸಬೇಕು.

ವಿಷಯಸೇವನೆಯಿಂದ ವಿಷಯಗಳಲ್ಲಿ ಆಸಕ್ತಿ, ಕಾಮನೆಗಳು ಹೆಚ್ಚುತ್ತವೆ. ಆದ್ದರಿಂದ ವಿಷಯ ಸೇವನೆ ಮಾಡುವ ವಿಧವಾ ಸ್ತ್ರೀಯರಿಗೆ ಭಗವತ್ಪ್ರಾಪ್ತಿಯ ಸಾಧನೆಯ ಯಾವ ಸದವಕಾಶವು ಎಷ್ಟೋ ಜನ್ಮಗಳ ನಂತರ ಸಿಗಬಹುದಾಗಿದೆಯೋ ಅದು ವಿಧವೆಗೆ ಈ ಜನ್ಮದಲ್ಲಿಯೇ ಅನಾಯಾಸವಾಗಿ ದೊರಕಿದೆ. ಆದ್ದರಿಂದ ವಸ್ತುತಃ ಅವಳು ವಿಷಯ-ವಿರಾಗಿಯೂ, ಹಾಗೆಯೇ ಅವಳು ಪುಣ್ಯವತಿಯೂ ಮತ್ತು ಭಾಗ್ಯವಂತೆಯೂ ಆಗಿದ್ದಾಳೆ; ಪೂಜ್ಯನೀಯಳೂ, ಶ್ರದ್ಧೆಗೆ ಪಾತ್ರಳೂ ಆಗಿದ್ದಾಳೆ. ಸುಖ-ದುಃಖಗಳು ಯಾವ ಘಟನೆಯಲ್ಲೂ ಇರುವುದಿಲ್ಲ. ಅದಕ್ಕೆ ಪ್ರತಿಯಾಗಿ ಅವು ಮನಸ್ಸಿಗೆ ಅನುಕೂಲವಾದ ಹಾಗೂ ಪ್ರತಿಕೂಲವಾದ ಭಾವನೆಗಳಲ್ಲಿವೆ. ಒಬ್ಬ ಸಂನ್ಯಾಸಿಯು ಸ್ವೇಚ್ಛೆಯಿಂದ ವಿಷಯಗಳನ್ನು ತ್ಯಜಿಸಿ ನಿವೃತ್ತಿಮಯ ಜೀವನವನ್ನು ನಡೆಸುತ್ತಾನೆ, ಅದರಿಂದ ಅವನಿಗೆ ಸುಖದ ಅನುಭವವಾಗುತ್ತದೆ. ಇನ್ನೊಬ್ಬನನ್ನು ಯಾರೋ ಬಲವತ್ಪೂರ್ವಕವಾಗಿ ಅವನ ಸರ್ವಸ್ವವನ್ನೂ ಕಸಿದುಕೊಂಡು ಮನೆಯಿಂದ ಹೊರಗೆ ಹಾಕಿದ್ದಾರೆ, ಅವನಿಗೆ ಬಹಳ ದುಃಕವಾಗುತ್ತದೆ. ಇಬ್ಬರ ವಿಷಯಹೀನತೆಯ ಬಾಹ್ಯ ಸ್ಥಿತಿಯು ಸಮಾನವಾಗಿದೆ. ಆದರೆ ಒಬ್ಬನಿಗೆ ಸುಖ, ಇನ್ನೊಬ್ಬನಿಗೆ ದುಃಖ ಏಕೆ ಆಗುತ್ತದೆ? ಏಕೆಂದರೆ, ಒಬ್ಬ ಈ ಸ್ಥಿತಿಯಲ್ಲಿ ಅನುಕೂಲತೆಯ ಅನುಭವವನ್ನು ಪಡೆಯುತ್ತಾನೆ. ಮತ್ತೊಬ್ಬನು ಪ್ರತಿಕೂಲತೆಯ ಅನುಭವವನ್ನು ಹೊಂದುತ್ತಾನೆ. ಸಂಸಾರಿಗೆ ಕಾಮಿನೀ-ಕಾಂಚನ, ವಿಷಯ-ಭೋಗಾದಿಗಳು ಸುಖರೂಪವಾಗಿ ಭಾಸವಾಗುತ್ತವೆ. ಅದೇ ಮನೋಭಾವನೆಯು ಬದಲಾಯಿಸುವುದರಿಂದ ವಿರಕ್ತನಾದ ಸಂನ್ಯಾಸಿಗೆ ದುಃಖ ರೂಪವಾಗಿ ಬಿಡುತ್ತವೆ ಮತ್ತು ಸಂನ್ಯಾಸಿಗೆ ಯಾವ ತ್ಯಾಗವು ಸುಖ-ರೂಪವಾಗಿದೆಯೋ, ಅದರಲ್ಲಿ ಸಂಸಾರಿಗೆ ದುಃಖದ ಅನುಭವವಾಗುತ್ತದೆ. ಆದ್ದರಿಂದ ವಿಧವೆಯ ವಿಷಯ-ರಹಿತವಾದ ಜೀವನವು ಅವಳ ಭಾಗ್ಯಕ್ಕೆ ಪರಮ ಗೌರವದ ವಸ್ತುವಾಗಿದೆ ಹಾಗೂ ಮಾನವ ಜೀವನದ ಪರಮ ಲಕ್ಷ್ಯವಾದ ಭಗವತ್ಪ್ರಾಪ್ತಿಯ ಶ್ರೇಷ್ಠ ಸಾಧನವಾಗಿದೆಯೆಂದೂ, ಇದರಿಂದ ಅವಳ ಜೀವನ ಅನಾದರಣೀಯ ಹಾಗೂ ಕಳಂಕಮಯವಾಗಿಲ್ಲ, ಇಷ್ಟೇ ಅಲ್ಲದೆ ಆದರಣೀಯ ಮತ್ತು ಗೌರವಮಯವಾಗಿದೆ. ಆಸ್ಥೆಯನ್ನು ವಿಧವೆಯಲ್ಲಿ ಉಂಟುಮಾಡಿ ಅವಳೊಡನೆ ಎಲ್ಲರೂ ವಸ್ತುತಃ ಇಂತಹುದೇ ಆದ ಆದರ, ಶ್ರದ್ಧೆ ಹಾಗೂ ಪೂಜ್ಯಭಾವದಿಂದ ಕೂಡಿದ ವ್ಯವಹಾರ ಮಾಡಬೇಕು ಎನ್ನುವ ಆಸ್ಥೆಯನ್ನು ಜನರಲ್ಲಿ ಉಂಟುಮಾಡಿದಲ್ಲಿ ವಿಧವೆಯು ತನ್ನ ಜೀವನದಲ್ಲಿ ಸುಖವನ್ನನುಭವಿಸುವಳು. ಅವಳ ಜೀವನ ಪವಿತ್ರವೂ ಹಾಗೂ ಸಂಯಮಪೂರ್ಣವೂ ಆಗಿರುವುದು.

೨. ವಿಧವೆಯು ಮಾವನ ಮನೆಯಲ್ಲಿದ್ದರೆ ಅತ್ತೆ-ಮಾವ ಮತ್ತು ತವರುಮನೆಯಲ್ಲಿದ್ದರೆ ತಂದೆ-ತಾಯಿಯರು ವಿಲಾಸ ಕ್ರಿಯೆಯನ್ನು ಸರ್ವಥಾ ತ್ಯಾಗಮಾಡಬೇಕು ಹಾಗೂ ತಮ್ಮ ಜೀವನವನ್ನು ಸರಳ ಹಾಗೂ ಸಂಯಮ ಪೂರ್ಣವಾಗಿಸಿಕೊಂಡು ವಾನಪ್ರಸ್ಥ-ಸದೃಶ ತಪೋಮಯವಾಗಿಸುವ ಪ್ರಯತ್ನ ಮಾಡಬೇಕು. ಇದರಿಂದ ವಿಧವೆಗೆ ಬಹಳ ಸಂತೋಷವಾಗುವುದು, ಮನಸ್ಸು ವಿಷಯಗಳತ್ತ ಆಕರ್ಷಿತವಾಗುವುದಿಲ್ಲ ಮತ್ತು ಅವಳು ಧರ್ಮಚ್ಯುತಳಾಗುವಳೆಂಬ ಹೆದರಿಕೆಯೂ ಇರುವುದಿಲ್ಲ. ಅವಳ ಎದುರಿನಲ್ಲಿ ಮನೆಯವರ ಯಾವ ಪವಿತ್ರ ಆದರ್ಶವಿರುವುದೋ ಅದು ಅವಳಿಗೆ ಕರ್ತವ್ಯ-ಪಾಲನೆಯಲ್ಲಿ ಬಲವನ್ನೂ, ಉತ್ಸಾಹವನ್ನೂ ನೀಡುವುದು. ಈ ಕಾರ್ಯವೇನೋ ಕಠಿಣವಾದುದು, ಆದರೆ ಬಹಳ ಲಾಭದಾಯಕವೂ, ಅವಶ್ಯ ಕರ್ತವ್ಯವೂ ಆಗಿದೆ.

ಇದರ ಜೊತೆಗೆ ಮನೆಯ ಅನ್ಯ ಸ್ತ್ರೀ-ಪುರುಷರು ಬಹಳ ಎಚ್ಚರಿಕೆಯಿಂದ ವಿಷಯ-ಸಂಬಂಧ ಮಾಡಬೇಕು. ಹೀಗಾದಲ್ಲಿ ವಿಧವೆಯ ಗಮನ ಅತ್ತ ಸುಳಿಯುವುದಿಲ್ಲ.

೩. ವಿಧವೆಯನ್ನು ತಿರಸ್ಕರಿಸುವುದಾಗಲೀ, ಅವಮಾನ ಮಾಡುವುದಾಗಲೀ ಎಂದಿಗೂ ಮಾಡಕೂಡದು. ಅವಳಿಗೆ ಕಟುವಾಕ್ಯವನ್ನು ಹೇಳಬಾರದು. ಅವಳನ್ನು ಮನೆಯ ದೇವತೆಯೆಂದು ತಿಳಿಯಬೇಕು. ಅವಳ ಸ್ಥಾನ ಸಧವೆಯಾದ ತಾಯಿ ಮತ್ತು ಅತ್ತೆಯ ಸ್ಥಾನಕ್ಕಿಂತಲೂ ಹೆಚ್ಚಿನದೆಂದು ತಿಳಿಯಬೇಕು. ವಿಧವೆಯು ಯಾವುದಾದರೂ ಸತ್ಕಾರ್ಯ, ದಾನ, ವ್ರತ, ಉತ್ಸವ, ಉದ್ಯಾಪನೆ ಮುಂತಾದುವನ್ನು ಮಾಡಬಯಸಿದಲ್ಲಿ ತಮ್ಮ ಶಕ್ತಿಗನುಸಾರವಾಗಿ ವಿಶೇಷವಾದ ಉತ್ಸಾಹ, ಧನವ್ಯಯ ಮತ್ತು ಸಹಯೋಗದೊಡನೆ ಅದನ್ನು ಮಾಡಿಸಬೇಕು. ಹೀಗೆ ಮಾಡಿಸುವ ವಿಷಯದಲ್ಲಿ ಸ್ವಲ್ಪವೂ ಜಿಪುಣತನವನ್ನು ತೋರಿಸಬಾರದು. ಅವಳ ಮನಸ್ಸು ವಿಷಯ-ಭೋಗಗಳ ಕಡೆಗೆ ಹರಿಯದಿರುವಂತೆ ಅವಳ ಮುಖಾಂತರ ಹೆಚ್ಚುಹೆಚ್ಚಾಗಿ ಸಾತ್ತ್ವಿಕ ಕಾರ್ಯಗಳನ್ನು ಮಾಡಿಸುತ್ತಿರಬೇಕು.

೪. ವಿಧವೆಯ ಹೃದಯದ ಪ್ರೇಮಧಾರೆಯು ಪರಿವಾರದ ಎಲ್ಲ ಬಾಲಕರ ಬಗೆಗೆ ಹರಿಯಲು ಸಾಧ್ಯವಾಗುವಂತೆ ಒಳ್ಳೆಯ ಅವಕಾಶ, ಅನುಕೂಲವಾತಾವರಣ ಮತ್ತು ಉತ್ಸಾಹವನ್ನು ಉಂಟುಮಾಡಬೇಕು. ಅವಳ ಪ್ರೇಮ, ಪರೋಪಕಾರ ಹಾಗೂ ಸೇವಾವೃತ್ತಿಯನ್ನು ಆದರ ಮತ್ತು

ಗೌರವಗಳೊಡನೆ ಹೊರಹೊಮ್ಮಿಸಬೇಕು. ಅವಳು ಮನೆಯಲ್ಲಿನ ಎಲ್ಲ ಮಕ್ಕಳಿಗೂ ಸ್ನೇಹಮಯೀ ತಾಯಿಯಾದಲ್ಲಿ ಅವಳಿಗೆ ತನ್ನ ಜೀವನವನ್ನು ಪವಿತ್ರತೆಯಿಂದ ನಡೆಸುವುದಕ್ಕೆ ಬಹಳ ಸಹಾಯವಾಗುತ್ತದೆ.

೫. ವಿಧವೆಯನ್ನು ತಿರಸ್ಕಾರ ಅಥವಾ ಅವಮಾನ ಭಾವನೆಯಿಂದಲ್ಲ, ಅವಳ ಸ್ವರೂಪದ ಗೌರವಕ್ಕಾಗಿ ಸರಳ ಜೀವನ ನಡೆಸುವಂತೆ ಪ್ರೋತ್ಸಾಹಿಸಬೇಕು. ವಿಧವೆಯು ಸದಾಚಾರಿಯಾಗಿರಲಿ, ಊಟ-ಪಾನೀಯಗಳಲ್ಲಿ ಸಂಯಮ ಮತ್ತು ನಿಯಮಗಳನ್ನು ಪಾಲಿಸಲಿ, ತಾಮಸೀ ಮತ್ತು ರಾಜಸೀ ಪದಾರ್ಥಗಳ ಸೇವನೆಯನ್ನು ತ್ಯಜಿಸಲಿ, ಅಲಂಕಾರ ಹಾಗೂ* ಬಣ್ಣಬಣ್ಣದ ಬಟ್ಟೆಗಳನ್ನು ಧರಿಸದಿರಲಿ. (ಇದರಿಂದ ಸ್ವಾಭಾವಿಕ ಉತ್ತೇಜನವುಂಟಾಗಿ ಬ್ರಹ್ಮಚರ್ಯವ್ರತಕ್ಕೆ ಹಾನಿಯುಂಟಾಗುತ್ತದೆ; ಇದು ವೈಜ್ಞಾನಿಕ ರಹಸ್ಯವಾಗಿದೆ). ಇಲ್ಲಿ-ಅಲ್ಲಿ ಲಜ್ಜೆಯನ್ನು ತೊರೆದು ಅಲೆಯದಿರಲಿ, ಶಾರೀರಕ ಪರಿಶ್ರಮವನ್ನು ಅವಶ್ಯವಾಗಿ ಮಾಡಲಿ. ನಾಟಕ-ಸಿನಿಮಾಗಳನ್ನು ನೋಡದಿರಲಿ, ಕೆಟ್ಟ ಚಿತ್ರಗಳು ಮತ್ತು ಪುಸ್ತಕಗಳನ್ನು ವೀಕ್ಷಿಸದಿರಲಿ. ಸ್ತ್ರೀಯರೊಡನೆ ವಿಷಯ ಸಂಬಂಧವಾದ ಚರ್ಚೆಮಾಡದಿರಲಿ, ಪುರುಷರ ಸಂಸರ್ಗದಿಂದ ಸದಾ ದೂರವಿರಬೇಕು, ಒಬ್ಬಳೇ ಪುರುಷರ ಜೊತೆ ಇರಬಾರದು, ಯಾರಾದರೂ ಪುರುಷರನ್ನು ಗುರುಗಳನ್ನಾಗಿಸಿಕೊಂಡು ಅವರ ಪಾದಗಳನ್ನು ಸ್ಪರ್ಶಿಸುವುದು, ಅವರ ಅಂಗಗಳನ್ನು ಸ್ಪರ್ಶಮಾಡುವುದು, ಕಾಲೊತ್ತುವುದು, ಏಕಾಂತದಲ್ಲಿ ಅವರ ಬಳಿಯಿರುವುದು ಮುಂತಾದ ವ್ಯವಹಾರಗಳಿಂದ ಎಚ್ಚರಿಕೆ ವಹಿಸಿ ದೂರವಿರಬೇಕು. ಮತ್ತವರು ಎಷ್ಟೇ ಹಿರಿಯ ಭಕ್ತರು, ಮಹಾತ್ಮರು ಅಥವಾ ತ್ಯಾಗಿಯಾದ ಸಂನ್ಯಾಸಿಯಾಗಿದ್ದರೂ - ವಿಧವೆಯು ಏಕಮಾತ್ರ ಭಗವಂತನನ್ನೇ ಪರಮಪತಿ ಮತ್ತು ಪರಮಗುರು ಎಂದು ತಿಳಿಯಬೇಕು. ರಾತ್ರಿ ಕೋಣೆಯಲ್ಲಿ ಒಬ್ಬಳೇ ಅಥವಾ ಅನ್ಯಸ್ತ್ರೀಯರಿದ್ದರೆ ಅವರೊಡನೆ ಮಲಗಬೇಕು.

ಮನೆಯಲ್ಲಿ ಶಿಶುಗಳಿದ್ದಲ್ಲಿ ಒಬ್ಬಿಬ್ಬರನ್ನು ತನ್ನ ಬಳಿ ಮಲಗಿಸಿಕೊಳ್ಳಬೇಕು.

---

*ಹಾರೀತ ಸಂಹಿತೆಯಲ್ಲಿ ಹೇಳಿದೆ-

**ಕೇಶರಂಜನತಾಂಬೂಲಗಂಧಪುಷ್ಪಾದಿಸೇವನಮ್ ।**

**ಭೂಷಣಂ ರಂಗವಸ್ತ್ರಂ ಚ ಕಾಂಸ್ಯಪಾತ್ರೇಷು ಭೋಜನಮ್ ॥**

ಕೇಶ-ಶೃಂಗಾರ, ತಾಂಬೂಲ ಚರ್ವಣ, ಗಂಧ ಪುಷ್ಪಗಳ ಸ್ವೀಕಾರ, ಆಭೂಷಣ-ಧಾರಣೆ, ಬಣ್ಣಬಣ್ಣದ ವಸ್ತ್ರಗಳನ್ನು ಧರಿಸುವುದು ಮತ್ತು ಕಂಚಿನ ಪಾತ್ರೆಯಲ್ಲಿ ಭೋಜನಮಾಡುವುದು-ವಿಧವೆಯು ಇವುಗಳನ್ನು ತ್ಯಜಿಸಬೇಕು.

ಶೃಂಗಾರ ಮಾಡಿಕೊಳ್ಳದಿರಲಿ. ನಿತ್ಯ ಭಗವನ್ನಾಮ ಜಪ, ಇಷ್ಟ ದೇವರ ಪೂಜೆ, ಗೀತಾ-ರಾಮಾಯಣಾದಿ ಪುಣ್ಯಗ್ರಂಥಗಳ ಪಾರಾಯಣವನ್ನು ನಿಯಮವಾಗಿಸಿಕೊಳ್ಳಲಿ. ಸದ್ಗ್ರಂಥಗಳ ಸ್ವಾಧ್ಯಾಯ ಮಾಡಲಿ ಮತ್ತು ಸಾಧ್ಯವಾದಲ್ಲಿ ಹಾಗೂ ಶರೀರದ ಸ್ಥಿತಿಯು ಅನುಕೂಲವಾಗಿದ್ದಲ್ಲಿ ನಡು-ನಡುವೆ ಆಗಾಗ ಚಾಂದ್ರಾಯಣಾದಿ ವ್ರತವನ್ನು ಸಹ ಮಾಡಬೇಕು. ಶಾರೀರಿಕ, ವಾಚಿಕ ಮತ್ತು ಮಾನಸಿಕ ತಪಗಳನ್ನು ಆಚರಿಸಬೇಕು.* ಸಂನ್ಯಾಸಿ ಹಾಗೂ ಬ್ರಹ್ಮಚಾರಿಗೆ ಸಾತ್ತ್ವಿಕ ಭೋಜನ, ಶಾಸ್ತ್ರದಲ್ಲಿ ವರ್ಣಿಸಲಾಗಿರುವಂತೆ ಮನಸ್ಸು ಮತ್ತು ವಾಕ್ ಸಂಯಮ ಮತ್ತು ಸದಾಚಾರದ ನಿಯಮಗಳು - ಇವೆಲ್ಲವನ್ನೂ ವಿಧವಾ ದೇವಿಯು ಪಾಲಿಸಬೇಕು. ಈ ಪ್ರಕಾರವಾಗಿ ಸಂಯಮದಿಂದ ಕೂಡಿದ ಜೀವನವನ್ನನುಸರಿಸಿ ಭಗವದ್ಭಜನೆ, ಶಾಸ್ತ್ರಚರ್ಚೆ, ಹರಿಕಥೆ, ವೈರಾಗ್ಯ, ತ್ಯಾಗ ಹಾಗೂ ಪಾತಿವ್ರತ್ಯದ ಮಹಿಮೆಯನ್ನು ತಿಳಿಸುವ ಗ್ರಂಥಗಳ ಪಠನ ಮತ್ತು ಮನನ, ಭಗವಂತನ ವಿಗ್ರಹಾರಾಧನೆ ಮೊದಲಾದವುಗಳನ್ನು ಮಾಡುವುದರಿಂದ ವಿಧವೆಯ ಜೀವನ ಸಾಧನಾಮಯವಾಗುವುದು. ಅವಳಿಗೆ ಇಲ್ಲಿ ಸುಖ-ಶಾಂತಿ ದೊರಕುವುದು ಮತ್ತು ಕೊನೆಯಲ್ಲಿ ಮುಕ್ತಿಲಾಭವುಂಟಾಗುವುದು.

೬. ಬಾಲ-ವಿವಾಹ ಮತ್ತು ವೃದ್ಧ-ವಿವಾಹ ಪದ್ಧತಿಗಳನ್ನು ನಿಲ್ಲಿಸಿ ಬಿಡಬೇಕು. ಹುಡುಗಿಯರ ವಿವಾಹವನ್ನು ಬಹಳ ಚಿಕ್ಕವಯಸ್ಸಿನಲ್ಲಿ ಮಾಡದೆ

---

* ಶ್ರೀಮದ್ಭಗವದ್ಗೀತೆಯ ಹದಿನೇಳನೇ ಅಧ್ಯಾಯದಲ್ಲಿ ತಿಳಿಸಲಾಗಿದೆ-

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥**
**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥**
**ಮನಃ ಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೆತತ್ತಪೋ ಮಾನಸಮುಚ್ಯತೇ ॥**

(೧೭/೧೪-೧೬)

ದೇವತಾ, ಬ್ರಾಹ್ಮಣ, ಗುರುಜನ ಮತ್ತು ಜ್ಞಾನಿ ಪುರುಷರ ಪೂಜೆ, ಪವಿತ್ರತೆ, ಸರಳತೆ, ಬ್ರಹ್ಮಚರ್ಯೆ ಮತ್ತು ಅಹಿಂಸೆ- ಇದು ಶರೀರ -ಸಂಬಂಧವಾದ ತಪಸ್ಸೆಂದು ಹೇಳಲಾಗುತ್ತದೆ. ಉದ್ವೇಗವನ್ನುಂಟುಮಾಡದ, ಪ್ರಿಯ ಮತ್ತು ಹಿತಕರವಾದ ಯಥಾರ್ಥ ಭಾಷಣ ಹಾಗೂ ಸ್ವಾಧ್ಯಾಯದ ಅಭ್ಯಾಸ- ಇದು ವಾಣಿಸಂಬಂಧವಾದ ತಪವೆನಿಸಿಕೊಳ್ಳುತ್ತದೆ. ಮನಸ್ಸಿನ ಪ್ರಸನ್ನತೆ, ಸೌಮ್ಯತೆ, ಈಶ್ವರನ ಮನನ, ಮನೋನಿಗ್ರಹ ಮತ್ತು ಅಂತಃಕರಣದ ಚೆನ್ನಾದ ಶುದ್ಧಿ- ಇದು ಮಾನಸ ಸಂಬಂಧೀ ತಪವೆನಿಸಿಕೊಳ್ಳುತ್ತದೆ.

ಆಯಾ ಪ್ರಾಂತ್ಯದ ಸ್ಥಿತಿಗಳಿಗನುಗುಣವಾಗಿ ರಜಸ್ವಲೆಯಾಗುವುದಕ್ಕೆ ಮುಂಚೆ ಮಾಡಬೇಕು ಮತ್ತು ಹುಡುಗಿಯರಲ್ಲಿ ಅವಶ್ಯವಾಗಿ ಧಾರ್ಮಿಕ ಶಿಕ್ಷಣದ ಪ್ರಚಾರ ಆಗಬೇಕು. ಅದರಿಂದ ಸತೀತ್ವದ ಗೌರವ ಅವರಲ್ಲಿ ಜಾಗೃತವಾಗಿ ಅಖಂಡ ವಾಗಿರುವುದು.

೭. ವಿಧವೆಯರ ಧನ-ಸಂಪತ್ತನ್ನು ದೇವ ಸಂಪತ್ತೆಂದು ಭಾವಿಸಿ ಪ್ರಾಮಾಣಿಕತೆಯಿಂದ ಅದನ್ನು ಸಂರಕ್ಷಿಸಬೇಕು. ವಿಧವೆಯ ಹಕ್ಕನ್ನು ಕಸಿದುಕೊಳ್ಳುವುದು ಹಾಗೂ ಅವಳ ಸಂಪತ್ತನ್ನು ಮನಬಂದಂತೆ ಉಪಯೋಗಿಸುವುದು ಮತ್ತು ಅಪಹರಿಸುವುದು ಮಹಾಪಾಪವಾಗಿದೆ.

ವಿಧವಾ ನಾರಿಯ ಸಂಬಂಧವಾಗಿ ಮನು ಮಹಾರಾಜರು ಹೇಳುತ್ತಾರೆ-

**ಕಾಮಂ ತು ಕ್ಷಪಯೇದ್ ದೇಹಂ ಪುಷ್ಪಮೂಲಫಲೈಃ ಶುಭೈಃ ।**
**ನ ತು ನಾಮಾಪಿ ಗೃಹ್ಣೀಯಾತ್ ಪತ್ಯೌ ಪ್ರೇತೇ ಪರಸ್ಯ ತು ॥**
**ಆಸೀತಾಮರಣಾತ್ ಕ್ಷಾಂತಾ ನಿಯತಾ ಬ್ರಹ್ಮಚಾರಿಣೀ ।**
**ಯೋ ಧರ್ಮ ಏಕಪತ್ನೀನಾಂ ಕಾಂಕ್ಷಂತೀ ತಮನುತ್ತಮಮ್ ॥**
**ಮೃತೇ ಭರ್ತರಿ ಸಾಧ್ವೀ ಸ್ತ್ರೀ ಬ್ರಹ್ಮಚರ್ಯೇ ವ್ಯವಸ್ಥಿತಾ ।**
**ಸ್ವರ್ಗಂ ಗಚ್ಛತ್ಯಪುತ್ರಾಪಿ ಯಥಾ ತೇ ಬ್ರಹ್ಮಚಾರಿಣಃ ॥**

(ಮನು. ೫/೧೫೭-೧೫೮.೧೬೦)

ಪತಿಯು ಮರಣ ಹೊಂದಿದ ತರುವಾಯ ಪವಿತ್ರವಾದ ಪುಷ್ಪ ಫಲ ಮತ್ತು ಕಂದ ಮೂಲಾದಿ ಅಲ್ಪಾಹಾರದ ಮುಖಾಂತರ ಶರೀರವನ್ನು ಕ್ಷೀಣಿಸಬೇಕು, ಆದರೆ ವ್ಯಭಿಚಾರ ಬುದ್ಧಿಯಿಂದ ಪರಪುರುಷನ ಹೆಸರನ್ನೂ ಹೇಳಬಾರದು. ಸಾಧ್ವೀ ಸ್ತ್ರೀಯು ಏಕಮಾತ್ರ ಪತಿಪರಾಯಣೆಯಾಗಿ (ಸಾವಿತ್ರಿ ಮೊದಲಾದವರಂತೆ) ನಾರಿಯರ ಅತ್ಯುತ್ತಮವಾದ ಪಾತಿವ್ರತ್ಯ ಧರ್ಮವನ್ನು ಬಯಸುವವಳಾಗಿ ವಿಧವೆಯಾದ ಬಳಿಕ ಮನಸ್ಸಿನ ಕಾಮನೆಗಳನ್ನು ತ್ಯಜಿಸಿ ಮೃತ್ಯುಕಾಲ ಪರ್ಯಂತ ನಿಯಮಗಳನ್ನು ಪಾಲಿಸುತ್ತ ಬ್ರಹ್ಮಚರ್ಯವನ್ನು ಪಾಲಿಸುತ್ತಾಳೋ, ಅವಳು ಪುತ್ರ ಹೀನಳಾದರೂ ಬ್ರಹ್ಮಚಾರಿಗಳಂತೆ ದಿವ್ಯ ಲೋಕವನ್ನು ಸೇರುವಳು.

ಈ ಪ್ರಕಾರವಾಗಿ ತನ್ನ ಧರ್ಮದ ಪಾಲನೆ ಮಾಡದೆ ಕ್ಷಣಿಕವಾದ ವಿಷಯ ಸುಖದ ಲೋಭದಿಂದ ತನ್ನನ್ನು ಇಂದ್ರಿಯಗಳ ಗುಲಾಮಳನ್ನಾಗಿ ಯಾವ ಸ್ತ್ರೀ

ಮಾಡಿಕೊಳ್ಳುತ್ತಾಳೋ ಅವಳ ಭವಿಷ್ಯ ಕೆಟ್ಟುಹೋಗುತ್ತದೆ, ಮತ್ತವಳು ಮಹತ್ತರವಾದ ದುಃಖವನ್ನು ಅನುಭವಿಸಬೇಕಾಗುತ್ತದೆ. ಅವಳ ಜೀವನ ಇಲ್ಲಂತೂ ದುಃಖಮಯವೇ ಆಗಿಬಿಡುತ್ತದೆ, ಪರಲೋಕದಲ್ಲಿಯೂ ಅವಳು ಮಹತ್ತರ ಕ್ಲೇಶಗಳ ಅನುಭವಿಸಬೇಕಾಗುತ್ತದೆ. ಯಾರು ಪವಿತ್ರ ವಿಧವೆಯರನ್ನು ಸತೀಧರ್ಮದಿಂದ ಚ್ಯುತಗೊಳಿಸಿ ಪಾಪದ ಕೆಸರಿನಲ್ಲಿ ಬೀಳಿಸುತ್ತಾರೋ ಮತ್ತು ಆ ಬಡಪಾಯಿ ಅಸಹಾಯ ದೇವಿಯರನ್ನು ದುಃಖದ ಜ್ವಾಲೆಯಲ್ಲಿ ಉರಿಯಲು ಬಾಧ್ಯರಾಗುತ್ತಾರೋ ಅವರು ಮಹಾಪಾಪಿಗಳು.

❑❑

## ೨೪. ಭಾರತೀಯ ನಾರಿ ಮತ್ತು ರಾಜ್ಯಶಾಸನ

ಭಾರತೀಯ ಸಾಹಿತ್ಯದ ಪರಿಶೀಲನೆ ಮಾಡುವುದರಿಂದ ಬಹುಶಃ ರಾಜಕುಲಕ್ಕೆ ಸೇರಿದ ಸ್ತ್ರೀಯರು ಜ್ಞಾನ-ವಿಜ್ಞಾನ ಮತ್ತು ಲಲಿತ-ಕಲೆಗಳಲ್ಲಿ ಪ್ರವೀಣರಾಗುವುದರ ಜೊತೆಗೆ ರಾಜನೀತಿ ಮತ್ತು ಯುದ್ಧಕಲೆಯ ಶಿಕ್ಷಣವನ್ನು ಪಡೆಯುತ್ತಿದ್ದರೆಂದು ತಿಳಿದುಬರುತ್ತದೆ. ಕಾಳಿದಾಸನ ಅಭಿಪ್ರಾಯದಂತೆ ನಾರಿಯು ಗೃಹಿಣಿಯಾಗುವುದರ ಜೊತೆಗೆ ಪತಿಯ ಸಚಿವೆಯೂ ಆಗಿದ್ದಳು. ಆ ಸಚಿವ ಕರ್ಮವು ಅವಳಿಗೆ ಎಲ್ಲ ಬಗೆಯ ಅವಶ್ಯಕ ಶಿಕ್ಷಣ ಪ್ರಾಪ್ತವಾದಾಗ ಮಾತ್ರ ಆಗಬಲ್ಲದು. ಭಾರತೀಯ ನಾರಿಯು ತನ್ನ ಪಾತಿವ್ರತ್ಯವನ್ನು ಅಖಂಡವಾಗಿರಿಸಿಕೊಂಡೇ ಬೇರೆ ವಿಷಯಗಳಲ್ಲಿ ಯಥಾಸಾಧ್ಯ ಪತಿಗೆ ಸಹಾಯ ಮಾಡುತ್ತಿದ್ದಳು. ಅವಳಲ್ಲಿ ಪತಿಗಿಂತ ಮುಂದುವರೆದು ತನ್ನ ಶಕ್ತಿಯನ್ನು ತೋರಿಸಬೇಕೆನ್ನುವ ಸ್ಪರ್ಧೆ ಇರಲಿಲ್ಲ, ಅವಳ ಸಂಪೂರ್ಣಜ್ಞಾನ ಪತಿಯ ಕಾರ್ಯಗಳಲ್ಲಿ ಸಹಯೋಗ ಕೊಡುವುದಕ್ಕಾಗಿ ಮಾತ್ರವೇ ಇತ್ತು. ಈ ಪ್ರಕಾರವಾಗಿ ಯಾವ ರಾಜನ ಶಾಸನ ಬಹು ಉತ್ತಮ ಮತ್ತು ನ್ಯಾಯಕ್ಕೆ ಅನುಕೂಲವಾಗಿರುತ್ತಿತ್ತೋ ಅದರಲ್ಲಿ, ಆ ಶಾಸನವ್ಯವಸ್ಥೆಯಲ್ಲಿ ರಾಜಮಹಿಷಿಯ ಸುಂದರವಾದ ಪರಾಮರ್ಶೆಯು ಉಪಯೋಗವಾಗುತ್ತಿತ್ತು. ಎಷ್ಟೋ ಸ್ತ್ರೀಯರು ತನ್ನ ಸಹಯೋಗದಿಂದ ಪತಿಯ ಅಯೋಗ್ಯತೆಯನ್ನು ದೂರಮಾಡಿ ಅವನನ್ನು ಯೋಗ್ಯ ಶಾಸಕನನ್ನಾಗಿ ಮಾಡುತ್ತಿದ್ದರು. ರಾಣಿ ಚೂಡಾಲಳ ಜೀವನವು ಇದಕ್ಕೆ ಆದರ್ಶವಾಗಿದೆ. ಭಾರತೀಯ ನಾರಿಯರಿಗೆ ದೇವಾಂಗನೆಯರಿಂದ ಈ ಪ್ರೇರಣೆ ಪ್ರಾಪ್ತವಾಗುತ್ತಿತ್ತು. ದುರ್ಗಾದೇವಿ ಹಾಗೂ ಇಂದ್ರ ವರುಣ ಮೊದಲಾದವರ ಪತ್ನಿಯರಲ್ಲಿ ನಾರೀಜನೋಚಿತವಾದ ಗುಣಗಳ ಜೊತೆಜೊತೆಗೆ

ಯುದ್ಧ ಮತ್ತು ಶಾಸನ ಮಾಡುವ ಪೂರ್ಣ ಕ್ಷಮತೆಯೂ ಕೂಡ ಭಾರತೀಯ ಸ್ತ್ರೀಯರಿಗೆ ಸದಾ ಹಾಗೆಯೇ ಆಗುವಂತೆ ಪ್ರೋತ್ಸಾಹ ನೀಡುತ್ತಿದೆ. ಮಹಾರಾಣಿ ಕೈಕೇಯಿಯು ಮಹಾರಾಜ ದಶರಥನೊಡನೆ ಯುದ್ಧಕ್ಕೆ ಹೋಗಿ ಯಾವ ಸಾಹಸ ಮತ್ತು ಧೈರ್ಯದ ಪರಿಚಯವನ್ನು ಮಾಡಿಕೊಟ್ಟಳೋ ಅದರಿಂದ ರಾಜನಿಗೆ ಕೇವಲ ವಿಜಯವೇ ಸಿಕ್ಕಿತೆಂದಲ್ಲ ಸಮಸ್ತ ನಾರೀಜಾತಿಯ ಗೌರವವೂ ಹೆಚ್ಚಿತ್ತು.

ಮಹಾಭಾರತ ಯುದ್ಧದಲ್ಲಿ ಮಡಿದ ಅಪುತ್ರವಂತ ರಾಜರ ರಾಜ್ಯಗಳು ಅವರ ಪುತ್ರಿಯರಿಗೆ ಕೊಡಲ್ಪಡಲಿ ಎನ್ನುವ ಆದೇಶವನ್ನು ಭೀಷ್ಮ ಪಿತಾಮಹನು ಧರ್ಮರಾಜಾ ಯುಧಿಷ್ಠಿನಿಗೆ ಕೊಟ್ಟಿದ್ದನೆಂದು ಹೇಳುತ್ತಾರೆ. ಒಂಭತ್ತನೇ ಶತಮಾನದಲ್ಲಿ ಉತ್ಕಲದ ರಾಜ ಲಲಿತಾಭರಣದೇವನ ದೇಹಾಂತವಾದಾಗ ಅವನ ಮಹಾರಾಣಿ ತ್ರಿಭುವನದೇವಿ ರಾಜ್ಯಭಾರವನ್ನು ಯೋಗ್ಯತೆಯಿಂದ ನಿರ್ವಹಿಸಿದಳು. ಮೊದಲನೇ ಚಂದ್ರಗುಪ್ತನು ತನ್ನ ಲಿಚ್ಛಿವಿ ವಂಶದ ಮಹಾರಾಣಿ ಕುಮಾರದೇವಿಯ ಜೊತೆಯಲ್ಲಿ ರಾಜ್ಯದ ಶಾಸನ ಮಾಡುತ್ತಿದ್ದನು. ಅವನ ನಾಣ್ಯಗಳ ಮೇಲೆ ಇಬ್ಬರ ಹೆಸರುಗಳನ್ನು ನೋಡಬಹುದಾಗಿದೆ. ಕೌಶಾಂಬಿಯ ರಾಜನಾದ ಉದಯನನು ಸೆರೆಯಾದಾಗ ಅವನ ತಾಯಿಯೇ ರಾಜ್ಯಪಾಲನೆ ಮಾಡಿದ್ದಳು. ಮಸಗ್ ದ ನರೇಶನು ಸಮರಭೂಮಿಯಲ್ಲಿ ಸಾವನ್ನಪ್ಪಿದಾಗ ಅವನ ರಾಣಿಯು ಸೇನೆಯ ಸಂಚಾಲನೆ ಮಾಡಿ ಯುದ್ಧದಲ್ಲಿ ಆಕ್ರಮಣಕಾರಿಯಾದ ಸಿಕಂದರನನ್ನು ಎದುರಿಸಿದ್ದಳು. ಕ್ರಿ.ಪೂ. ಇನ್ನೂರು ವರ್ಷಗಳ ಹಿಂದೆ ದಕ್ಷಿಣದ ಶಾತವಾಹನ ಸಾಮ್ರಾಜ್ಯದ ರಾಣಿ ನಯನಿಕೆಯು ತನ್ನ ಬಾಲಕ ವಯಸ್ಕನಾಗುವವರೆಗೆ ತಾನೇ ರಾಜ್ಯದ ಮೇಲ್ವಿಚಾರಣೆ ಮತ್ತು ಶಾಸನವನ್ನು ನಿರ್ವಹಿಸಿದಳು. ನಾಲ್ಕನೇ ಶತಮಾನದಲ್ಲಿ ವಿಧವೆ ರಾಣಿ ಪ್ರಭಾವತೀ ಗುಪ್ತಳು ಹತ್ತು ವರ್ಷಗಳವರೆಗೆ ತನ್ನ ರಾಜ್ಯವನ್ನು ರಕ್ಷಿಸಿದ್ದಳು. ಆಗ  ರಾಜಕುಮಾರನು ಇನ್ನೂ ವಯಸ್ಸಿಗೆ ಬಂದಿರಲಿಲ್ಲ. ಕಾಶ್ಮೀರದ ರಾಣಿ ಸುಗಂಧೆ ಮತ್ತು ದಿದ್ದಾ ವೈಧವ್ಯ-ದೆಶೆಯಲ್ಲಿ ಅನೇಕ ವರ್ಷಗಳವರೆಗೆ ತಮ್ಮ ರಾಜ್ಯದ ಶಾಸನ ಮಾಡಿದ್ದರು. ಸನ್ ೧೧೯೩ನೇ ಇಸವಿಯಲ್ಲಿ ಪೃಥ್ವೀರಾಜನ ಜೊತೆ ಸಮರಸಿಂಹ ಯುದ್ಧದಲ್ಲಿ ಹತನಾದಾಗ ಕರ್ಮದೇವಿಯು ಮೇವಾಡದ ಶಾಸನ ಸೂತ್ರವನ್ನು ವಹಿಸಿಕೊಂಡಳು ಮತ್ತು ಕುತುಬುದ್ದೀನನು ಆಕ್ರಮಣ ಮಾಡಿದಾಗ  ಬಹಳ ಯೋಗ್ಯವಾಗಿ ಸೇನೆಯ ಸಂಚಾಲನೆ  ಮಾಡುತ್ತ ಅವನನ್ನು ಎದುರಿಸಿದ್ದಳು.

ಗುಜರಾತಿನ ಸುಲ್ತಾನನಾದ ಬಹಾದುರ್‌ಶಾಹನು ಚಿತ್ತೂರಿನ ಮೇಲೆ ಆಕ್ರಮಣ ಮಾಡಿದಾಗ, ರಾಣಾಸಾಂಗನು ಹತನಾದನು. ಆಗ ಅವನ ಪ್ರಥಮ ವಿಧವೆ ರಾಣಿ ಕರ್ಣವತಿಯು ಭಯಂಕರವಾದ ಯುದ್ಧಮಾಡಿದಳು. ರಾಣಾಸಾಂಗಾನ ದ್ವಿತೀಯ ಪತ್ನಿ ಜವಾಹರ್ ಬಾಯಿಯು ಸಹ ದುರ್ಗದ ರಕ್ಷಣೆ ಮಾಡುತ್ತ ವೀರಗತಿ ಪಡೆದಳು.

ಮರಾಠರ ಇತಿಹಾಸದಿಂದ ಹೀಗೆ ಸಿದ್ಧವಾಗುತ್ತದೆ-ಕೊಲ್ಹಾಪುರದ ರಾಣಿ ತಾರಾಬಾಯಿ, ಇಚಲಕರಂಜಿಯ ಅನುಬಾಯೀ, ಇಂದೂರಿನ ಅಹಲ್ಯಾಬಾಯಿ ಹಾಗೂ ಝೂನ್ಸಿಯ ವಿಖ್ಯಾತ ವೀರಾಂಗನೆ ರಾಣಿ ಲಕ್ಷ್ಮೀಬಾಯಿಯು ಬಹಳ ಕುಶಲತೆ, ನೀತಿ ಮತ್ತು ಪರಾಕ್ರಮದೊಡನೆ ರಾಜ್ಯಶಾಸನ ಮತ್ತು ಯುದ್ಧವನ್ನು ಮಾಡಿದ್ದರು. ತಾರಾಬಾಯಿಯು ಕೂಟ ನೀತಿಜ್ಞನಾದ ಔರಂಗಜೇಬನನ್ನು ಹಿಮ್ಮೆಟ್ಟಿಸಿದ್ದಳು. ಅನುಬಾಯಿಯು ಅನೇಕ ಸಲ ಶತ್ರುಗಳನ್ನು ಸೋಲಿಸಿದ್ದಳು ಮತ್ತು ಲಕ್ಷ್ಮೀಬಾಯಿಯಾದರೋ ಸಂಹಾರಕಾರಿಣಿ ದುರ್ಗೆಯಂತೆ ಶತ್ರು ಸೇನೆಯನ್ನು ಸಂಹರಿಸಿದ್ದಳು. ಅವಳು ಇಂಗ್ಲೀಷರ ಸಾಹಸವನ್ನು ಮುರಿದಿದ್ದಳು. ದಕ್ಷಿಣ ಭಾರತದ ಅನೇಕ ಶಿಲಾಲೇಖನಗಳಿಂದ ನಾರಿಯರು ಶಾಸನ ಕಾರ್ಯದಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸುತ್ತಿದ್ದರೆಂದು ತಿಳಿದುಬರುತ್ತದೆ. ಏಳನೇ ಶತಮಾನದ ಮಧ್ಯಭಾಗದಲ್ಲಿ ಚಾಲುಕ್ಯವಂಶದ ರಾಜನಾದ ಆದಿತ್ಯನ ಮಹಿಷಿ ವಿಜಯ ಮದಾರಿಕೆಯು ಮುಂಬಯಿಯ ದಕ್ಷಿಣದಲ್ಲಿ ರಾಜ್ಯಭಾರ ಮಾಡುತ್ತಿದ್ದಳು. ಅವಳ ಒಂದು ಘೋಷಣಾ ಪತ್ರವೂ ಪ್ರಾಪ್ತವಾಗಿದೆ. ೭೮೬ನೇ ಇಸವಿಯಲ್ಲಿ ರಾಷ್ಟ್ರಕೂಟದ ರಾಜನಾದ ಧ್ರುವನ ರಾಣೀ ಶೀಲಮಹಾದೇವಿಯು ರಾಜ್ಯಸಿಂಹಾಸನದ ಮೇಲೆ ಆರೂಢಳಾದ ನಂತರ ಒಂದು ಭೂ-ಖಂಡವನ್ನು ಪುರಸ್ಕಾರರೂಪವಾಗಿ ಅರ್ಪಿಸಿದ್ದಳು. ೧೦೫೩ನೇ ಇಸವಿಯಲ್ಲಿ ಚಾಲುಕ್ಯದ ರಾಜಾ ಸೋಮೇಶ್ವರನ ಮಹಾರಾಣೀ ಮೈಲಾದೇವೀ 'ಬನವಾಸಿ' ಪ್ರಾಂತವನ್ನು ಆಳುತ್ತಿದ್ದಳು. ಸೋಮೇಶ್ವರನ ಇನ್ನೊಂದು ರಾಣೀ ಕೇಟಲಾ ದೇವೀ ಪೋನವದ ಅಗ್ರಹಾರದ ಶಾಸಕಿಯಾಗಿದ್ದಳು. ಮೂರನೇ ಜಯಸಿಂಹನ ಹಿರಿಯಕ್ಕೆ ಅಕ್ಕಾದೇವಿಯು ೧೦೨೨ನೇ ಇಸವಿಯಲ್ಲಿ ಕಿಸುಕದ ಜಿಲ್ಲೆಯಲ್ಲಿ ರಾಜ್ಯಭಾರ ಮಾಡುತ್ತಿದ್ದಳು. ೧೦೭೯ನೇ ಇಸವಿಯಲ್ಲಿ ವಿಜಯಾದಿತ್ಯನ ಸೋದರಿ ಕುಂಕುಮ ದೇವಿಯು ಕರ್ನಾಟಕದ ಧಾರವಾಡ ಜಿಲ್ಲೆಯ ಅಧಿಕಾಂಶ ಭಾಗವನ್ನು ಆಳುತ್ತಿದ್ದಳು. ಆರನೇ ವಿಕ್ರಮಾದಿತ್ಯನ ಪ್ರಧಾನ ಮಹಾರಾಣಿ ಲಕ್ಷ್ಮೀದೇವಿಯು ಕೈಯಲ್ಲಿ ೧೮ ಧರ್ಮಾರ್ಥ ದತ್ತಿ ಸಂಸ್ಥೆಗಳ ಶಾಸನಭಾರವಿತ್ತು. ೧೩ನೇ ಶತಮಾನದಲ್ಲಿ ಪ್ರಸಿದ್ಧ

ಯಾತ್ರಿಯಾದ ಮಾರ್ಕೋಪೋಲೋ ಗುಂಟೂರು ಜಿಲ್ಲೆಯಲ್ಲಿ ಓರ್ವ ರಾಣಿಯು ರಾಜ್ಯಭಾರವನ್ನು ನೋಡಿದ್ದನು.

ಋಗ್ವೇದದಲ್ಲಿ ನಾರಿಗೆ ಗೃಹ, ಅತ್ತೆ-ಮಾವ, ಪತ್ನಿ-ನಾದಿನಿ ಮತ್ತು ಮೈದುನನ ಸಾಮ್ರಾಜ್ಞಿಯಾಗೆಂದು ಆಶೀರ್ವಾದವನ್ನು ಮಾಡಲಾಗಿದೆ. ಈ ಸಾಮ್ರಾಜ್ಯ ಶಾಸನಕ್ಕಾಗಿ ಅಲ್ಲ, ಪ್ರೇಮ ಮತ್ತು ಸದ್‌ವ್ಯವಹಾರಕ್ಕಾಗಿದೆ. ಇದರ ಮೂಲಕ ನಾರಿಯು ಸಾಮ್ರಾಟನ ಹೃದಯದ ಸಾಮ್ರಾಜ್ಞಿಯೂ ಆಗುತ್ತಾಳೆ.

❑❑

## ೨೫. ವೃದ್ಧೆಯಾದ ಮಾತೆಯ ಉಪದೇಶ

ತಾಯಿಯ ವಯಸ್ಸು ಎಪ್ಪತ್ತು ವರ್ಷಗಳಿಗೆ ಕಡಿಮೆಯಿಲ್ಲ. ಯಾವಾಗ ನೋಡಿದರೂ ಅವರು ಕಾರ್ಯನಿರತರಾಗಿರುತ್ತಾರೆ. ಯಾರಾದರೂ ಮನೆಗೆ ಹೋದಲ್ಲಿ ಒಮ್ಮೆ ಸ್ನೇಹದಿಂದ ತುಂಬಿದ ದೃಷ್ಟಿಯಿಂದ ನೋಡಿ ಮುಗುಳ್ನಗುತ್ತಾರೆ. ಆಗಾಗ ಏನು ಬಂದದ್ದು ಎಂದು ಕೇಳುತ್ತಾರೆ. ಪ್ರಾತಃಕಾಲ ಒಂದು ಮೈಲಿ ದೂರಹೋಗಿ ಗಂಗಾ ಸ್ನಾನವನ್ನು ಮಾಡಿ ಬರುತ್ತಾರೆ. ಪೂಜೆಯ ದಿನಗಳಲ್ಲಿ ಭಗವಂತನ ಪೂಜೆಗೆ ಪ್ರಸಾದವನ್ನೂ ತಮ್ಮ ಕೈಯಾರೆ ತಯಾರಿಸುತ್ತಾರೆ. ಶಿವರಾತ್ರಿಯ ದಿನ ಇಪ್ಪತ್ನಾಲ್ಕು ಘಂಟೆ ಒಂದೆಸಮನೆ ಕೆಲಸಮಾಡುತ್ತಿರುವುದನ್ನು ನಾನು ನನ್ನ ಕಣ್ಣುಗಳಿಂದಲೇ ನೋಡಿದ್ದೇನೆ. ಮಧ್ಯಾಹ್ನದ ನಂತರ ಹಳ್ಳಿಯ ಕೆಲವು ಸ್ತ್ರೀಯರು ಅವರ ಬಳಿ ಬರುತ್ತಾರೆ. ಅವರಿಗೆ ಹಿಂದಿ ಬಾರದಿದ್ದರೂ ತಮ್ಮ ಮಾತೃಭಾಷೆಯಲ್ಲಿ ಉತ್ತರಕೊಡುತ್ತಾರೆ. ನಾನು ಅವರ ವಿಳಾಸವನ್ನು ತಿಳಿಸುವುದಿಲ್ಲ-ಆದರೆ ಅವರ ಮಾತುಗಳನ್ನೇ ಬರೆಯುವೆನು.

**ಪ್ರಶ್ನೆ :** ನಾವು ಸ್ತ್ರೀಯರು ಯಾರನ್ನು ಪೂಜಿಸಬೇಕು?

**ಉತ್ತರ :** ಏಕಮಾತ್ರ ಭಗವಂತನೇ ಪೂಜಿಸಲು ಯೋಗ್ಯನಾದವನು.

**ಪ್ರಶ್ನೆ :** ಭಗವಂತನ ಯಾವ ವಿಗ್ರಹವನ್ನು ಪೂಜಿಸಬೇಕು?

**ಉತ್ತರ :** ಸ್ತ್ರೀಯರಿಗಾದರೋ ಭಗವಂತನ ಬೇರೆಯದೇ ಪ್ರಕಾರದ ಮೂರ್ತಿ ನಿಶ್ಚಯವಾಗಿದೆ. ಬೇರೆ ಜನರಿಗೆ ವೈದಿಕ ಮತ್ತು ಪೌರಾಣಿಕ ಮಂತ್ರಗಳ

ಮೂಲಕವಿಧವಿಧವಾದ ಮೂರ್ತಿಗಳಲ್ಲಿ ಭಗವಂತನ ಪ್ರತಿಷ್ಠಾಪನೆ- ಅಂದರೆ ಸ್ಥಾಪನೆಯಾಗುವಂತೆ, ಸ್ತ್ರೀಯರಿಗೆ ವಿವಾಹಕಾಲದಲ್ಲಿ ವರನಲ್ಲಿ ಭಗವಂತನ ಪ್ರತಿಷ್ಠಾಪನೆಯಾಗುತ್ತದೆ. ಕನ್ಯೆಯ ಸಮರ್ಪಣೆ ವರ ರೂಪಿಯಾದ ವಿಷ್ಣುವಿಗೆ ಮಾಡಲಾಗುತ್ತದೆ. **'ವರೋಽಸೌ ವಿಷ್ಣುರೂಪೇಣ ಪ್ರತಿಗೃಹ್ಣಾತ್ವಯಂ ವಿಧಿಃ।'** ಆದ್ದರಿಂದ ವಿವಾಹಿತ ಸ್ತ್ರೀಯರಿಗೆ ತಮ್ಮ ಪತಿ ದೇವನೇ ಭಗವಂತನಾಗಿದ್ದಾನೆ. ಭಗವಂತನ ಇದೇ ಮೂರ್ತಿಯ ಉಪಾಸನೆ ಮಾಡುವುದು ಸ್ತ್ರೀಯರಿಗೆ ಧರ್ಮವಾಗಿದೆ.

**ಪ್ರಶ್ನೆ :** ಹಾಗಾದರೆ ಸ್ತ್ರೀಯರು ಭಗವಂತನ ಬೇರೆ ಮೂರ್ತಿಯನ್ನು ಪೂಜಿಸಬಾರದೇನು?

**ಉತ್ತರ :** ಬೇರೆ ಮೂರ್ತಿಗಳ ಪೂಜೆ ನಿಷಿದ್ಧವಲ್ಲ. ಆದರೆ ಯಾವ ಯಾವದೋ ಮೂರ್ತಿಗಳ ಪೂಜೆಯನ್ನೂ ಸಹ ಪತಿದೇವನ ಪ್ರಸನ್ನತೆ ಮತ್ತು ಸುಖಕ್ಕಾಗಿಯೇ ಮಾಡಬೇಕು. ಪತಿದೇವನ ಚರಣಗಳಲ್ಲಿ ನನ್ನ ಪ್ರೇಮವು ವಿಶುದ್ಧವಾಗಿರಲೆಂದು ಆ ಭಗವಂತನ ಮೂರ್ತಿಗಳಲ್ಲಿ ಪ್ರಾರ್ಥಿಸಬೇಕು. ಪತಿದೇವನ ಅನುಮತಿಯು ಯಾವ ದೇವತೆಯ ಪರವಾಗಿರುವುದೋ ಅದೇ ದೇವತೆಯ ಪೂಜೆಯಾಗಬೇಕು. ಆದ್ದರಿಂದ ಪತಿಪೂಜೆಯೇ ಸ್ತ್ರೀಯರ ಪ್ರಧಾನ ಧರ್ಮವಾಗಿದೆ.

**ಪ್ರಶ್ನೆ:** ಭಗವಂತನ ಪೂಜೆಯಿಂದ ದೊರಕುವ ಫಲವೇ ಪತಿ-ಪೂಜೆಯಿಂದಲೂ ದೊರಕಬಲ್ಲದೇ?

**ಉತ್ತರ :** ಭಗವಂತನ ಪೂಜೆಯಲ್ಲಿ ಭಾವನೆಗೆ ಪ್ರಧಾನತೆಯಿದೆ. ಮೂರ್ತಿಪೂಜೆ ಮಾಡುವ ಸಮಯದಲ್ಲಿ ಇದು ಭಗವಂತನ ಪೂಜೆಯಾಗಿದೆ ಎಂಬ ಭಾವನೆ ಸ್ಥಿರವಾಗಿದ್ದಲ್ಲಿ ಪೂಜೆಯ ಪೂರ್ಣಫಲ ದೊರಕುತ್ತದೆ. ಇದೇ ಪ್ರಕಾರ ಪತಿದೇವನ ಸೇವೆ ಮಾಡುವ ಸಮಯದಲ್ಲಿ ನಾನು ಭಗವಂತನ ಸೇವೆ ಮಾಡುತ್ತಿದ್ದೇನೆ ಎಂಬುದು ನೆನಪಿರುವುದಾದರೆ ಮತ್ತು ಇದನ್ನು ಯೋಚಿಸಿ ಕಾರ್ಯಮಾಡುವ ಸಮಯದಲ್ಲಿ ಹೃದಯವು ಆನಂದ, ಉತ್ಸಾಹ, ಪ್ರಸನ್ನತೆಯಿಂದ ತುಂಬಿರುವುದಾದಲ್ಲಿ ಇದು ಸಾಕ್ಷಾತ್ ಭಗವಂತನ ಪೂಜೆಯೇ. ಪುರುಷನ ಜೀವನಕ್ಕೆ ಹೋಲಿಸಿದರೆ ಸ್ತ್ರೀಯ ಜೀವನದಲ್ಲಿ ಇದಕ್ಕೆ ಹೆಚ್ಚು ಸೌಲಭ್ಯವಿದೆ. ಒಂದು ವೇಳೆ ಪತಿದೇವನು ಭಗವಂತನೆಂಬ ಭಾವನೆಯು ನಿರಂತರವಿಲ್ಲವಾದರೆ ಪದೇ ಪದೇ ಅದನ್ನು ಸ್ಮರಿಸುವ ಪ್ರಯತ್ನ ಮಾಡಬೇಕು. ಕೆಲವೇ

ದಿನಗಳಲ್ಲಿ ಆ ಭಾವನೆಯು ದೃಢವಾಗುವುದು ಮತ್ತು ಜೀವನ ಆನಂದಮಯವಾಗುವುದು. ಭಗವಂತನೆಂಬ ಭಾವನೆ ಇಲ್ಲವಾದರೆ ತನ್ನ ಸ್ವಾಮಿ ಎಂಬ ರೂಪದಲ್ಲಿಯೇ ಅವನ ಸೇವೆ ಮತ್ತು ಆಜ್ಞೆಪಾಲನೆ ಮಾಡಬೇಕು. ಬೇರೆ ದೇವತೆಗಳ ಪೂಜೆಯಿಂದ ಆಗುವ ಲಾಭ ಪತಿಯನ್ನು ಭಗವಂತನೆಂದು ಭಾವಿಸದೆಯೂ ಅವನ ಪೂಜೆ ಮಾಡುವುದರಿಂದ ಉಂಟಾಗುತ್ತದೆ.

**ಪ್ರಶ್ನೆ :** ಈ ದಿನಗಳಲ್ಲಿ ಸ್ತ್ರೀಯರ ಪ್ರವೃತ್ತಿಯು ಇದಕ್ಕೆ ವಿಪರೀತವಾಗಿಯೇ ಕಂಡುಬರುತ್ತಿದೆ, ಇದಕ್ಕೆ ಕಾರಣವೇನು?

**ಉತ್ತರ :** ಇಂದು ದೇಶದಲ್ಲಿ ಪ್ರಚಾರವಾಗುತ್ತಿರುವ ಆದರ್ಶದ ಮತ್ತು ಶಿಕ್ಷಣದ ಆಧಾರ ಧಾರ್ಮಿಕ ಭಾವವಿಲ್ಲ, ಅದು ಭಗವಂತನ ಪೂಜೆ ಮತ್ತು ತನ್ನ ನಿಜವಾದ ಕಲ್ಯಾಣದ ಕಡೆಗೆ ದೃಷ್ಟಿಯಿಡದಿರುವಂತಹ ಒಂದು ದೇಶದ ಹಾಗೂ ಜಾತಿಯ ಅನುಕರಣೆಯಾಗಿದೆ. ಅವರುಗಳ ಲಕ್ಷ್ಯ, ಭೌತಿಕ ಸುಖವಾಗಿದೆ ಮತ್ತವರು ಕೇವಲ ಮನಸ್ಸಿಗೆ ಒಳ್ಳೆಯದಾಗಿ ಕಾಣಬರುವ ಇಂದ್ರಿಯಗಳ ಭೋಗದಲ್ಲಿ ತೊಡಗಿದ್ದಾರೆ. ಅವರು ಏನು ಮಾಡುತ್ತಾರೋ ಅದರಲ್ಲಿ ಅಧಿಕಾಂಶ ಧರ್ಮಭಾವನೆಗೆ ವಿರುದ್ಧವಾಗಿಯೇ ಇರುತ್ತದೆ. ಆ ದೇಶಗಳಲ್ಲಿ ಪ್ರಾಯಶಃ ಸತೀಧರ್ಮದ ಅಭಾವ ಕಂಡು ಬರುತ್ತಿರುವುದಕ್ಕೆ ಇದೇ ಕಾರಣವಾಗಿದೆ. ಪರಿವಾರದಲ್ಲಿ ಅಶಾಂತಿ, ಮನೆಯಲ್ಲಿ ಅಶಾಂತಿ ಮತ್ತು ಪತಿ-ಪತ್ನಿಯರಲ್ಲಿ ಅಶಾಂತಿ, ಮಾತುಮಾತಿಗೆ ಕೋರ್ಟು-ವಿವಾಹವಿಚ್ಛೇದನ ವ್ಯವಹಾರ - ಇದು ಅವರ ಸಭ್ಯತೆಯ ಲಕ್ಷಣವಾಗಿದೆ. ಈ ಎಲ್ಲ ಜಗಳ-ಕದನವು ಭಗವಂತನನ್ನು ಮರೆಯುವುದು ಮತ್ತು ಆ ಭಗವಂತನನ್ನು ಬಿಟ್ಟುಬಿಡುವುದರ ಫಲವಾಗಿದೆ. ಹಿಂದೂ ಸ್ತ್ರೀಯರಿಗೆ ಅವುಗಳ ಅನುಕರಣೆಯು - ಸ್ತ್ರೀಯರಿಗೆ ಮಾತ್ರವಲ್ಲದೆ ಧಾರ್ಮಿಕ-ಸಮಾಜ, ಮಾನವ ಜಾತಿಗೆ ಘಾತಕವಾಗಿದೆ; ಆದರೆ ಇಂದು ಪರಲೋಕ ಮತ್ತು ಪರಿಣಾಮದ ಮೇಲೆ ದೃಷ್ಟಿಯನ್ನು ಹಾಯಿಸುವವರು ಯಾರು!. ಜನರು ಕ್ಷಣಿಕ ಸುಖವನ್ನೇ ನೋಡುತ್ತಾರೆ, ಮೇಲೆ ಮೇಲೆಯೇ ನೋಡುತ್ತಾರೆ. ಇದೇ ಕಾರಣದಿಂದ ಇಂದು ಸ್ತ್ರೀಯರ ಪ್ರವೃತ್ತಿಯೂ ಸಹ ಬೇರೆಯ ಕಡೆ ಹರಿಯುತ್ತಿದೆ.

**ಪ್ರಶ್ನೆ :** ಇದರಿಂದ ರಕ್ಷಣೆ ಹೇಗೆ?

**ಉತ್ತರ :** ಧರ್ಮಭಾವನೆಯ ವೃದ್ಧಿಯೇ ರಕ್ಷಣೆಯ ಏಕಮಾತ್ರ ಉಪಾಯ. ಧರ್ಮದ ಪೂರ್ಣತೆಯು ಎಲ್ಲೆಡೆ ಭಗವಂತನ ದರ್ಶನದಲ್ಲಿದೆ. ಒಂದೆಡೇ

ದೃಢಭಾವನೆಯಿಂದಲೇ ಎಲ್ಲೆಲ್ಲೂ ಭಗವಂತನ ದರ್ಶನವಾಗುತ್ತದೆ. ಅವನೇ ಮಹಾಪುರುಷ, ಅವನೇ ಮೂರ್ತಿಯು, ಅವನೇ ಪತಿಯು, ಸ್ತ್ರೀಯು ಒಂದು ವೇಳೆ ತನ್ನ ಪತಿಯಲ್ಲಿ ಭಗವಂತನ ದೃಢಭಾವನೆಯನ್ನು ಮಾಡಿಕೊಳ್ಳುವುದಾದರೆ ಅವಳಿಗೆ ಎಲ್ಲೆಲ್ಲೂ ಭಗವಂತನ ಭಾವನೆ ಮತ್ತು ದರ್ಶನವುಂಟಾಗತೊಡಗುವುದು. ಇಂತಹ ಸ್ಥಿತಿ ಪ್ರಾಪ್ತಿಯಾದ ನಂತರ ಯಾವ ಪ್ರಕಾರದ ಅಶಾಂತಿಯುಂಟಾಗುವ ಸಂಭವವಿರುವುದಿಲ್ಲ, ಇದರಿಂದಲೇ ಸ್ತ್ರೀಯರ ಧರ್ಮ, ದೇಶ ಮತ್ತು ಜಾತಿಯ ರಕ್ಷಣೆ ಸಹಜವಾಗಿ ಆಗಬಲ್ಲದು.

❑❑

# ೨೬. ನರ-ನಾರಿಯರ ಜೀವನದ ಲಕ್ಷ್ಯ ಮತ್ತು ಕರ್ತವ್ಯ

ನರನಾಗಲಿ ಅಥವಾ ನಾರಿಯಾಗಲಿ-ಮನುಷ್ಯ ಜೀವನದ ಪರಮ ಮತ್ತು ಚರಮ ಲಕ್ಷ್ಯ ಭಗವತ್ಪ್ರಾಪ್ತಿ* ಅಥವಾ ಮುಕ್ತಿ. ಸಮಸ್ತ ದುಃಕಗಳ, ಕ್ಲೇಷಗಳ, ಸಮಸ್ತ ಬಂಧನ ಮತ್ತು ಎಲ್ಲ ಪ್ರಕಾರದ ಅಭಾವಗಳ ಆತ್ಯಂತಿಕ ನಿವೃತ್ತಿಯ ಹೆಸರೇ ಮುಕ್ತಿಯಾಗಿದೆ. ಆ ಮುಕ್ತಿಯನ್ನು ಲಕ್ಷ್ಯವಾಗಿರಿಸಿಕೊಂಡೇ ಮನುಷ್ಯನು ಮುಕ್ತಿಯನ್ನು ಪಡೆಯುವ ಉಪಾಯ ಸ್ವರೂಪವಾದ ಧರ್ಮದ ಸಾಧನೆ ಮಾಡಬೇಕು. ಭಗವತ್ಪ್ರಾಪ್ತಿಗೆ ಅನುಕೂಲವಾಗಿರುವ ಕಾರ್ಯವೇ ಧರ್ಮವಾಗಿದೆ ಮತ್ತು ಪ್ರತಿಕೂಲವಾಗಿ ಯಾವುದಿದೆಯೋ ಅದೇ ಅಧರ್ಮವಾಗಿದೆ. ಧರ್ಮ ಕರ್ತವ್ಯ ಮತ್ತು ಅಧರ್ಮ ತ್ಯಾಜ್ಯ. ಬುದ್ಧಿ, ಮನಸ್ಸು ಮತ್ತು ಇಂದ್ರಿಯಗಳ ಸಮ್ಯಕ್ ಶಾಸ್ತ್ರೀಯ ವ್ಯವಹಾರದಿಂದ

* ಇಂದ್ರಿಯ ಮತ್ತವುಗಳ ಭೋಗಗಳ ಜ್ಞಾನವಾದರೋ ಎಲ್ಲ ಯೋನಿಗಳಲ್ಲಿದೆ; ಆದರೆ ಒಳಿತು-ಕೆಡಕುಗಳ ವಿವೇಕ ಕೇವಲ ಮಾನವನಲ್ಲಿದೆ. ಪಶುವನ್ನು ದೊಣ್ಣೆಯ ಭಯದಿಂದ ವಿಷಯ ಭೋಗದಿಂದ ಹಿಮ್ಮೆಟ್ಟಿಸಬಹುದಾಗಿದೆ; ವಿಷಯದ ದೋಷವನ್ನು ತಿಳಿಯಪಡಿಸಿ ಅಲ್ಲ, ಮನುಷ್ಯನು ಮಾತ್ರ ಎಂತಹ ಪ್ರಾಣಿಯೆಂದರೆ ಅವನು ಭಗವದ್ ವಿಮುಖನಾಗಿ, ವಿಷಯ-ಭೋಗದ ದೋಷವನ್ನು ಮತ್ತು ಭಗವತ್ಪ್ರಾಪ್ತಿಯ ಮಹತ್ತ್ವವನ್ನು ವಿವೇಕದ ಮೂಲಕ ತಿಳಿಯುತ್ತಾನೆ. ಹಾಗೂ ಅದನ್ನೇ ಜೀವನದ ಪರಮ ಲಕ್ಷ್ಯವಾಗಿ ಮಾಡಿಕೊಳ್ಳುತ್ತಾನೆ. ಭಗವತ್ಪ್ರಾಪ್ತಿಯನ್ನು ಯಾವ ಮನುಷ್ಯ ತನ್ನ ಜೀವನದ ಲಕ್ಷ್ಯವನ್ನಾಗಿಸಿಕೊಳ್ಳುವುದಿಲ್ಲವೋ ಅವನು ಪಶುವಿಗಿಂತಲೂ ಕೀಳಾದವನು. ಪಶುವಾದರೋ, ಬಡಪಾಯಿ-ವಿವೇಕವಿಲ್ಲದಿರುವ ಕಾರಣ ಇದನ್ನು ಅರಿಯದು. ಆದರೆ ಮನುಷ್ಯ ವಿವೇಕದ ದುರುಪಯೋಗ ಮಾಡುತ್ತಾನೆ.

ಈ ಧರ್ಮದ ಸಾಧನೆಯಾಗುತ್ತದೆ. ಆದ್ದರಿಂದ ಇದರಲ್ಲಿ ಶಾರೀರಿಕ ಆರೋಗ್ಯ, ಶಾರೀರಿಕ ಮತ್ತು ಮಾನಸಿಕ ಸಮೃದ್ಧಿ ಮತ್ತು ಜೀವನ-ನಿರ್ವಾಹಕ್ಕೆ ಯೋಗ್ಯವಾದ ಕಾರ್ಯಗಳ ಉಪೇಕ್ಷೆಯಲ್ಲ. ಆದರೆ ಜೀವನೋಪಯೋಗಿ ಸಮಸ್ತ ಕಾರ್ಯಗಳನ್ನು ಮೋಕ್ಷೋಪಯೋಗಿಯಾಗಿ ಮಾಡುವುದರ ಮೂಲಕ ಮುಕ್ತಿಪಥದಲ್ಲಿ ತೊಡಗಬೇಕಾಗಿದೆ. ಆದ್ದರಿಂದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ-ಚತುರ್ವಿಧ ಪುರುಷಾರ್ಥಗಳಾಗಿವೆ. ಧರ್ಮವು ಮೋಕ್ಷಾನುಕೂಲವಾಗಲಿ, ಅರ್ಥವು ಧರ್ಮಸಮ್ಮತವಾಗಲಿ ಮತ್ತು ಕಾಮೋಪಭೋಗವು ಜೀವನಧಾರಣೋಪಯೋಗಿ ಧರ್ಮಸಮ್ಮತವಾಗಲಿ. ಯಾವುದು ಮೋಕ್ಷಕ್ಕೆ ಅನುಕೂಲವಾಗಿರುತ್ತದೆಯೋ ಮತ್ತು ತನ್ನ ಜೊತೆಯಲ್ಲಿ ಸಮಸ್ತ ಪರಿವಾರ, ಸಮಾಜ, ರಾಷ್ಟ್ರ, ವಿಶ್ವ-ಯಾವುದಕ್ಕೂ ಪರಿಣಾಮದಲ್ಲಿ ಅಹಿತವನ್ನುಂಟು ಮಾಡುವದಾಗಿರದೆ, ಎಲ್ಲರ ಹಿತವನ್ನು ಮಾಡುವುದಾಗಿರುವುದೋ ಅದೇ ಧರ್ಮ ಸಮ್ಮತವಾದ ಅರ್ಥ ಮತ್ತು ಕಾಮವಾಗುತ್ತದೆ.

ಇದೇ ದೃಷ್ಟಿಯಿಂದ ವರ್ಣಾಶ್ರಮದ ನಿರ್ಮಾಣ ಮತ್ತು ಪ್ರತಿಯೊಬ್ಬ ವ್ಯಕ್ತಿಗೆ ಶಾಸ್ತ್ರಗಳಲ್ಲಿ ಅದಕ್ಕನುಕೂಲವಾದ ಕರ್ತವ್ಯ ಕರ್ಮಗಳ ಆದೇಶವಿದೆ. ಏಕಮಾತ್ರ ಭಗವತ್ಪ್ರಾಪ್ತಿ ಅಂದರೆ ಐಹಿಕ-ಪಾರಲೌಕಿಕ, ಸಾತ್ತ್ವಿಕ ಸುಖ ಸಂಪತ್ತು ಹಾಗೂ ಶಾಂತಿಯನ್ನು ಭೋಗಿಸುತ್ತ ಕೊನೆಯಲ್ಲಿ ಬಂಧನದಿಂದ ಮುಕ್ತನಾಗಿ ಸಚ್ಚಿದಾನಂದಘನಪರಮಾತ್ಮ ಸ್ವರೂಪದಲ್ಲಿ ಅಖಂಡಸ್ಥಿತಿಯೇ ಉದ್ದೇಶವಾಗಿದೆ. ಈ ಉದ್ದೇಶದ ಸಿದ್ಧಿಗಾಗಿಯೇ ಹೊರಗೊಳಗಿನ ಜೀವನದ ಸಮ್ಯಕ್ ನಿಯಂತ್ರಣ ಮತ್ತು ನಿಯೋಜನೆ ಮಾಡುತ್ತ ಶ್ರದ್ಧೆ ಹಾಗೂ ನಿಷ್ಠಾಪೂರ್ವಕವಾದ ಸ್ವಧರ್ಮ ಪಾಲನೆಯೇ ಏಕಮಾತ್ರ ಸಾಧನವಾಗಿದೆ.

ನರನಂತೆ ನಾರಿಯೂ ಭಗವತ್ಪ್ರಾಪ್ತಿ ಮಾಡಿಕೊಳ್ಳಬೇಕಾಗಿದೆ. ಆದರೆ ಅವಳಿಗೆ ಸಾಧನೆಯ ಸ್ವರೂಪ ನರನ ಸಾಧನೆಗಳಿಗಿಂತ ವಿಲಕ್ಷಣವಾಗಿದೆ. ನಾರಿಯ ಸ್ವಧರ್ಮ ನರನ ಸ್ವಧರ್ಮಕ್ಕಿಂತ ಭಿನ್ನವಾಗಿದೆ. ಬೇರೆಯಲ್ಲವಾದರೆ ಅದು ಪರಿವಾರ, ಸಮಾಜ ಮತ್ತು ರಾಷ್ಟ್ರದಲ್ಲಿ ವಿಶೃಂಖಲತೆಯನ್ನುಂಟು ಮಾಡುವುದಾಗುತ್ತದೆ ಮತ್ತು ಪರಿಣಾಮದಲ್ಲಿ ಅವುಗಳಿಗೆ ಅಹಿತಕಾರಿ ಯಾಗುವುದರಿಂದ ಧರ್ಮವಾಗದೆ ಅಧರ್ಮವಾಗಿಬಿಡುತ್ತದೆ. ಆದಕಾರಣ ನರನ ನಿರ್ಮಾಣ, ಸಂರಕ್ಷಣೆ ಮತ್ತು ಸಂವರ್ಧನೆಯನ್ನು ನಾರಿಯೇ ಮಾಡುತ್ತಾಳೆ. ನಾರಿಯು ಒಂದು ವೇಳೆ ಸ್ವಧರ್ಮಚ್ಯುತಳಾಗಿ ನರನ ಧರ್ಮವನ್ನು

ಸ್ವೀಕರಿಸತೊಡಗಿದರೆ ನರನ ಅಸ್ತಿತ್ವವೇ ಇರುವುದಿಲ್ಲ. ಇದರ ಫಲವಾಗಿ ನಾರಿಯ ಅಸ್ತಿತ್ವವೂ ಸಂಕಟಗ್ರಸ್ತವಾಗುವುದು. ನರ-ನಾರಿಯರಿಬ್ಬರನ್ನೂ ಆಧಾರವಾಗಿಸಿ ಕೊಂಡೇ ವಿಶ್ವ ಮತ್ತು ವಿಶ್ವದ ಸಮಸ್ತ ಧರ್ಮಗಳಿರುವುದು. ಇವರಿಲ್ಲದಿದ್ದಲ್ಲಿ ವಿಶ್ವವೇ ಇರುವುದಿಲ್ಲ, ಆದ್ದರಿಂದ ನಾರಿಯು ಸ್ವಧರ್ಮದಲ್ಲಿದ್ದುಕೊಂಡೇ ತನ್ನ ಲಕ್ಷ್ಯದ ಕಡೆಗೆ ಮುಂದುವರಿಯಬೇಕು. ಇದಕ್ಕಾಗಿಯೇ ನರನ ಜನನಿ, ನರನ ಸಹಧರ್ಮಿಣಿ, ನರನ ಸಂರಕ್ಷಕಿಯಾಗಿ ನಾರಿಯು ಮನೆಯಲ್ಲಿರುತ್ತಾಳೆ. ಇದಕ್ಕೋಸ್ಕರವೇ ಅವಳು ಪತಿಯಲ್ಲಿ ಭಗವದ್ಬುದ್ಧಿಯಿಟ್ಟು ತನ್ನ ಚಿತ್ತವೃತ್ತಿಯನ್ನು ಸರ್ವಥಾ ಭಗವತ್ಸ್ವರೂಪವಾಗಿಸಿ ಕೊನೆಯಲ್ಲಿ ಬಂಧನಗಳಿಂದ ಬಿಡಲ್ಪಟ್ಟವಳಾಗಿ ಪತಿಲೋಕವನ್ನು ಅಂದರೆ ಭಗವಂತನ ದಿವ್ಯಧಾಮ ಸ್ವರೂಪವಾದ ಮುಕ್ತಿಯನ್ನು ಸಹಜವಾಗಿಯೇ ಪಡೆಯುತ್ತಾಳೆ.

ಪತಿಯನ್ನು ಪರಮೇಶ್ವರನ ರೂಪದಲ್ಲಿ ತಿಳಿಯಬೇಕೆನ್ನುವುದರ ಅಭಿಪ್ರಾಯ-ನಾರಿಯು ಮನೆಯಲ್ಲಿದ್ದು ಮನುಷ್ಯನ ನಿರ್ಮಾಣ, ಸಂರಕ್ಷಣೆ ಮತ್ತು ಸಂವರ್ಧನೆ ಮಾಡುತ್ತ ಭಗವಂತನ ಸಂಕಲ್ಪರೂಪವಾದ ವಿಶ್ವದ ಸೇವೆಮಾಡಬೇಕು. ಅದರ ಮೂಲಕ ಭಗವಂತನ ಸೇವೆ ಮಾಡಿ ಪತಿಯು ಪರಮೇಶ್ವರ, ಪತಿಯೊಡನೆ ಆಗುವ ವಿವಾಹ ಪರಮೇಶ್ವರನೊಡನೆ ಆಗುವ ವಿವಾಹದಂತೆ, ಪತಿಯ ಸಾನ್ನಿಧ್ಯ ಪರಮೇಶ್ವರನ ಸಾನಿಧ್ಯವಾಗಿದೆ, ಪತಿಯ ಮನೆಯು ಪರಮೇಶ್ವರನ ಮಂದಿರವಾಗಿದೆ, ಪತಿಯ ಆಜ್ಞಾಪಾಲನೆ ಪರಮೇಶ್ವರನ ಆಜ್ಞಾಪಾಲನೆಯಾಗಿದೆ, ಪತಿಯನ್ನು ಸುಖವಾಗಿರಿಸಲು ಮಾಡುವ ಪ್ರಯತ್ನ ಪರಮೇಶ್ವರನ ಪ್ರಸನ್ನತೆಗೆ ಕಾರಣವಾಗುತ್ತದೆ, ಮತ್ತು ಪತಿಗೆ ಮಾಡಿದ ಸರ್ವಸ್ವ-ಸಮರ್ಪಣೆಯು ಪರಮೇಶ್ವರನಿಗೆ ಸರ್ವಾರ್ಪಣೆಯಾಗಿದೆ- ಎಂದೀ ಪ್ರಕಾರವಾಗಿ ಪದೇ ಪದೇ ಚಿತ್ತವೃತ್ತಿಯನ್ನು ಪತಿಯ ನೆಪದಿಂದ ಪರಮೇಶ್ವರನಲ್ಲಿ ತೊಡಗಿಸಿ ತದ್ಗತಚಿತ್ತಳು, ತದ್ಗತ ಬುದ್ಧಿಯವಳು ಮತ್ತು ತದಾತ್ಮ್ಯಳಾಗಿ ಕಡೆಗೆ ಪರಮೇಶ್ವರನನ್ನು ಪಡೆಯಲಿ. ಇದೇ ನಿಯಮ. ಶ್ರೀಭಗವಂತನು ಗೀತೆಯಲ್ಲಿ ಹೇಳಿದ್ದಾನೆ-

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥** (೫/೧೭)

ಯಾರ ಬುದ್ಧಿ ಮತ್ತು ಮನಸ್ಸು ಪರಮಾತ್ಮ ರೂಪವಾಗಿದೆಯೋ ಯಾರ ನಿಷ್ಠೆ ಆ ಪರಮಾತ್ಮನಲ್ಲಿಯೇ ಇದೆಯೋ, ಅಂತಹ ಪರಮಾತ್ಮ ಪರಾಯಣ

ಪುರುಷರು ಜ್ಞಾನದ ಮೂಲಕ ಪಾಪರಹಿತರಾಗಿ, ಅಪುನರಾವೃತ್ತಿ ರೂಪವಾದ ಮುಕ್ತಿ ಪಡೆಯುತ್ತಾರೆ.

ಪತಿವ್ರತೆಯದೂ ಕೂಡಾ ಇದೇ ಸ್ಥಿತಿಯಾಗುತ್ತದೆ. ಅವಳು ಪತಿಯೊಬ್ಬನ ವಿನಹಾ ಯಾವ ಅನ್ಯರನ್ನೂ ಅರಿಯಳು ಮತ್ತು ಎಲ್ಲ ಪ್ರಕಾರದಿಂದ ಪತಿಯೊಡನೆ ಸೇರಿ-ಬೆರೆತು ಒಂದಾಗುತ್ತಾಳೆ. ಆದ್ದರಿಂದಲೇ ಪತಿವ್ರತೆಯ ಆದರ್ಶವೇ ಭಕ್ತಿಯ ಸರ್ವೋತ್ತಮ ಆದರ್ಶವೆಂದು ಒಪ್ಪಲಾಗಿದೆ ಮತ್ತು ಇದರಿಂದಾಗಿಯೇ ಪತಿವ್ರತೆಯ ಎದುರು ಸಮಸ್ತ ದೇವತೆಗಳೂ ತಲೆತಗ್ಗಿಸುತ್ತಾರೆ.

ಪತಿವ್ರತಾಸ್ತ್ರೀಯು ಪತಿಗಿಂತ ಅಭಿನ್ನಳಾಗಿರುತ್ತಾಳೆ. ಮನುವು ಹೇಳುತ್ತಾನೆ - ಯಾರು ಭರ್ತನಾಗಿದ್ದಾನೋ ಅವನೇ ಭಾರ್ಯೆಯಾಗಿದ್ದಾಳೆ. **ಯೋ ಭರ್ತಾ ಸಾ ಸ್ಮೃತಾಂಗನಾ** (೯/೪೫) ಮತ್ತು ಇಬ್ಬರೂ ಮರಣ ಪರ್ಯಂತ ಪರಸ್ಪರ ಅನುಕೂಲರಾಗಿದ್ದು ಧರ್ಮ - ಅರ್ಥ - ಕಾಮ - ಮೋಕ್ಷ ರೂಪವಾದ ಚತುರ್ವರ್ಗವನ್ನು ಪಡೆಯಬೇಕು-ಸಂಕ್ಷೇಪವಾಗಿ ಸ್ತ್ರೀ ಪುರುಷರ ಪರಮ ಧರ್ಮವೂ ಇದೇ ಆಗಿದೆ.

**ಅನ್ಯೋನ್ಯಸ್ಯಾವ್ಯಭಿಚಾರೋ ಭವೇದಾಮರಣಾಂತಿಕಃ ।**
**ಏಷ ಧರ್ಮಃ ಸಮಾಸೇನ ಜ್ಞೇಯಃ ಸ್ತ್ರೀಪುಂಸಯೋಃ ಪರಃ ॥**

(೯/೧೦೧)

ಶಿಶುಪಾಲನೆ, ಗೃಹರಕ್ಷಣೆ ಮೊದಲಾದುವು ಸಣ್ಣಕಾರ್ಯಗಳೆಂದೂ ಮತ್ತು ಲೇಖನ ಬರೆಯುವುದು, ವ್ಯಾಖ್ಯಾನ ಮಾಡುವುದು, ಕಛೇರಿಯಲ್ಲಿ ನೌಕರಿ ಮಾಡುವುದು ದೊಡ್ಡಕೆಲಸವಾಗಿದೆಯೆಂದು ತಿಳಿಯುವುದು ತಪ್ಪು ವಿಚಾರವಾಗಿದೆ. ವಾಸ್ತವಿಕ ದೃಷ್ಟಿಯಿಂದ ನೋಡಿದಲ್ಲಿ ಮೊದಲನೆಯದು ಎಷ್ಟು ಮಹತ್ತ್ವವುಳ್ಳ ಕಾರ್ಯವಾಗಿದೆಯೋ ಅಷ್ಟು ಮಹತ್ತ್ವವುಳ್ಳದ್ದು ಎರಡನೆಯದು ಅಲ್ಲವೇ ಅಲ್ಲ. ಇದಲ್ಲದೆ, ಕೆಲಸದ ಲಘುತ್ವ-ಮಹತ್ತ್ವವು ಮನಸ್ಸಿನ ಭಾವನೆಗನುಸಾರವಾಗಿ ಆಗುತ್ತಿರುತ್ತದೆ. ಚರಕದಲ್ಲಿ ನೂಲು ತೆಗೆಯುವುದು ಬಹಳ ಚಿಕ್ಕಕಾರ್ಯವೆಂದು ಜನರು ತಿಳಿದಿದ್ದರು ಮತ್ತು ವೃದ್ಧರಾದ ಸ್ತ್ರೀಯರೇ ಸಮಯಸಿಕ್ಕಾಗ ಈ ಕಾರ್ಯವನ್ನು ಮಾಡುತ್ತಿದ್ದರು; ಆದರೆ ಹಿಂದೆ ಗಾಂಧೀಜಿಯವರು ಇದರ ಮಹತ್ತ್ವವನ್ನು ಘೋಷಿಸಿದಾಗ ಪಂಡಿತ ಮೋತೀಲಾಲ ನೆಹರೂ, ಪಂಡಿತ ಮದನ ಮೋಹನ ಮಾಳವೀಯ, ಲಾಲಾಲಜಪತರಾಯ ಮತ್ತು ಶ್ರೀಚಿತ್ತರಂಜನ

ದಾಸರಂತಹ ಆಜೀವ ಲೇಖಕರು ಕೂಡಾ ಚರಕದಲ್ಲಿ ನೂಲನ್ನು ತೆಗೆದು ಅದರಿಂದ ಅವರು ಕೀರ್ತಿಪಡೆದರು. ಈ ಪ್ರಕಾರವಾಗಿ ಸ್ವಧರ್ಮದಲ್ಲಿ ನಿಷ್ಠೆ ಮತ್ತು ಉಪಾದೇಯ ಬುದ್ಧಿ ಇದ್ದಲ್ಲಿ ಸ್ವತಃ ಈ ಕೆಲಸ ಮಹತ್ತ್ವಪೂರ್ಣವಾಗಿಬಿಡುತ್ತದೆ.

ಈ ಸಮಯ ಸ್ವಧರ್ಮಪಾಲನೆಯಲ್ಲಿ ಯಾವ ಶಿಥಿಲತೆ ಮತ್ತು ಪರಧರ್ಮಪಾಲನೆಯಲ್ಲಿ ಉತ್ಸಾಹ ಕಾಣಬರುತ್ತದೆಯೋ ಇದಕ್ಕೆ ಭಾರತೀಯ ಋಷಿ-ಮುನಿಪ್ರಣೀತವಾದ ಶಿಕ್ಷಣದಿಂದ ವಿಮುಖರಾಗಿರುವುದೇ ಕಾರಣ. ಇಂದು ಭಾರತವು ತನ್ನ ಪುನೀತವಾದ ಪ್ರಾಚೀನ ಶಿಕ್ಷಣದಿಂದ ವಂಚಿತವಾಗಿದೆ ಮತ್ತು ನವೀನ ವಿಪರೀತ ಜ್ಞಾನವನ್ನುಂಟುಮಾಡುವ ಪರ-ಶಿಕ್ಷಣದಿಂದ ಮರೆಯಾಗಿದೆ. ಆ ಶಿಕ್ಷಣ ಹೀಗಿದೆ-

೧) ಸಂಸಾರದಲ್ಲಿ ಕ್ರಮ-ವಿಕಾಸವಾಗುತ್ತದೆ ಅಂದರೆ ಸಂಸಾರದ ಎಲ್ಲ ವಿಷಯಗಳಲ್ಲಿ ಉತ್ತರೋತ್ತರ ಉನ್ನತಿಯಾಗುತ್ತದೆ, ೨) ಕೆಲವು ಸಾವಿರ ವರ್ಷಗಳ ಹಿಂದಿನ ಯಾವುದೇ ಇತಿಹಾಸವೂ ಪ್ರಾಪ್ತವಾಗುವುದಿಲ್ಲ, ೩) ಆರ್ಯರು ಈ ದೇಶದ ನಿವಾಸಿಗಳಾಗಿರಲಿಲ್ಲ ಮತ್ತು ೪) ಧರ್ಮವು ಸಮಯಾನುಸಾರ ಬದಲಾಯಿಸುವ ವಸ್ತು ಈ ತಿಳಿವಳಿಕೆಯ ಪರಿಣಾಮವಾಗಿ ತನ್ನ ಗೌರವಯುತವಾದ ಸನಾತನ ಪರಂಪರೆಯ ಮೇಲಿನ, ತನ್ನ ತ್ರಿಕಾಲಜ್ಞರಾದ, ಸರ್ವವಿದ್ಯಾವಿಶಾರದರಾದ, ಅಲೌಕಿಕ ಬುದ್ಧಿಸಂಪನ್ನರಾದ, ಮಹಾನ್ ತೇಜಸ್ವಿಗಳಾದ, ಸರ್ವವಿಧ ಸಂಪನ್ನರಾದ, ಪೂರ್ವಜರ ಬಗ್ಗೆ ಮತ್ತು ತನ್ನ ಪ್ರಾಚೀನ ಸುಖ-ಸಮೃದ್ಧಿ ಮತ್ತು ಜ್ಞಾನೈಶ್ವರ್ಯಪೂರ್ಣ ಸ್ವದೇಶದ ಮತ್ತು ತ್ರಿಕಾಲಾಬಾಧಿತ ಧರ್ಮದ ಮೇಲಿನ ಶ್ರದ್ಧೆಯು ಕಳಚಿ ಬಿದ್ದು ಹೋಯಿತು. ಅವನು ತಿಳಿಯತೊಡಗಿದುದೇನೆಂದರೆ-

ಮೊದಲು ಸರ್ವಥಾ ಅವನತಿಯಿತ್ತು, ಕ್ರಮಕ್ರಮವಾಗಿ ಉನ್ನತಿಯಾಯಿತು. ಈಗಿರುವ ಉನ್ನತಿ ಮೊದಲು ಇರಲಿಲ್ಲ, ಆದ್ದರಿಂದ ಸುಖ-ಸಮೃದ್ಧಿಯಲ್ಲಿ, ಜ್ಞಾನ-ವಿಜ್ಞಾನದಲ್ಲಿ, ವಿದ್ಯಾ-ಬುದ್ಧಿಯಲ್ಲಿ ಪ್ರಭಾವ-ಐಶ್ವರ್ಯದಲ್ಲಿ ಇಂದಿನ ಮಾನವನು ಉನ್ನತಿಯಾಗಿರುವಷ್ಟು ನಮ್ಮ ಪೂರ್ವಜರು ಉನ್ನತಿಯಾಗಿರಲಿಲ್ಲ, ದೇಶವಾಗಲಿ, ಸಂಸ್ಕೃತಿಯಾಗಲಿ, ಉನ್ನತವಾಗಿರಲಿಲ್ಲ, ಇದೇ ಅಲ್ಲದೆ, ಎಷ್ಟು ಹಳೆಯ ಕಾಲವಾಗಿತ್ತೋ ಅಷ್ಟೇ ಅಧಿಕವಾದ ಅವನತಿಯಿತ್ತು; ವೇದ ಪುರಾಣ, ಮಹಾಭಾರತ, ರಾಮಾಯಣ ಮೊದಲಾದ ಎಷ್ಟು ಗ್ರಂಥಗಳಿವೆಯೋ ಅವೆಲ್ಲವೂ ಐತಿಹಾಸಿಕ ಯುಗದ ಅಂದರೆ ನಾಲ್ಕುಸಾವಿರ ವರ್ಷಗಳ ಹಿಂದೆ-ಮುಂದೆ

ಬರೆದಿರುವುವು ಮತ್ತು ಅವೆಲ್ಲವೂ ಪ್ರಾಯಶಃ ಕಾವ್ಯಗಳಾಗಿವೆ-ಕೇವಲ ಕವಿಯ ಮೆದುಳಿನ ಕಲ್ಪನೆಯಾಗಿವೆ. ಆದ್ದರಿಂದ ಅವುಗಳಲ್ಲಿ ಲಕ್ಷಾಂತರ - ಕೋಟ್ಯಂತರ ವರ್ಷಗಳ ಹಿಂದಿನ ಗೌರವಮಯ ವರ್ಣನೆಯೇನಿದೆಯೋ ಅದು ಮಿಥ್ಯೆಯಾಗಿದೆ. (ಇದಲ್ಲದೆ, ಕೆಲವು ವಿದ್ವಾಂಸರೆನಿಸಿಕೊಳ್ಳುವವರು ನಾಲ್ಕು ಸಾವಿರ ಐನೂರು ವರ್ಷಗಳ ಹಿಂದಿನ ಕಾಲವನ್ನು ರಾಮಾಯಣ ಕಾಲ ಅಥವಾ ರಾಮರಾಜ್ಯದ ಕಾಲವೆಂದು ತಿಳಿಯುತ್ತಾರೆ.) ಧರ್ಮವು ಸಾಮಾಜಿಕ ನಿಯಮವಾಗಿದೆ ಮತ್ತು ಅದು ಸಾಮಾಜಿಕ ಪರಿಸ್ಥಿತಿಗನುಸಾರವಾಗಿ ಬದಲಾಗುವಂತಹುದು. ಧರ್ಮ ಶಾಸ್ತ್ರಗಳಲ್ಲಿ ಯಾವ ವಿಧಿ-ನಿಷೇಧದ ವರ್ಣನೆ ಮಾಡಿ ಅವುಗಳಿಗೆ ಪಾರಲೌಕಿಕ ಫಲವನ್ನು ತಿಳಿಸಿದೆಯೋ ಅದು ಜನರನ್ನು ನಿಯಂತ್ರಣದಲ್ಲಿಡಲು ಹೇಳಿದುದಾಗಿದೆ. ವಸ್ತುತಃ ಹಾಗೆ ಆಗುವುದಿಲ್ಲ ಮತ್ತು ಈ ದೇಶದಲ್ಲಿ ಆರ್ಯರು ಎಂದೂ ಇರಲೇ ಇಲ್ಲ, ಆದ್ದರಿಂದ ಲಕ್ಷಾಂತರ, ಕೋಟ್ಯಂತರ ವರ್ಷಗಳ ವರ್ಣನೆಯೇನಿದೆಯೋ, ಹಾಗೂ ಅದರಲ್ಲಿ ಯಾವ ಆರ್ಯಗಾಥೆ ಗಳಿವೆಯೋ ಅವೆಲ್ಲ ಕಲ್ಪಿತವಾಗಿವೆ.

ಭಾರತವು ಹೀಗೆ ತಿಳಿದುಕೊಂಡಾಗ ಅದಕ್ಕೆ ತನ್ನ ಸಂಸ್ಕೃತಿ, ತನ್ನ ಪೂರ್ವಜರು, ತನ್ನ ಧರ್ಮ ಮತ್ತು ತನ್ನ ಯಥಾರ್ಥ ದೇಶದೊಡನೆ ಅಶ್ರದ್ಧೆಯುಂಟಾಯಿತು. ಮತ್ತು ಅಭಿವೃದ್ಧಿಯಾಗಿವೆ ಎಂದು ಹೇಳಿಸಿಕೊಳ್ಳುವ ಈಗಿನ ದೇಶಗಳು ಮತ್ತು ರಾಷ್ಟ್ರಗಳನ್ನೇ ಆದರ್ಶವೆಂದೊಪ್ಪಿ ಅದಕ್ಕನುಸಾರವಾಗಿ ಅದು ತನ್ನ ಜೀವನ ನಿರ್ಮಾಣ ಮಾಡಲು ತೊಡಗಿತು. ಎಲ್ಲೆಲ್ಲಿ ಮತ್ತು ಯಾವ್ಯಾವಾಗ ವರ್ತಮಾನ ಆದರ್ಶದೊಡನೆ ತನ್ನ ಆಚರಣೆ ಅಥವಾ ಆದರ್ಶ ಪ್ರತಿಕೂಲವಾಗಿ ಕಂಡುಬಂದಿತೋ, ಅಲ್ಲಲ್ಲಿ ಮತ್ತು ಆವಾಗಲೇ ಅದು ಸುಧಾರಣೆಯ ಆವಶ್ಯಕತೆಯನ್ನು ಕಂಡುಕೊಂಡಿತು; ಅಂದರೆ ಆ ಆಚರಣೆಗಳು ಮತ್ತು ಆದರ್ಶವನ್ನು ಸಮೂಲ ನಾಶಮಾಡಿ ಅದರ ಸ್ಥಾನದಲ್ಲಿ ಇಂದು ಉನ್ನತಿ ಎಂದು ಹೇಳಿಕೊಳ್ಳುವ ಆಚರಣೆ ಮತ್ತು ಆದರ್ಶದ ಸ್ಥಾಪನೆಯ ಆವಶ್ಯಕತೆಯನ್ನು ಅರಿತು ಅದರಂತೆ ಪ್ರಯತ್ನದಲ್ಲಿ ತೊಡಗಿತು. ಇದೇ ಪ್ರಯತ್ನವನ್ನು ಅದು ದೇಶಸೇವೆ, ಮಾನವ ಸೇವೆ ಮತ್ತು ಧರ್ಮಪಾಲನೆಯೆಂದು ತಿಳಿದುಕೊಂಡಿತು. ಈ ಪ್ರಕಾರವಾಗಿ ತನ್ನ ಸರ್ವನಾಶದಲ್ಲಿಯೇ ಸಂರಕ್ಷಣೆ, ಸಾಂಸ್ಕೃತಿಕ ರೂಪದ ಆಮೂಲಾಗ್ರ ಪರಿವರ್ತನೆಯಲ್ಲಿಯೇ ಉನ್ನತಿ ಅಥವಾ ವಿಕಾಸವನ್ನು ತಿಳಿದುಕೊಂಡು ಅದರಲ್ಲಿಯೇ ತೊಡಗಿತು ಮತ್ತು ಉತ್ತರೋತ್ತರ ಅದರಲ್ಲಿಯೂ

ಉನ್ನತಿಯ ದೃಢ ವಿಶ್ವಾಸದಿಂದ ಇಂದೂ ಸಹ ಅದರಲ್ಲಿಯೇ ತೊಡಗುತ್ತಿದೆ. ಆದ್ದರಿಂದಲೇ ಇಂದು ಪ್ರಾಚೀನದ ಸಂಹಾರ ಮತ್ತು ನವೀನದ ಸ್ಥಾಪನೆ ಕಣ್ಣುಮುಚ್ಚಿಕೊಂಡು ನಡೆಯುತ್ತಿದೆ ಮತ್ತು ನವಯುಗ, ನವಭಾರತ, ನವ-ಜೀವನ, ನವ-ಧರ್ಮ ಹಾಗೂ ನವನಿರ್ಮಾಣದ ಕೂಗು ಕೇಳಿಸುತ್ತಿದೆ. ಇಂದು ಇಡೀ ದೇಶ ಇದೇ ಪ್ರವಾಹದಲ್ಲಿ ಕೊಚ್ಚಿಹೋಗುತ್ತಿದೆ. ಇದರಿಂದಲೇ ಭಾರತೀಯ ನಾರಿಯ ಸ್ವರೂಪದಲ್ಲಿಯೂ ಸಹ ಪರಿವರ್ತನೆಯಾಗುತ್ತಿದೆ; ಏಕೆಂದರೆ ಈ ಪ್ರಾಚೀನ ಆದರ್ಶದ ಸಂಹಾರರೂಪವಾದ ಪರಿವರ್ತನೆಯಲ್ಲಿಯೇ ಮೋಹವಶನಾಗಿ ಇಂದಿನ ನರನು ಮತ್ತದರಂತೆಯೇ ಶಿಕ್ಷಿತಳೆನ್ನುವ ನಾರಿಯು ನಿಜವಾದ ಹೃದಯದಿಂದ ತನ್ನ ಮತ್ತು ದೇಶದ ಉನ್ನತಿಯನ್ನು ಒಪ್ಪಿಕೊಳ್ಳುತ್ತಿದ್ದಾಳೆ. ನೈತಿಕ ಮತ್ತು ಸಾಂಸ್ಕೃತಿಕ ದಿಕ್ಕಿನಲ್ಲಿ ಯಾವ ನಾರಿಯ ಸ್ಥಾನ ಎಲ್ಲರಿಗಿಂತ ಉನ್ನತವಾಗಿದ್ದಿತೋ ಅದನ್ನು ಕುರಿತು ಇಂದು ಭಾರತೀಯ ಶಾಸ್ತ್ರಗಳು, ಆಚಾರಗಳು ಮತ್ತು ಪದ್ಧತಿಗಳು ನಾರಿಯ ಶಕ್ತಿಯನ್ನು ಅದುಮಿಹಾಕಿತು. ಅದನ್ನು ತುಳಿದುಹಾಕಿತು ಮತ್ತು ಅವಳ ಸರ್ವನಾಶಮಾಡಿಬಿಟ್ಟಿತು ಎಂದು ಹೇಳಲಾಗುತ್ತಿದೆ. ಇಂದು ನಾರಿಯು ಈ ಸರ್ವನಾಶದ ಕೆಸರಿನಿಂದ ಮೇಲೆದ್ದು ಸ್ವತಂತ್ರಳೂ, ಸುಖಿಯೂ ಆಗುವಳು. ವಸ್ತುತಃ ಇಂದು ಅವರ ಉನ್ನತಿಯ ಆದರ್ಶ ಯೂರೋಪ್ ದೇಶವಾಗಿದೆ. ಆದ್ದರಿಂದ ಯುರೋಪನ್ನು ನಿಂದಿಸುತ್ತಲೇ ಯೂರೋಪಿನ ಪದ್ಧತಿಯನ್ನು ಒಪ್ಪಿಕೊಂಡು ಅದನ್ನೇ ಅಂಧಾನುಕರಣ ಮಾಡುತ್ತಿದ್ದಾರೆ.* ಇದರಿಂದಲೇ ಇಂದು ಎಲ್ಲೆಡೆ ಅಧಿಕಾರದ ಕೂಗು

---

* ವಿಚಾರಶೀಲರಾದ ವಿದೇಶಿ ವಿದ್ವಾಂಸರು ಭಾರತೀಯ ಹಿಂದೂಗಳ ಪ್ರಾಚೀನ ಸಾಮಾಜಿಕ ಪರಂಪರೆಗೆ ಮುಗ್ಧರಾಗಿ ಅವುಗಳನ್ನು ಹೊಗಳುತ್ತಾರೆ. ಶ್ರೀಫೆಡರಿಕ್ ಪಿನ್ಕಾಟ್ ಮಹೋದಯರು ಹೇಳುತ್ತಾರೆ-

ಕೋಟ್ಯಂತರ ಬುದ್ಧಿವಂತ ಪುರುಷರು ಸಾವಿರಾರು ವರ್ಷಗಳಿಂದ ಯಾವ ಸಾಮಾಜಿಕ ರೀತಿಗಳನ್ನು ವ್ಯವಹಾರದಲ್ಲಿ ತರುತ್ತಿದ್ದಾರೆಯೋ ಅವರಲ್ಲಿ- ಅವಶ್ಯವಾಗಿ ಉನ್ನತವಾದ ತತ್ತ್ವವಿರಲೇಬೇಕು. ಆದ್ದರಿಂದ ಅವರನ್ನು ಮೂರ್ಖರೆಂದಾಗಲೀ, ಅತ್ಯಾಚಾರಿಗಳೆಂದಾಗಲೀ ಹೇಳಿ ದೂಷಿಸಲಾಗುವುದಿಲ್ಲ. ಹಿಂದೂಗಳ ಸಂಬಂಧವಾಗಿ ಮ್ಯಾಕ್ಸ್‌ಮುಲ್ಲರನು ಇದು ದಾರ್ಶನಿಕರ ಜಾತಿಯಾಗಿದೆ ಎಂದೇನು ಹೇಳಿದ್ದಾನೋ ಅದನ್ನು ನಿಸ್ಸಂಕೋಚವಾಗಿ ಸ್ವೀಕರಿಸಬಹುದಾಗಿದೆ. ಹಿಂದೂಗಳ ಸಮಸ್ತ ಧಾರ್ಮಿಕ ಹಾಗೂ ಸಾಮಾಜಿಕ ವ್ಯವಸ್ಥೆಯು ಅವರ ನೂರಾರು ವರ್ಷಗಳ ಗಂಭೀರ ಚಿಂತನೆ ಹಾಗೂ ಎಚ್ಚರಿಕೆಯಿಂದ ಲಿಪಿಬದ್ಧವಾಗಿಸಿದ ಅನುಭವದ ಫಲಸ್ವರೂಪವಾಗಿದೆ. ನಾವು ಆಂಗ್ಲೇಯರು ಅವರಿಗೆ ಯಾಂತ್ರಿಕ ಕಲೆಗಳು ಮತ್ತು ಪ್ರಯೋಗಗಳ ಮೂಲಕ ವಿಜ್ಞಾನದ

ಕೇಳಿಬರುತ್ತಿದೆ. ಇಂದು ಭಾರತ ಸರ್ವಥಾ ತನ್ನತನವನ್ನು ಮರೆತುಕೊಂಡಿದೆ. ಅದು ಬುದ್ಧಿಯಲ್ಲಿ ಗುಲಾಮವಾಗಿಹೋಗಿದೆ. ಶರೀರವು ಸ್ವತಂತ್ರವಾಗಿರಬಹುದು - ಆದರೆ ಒಳಗಾದರೋ ಇತರರ ದಾಸತ್ವವನ್ನು ಚೆನ್ನಾಗಿ ಸ್ವೀಕಾರ ಮಾಡಿಯಾಗಿದೆ. ಪ್ರಾಚೀನ ಭಾರತ ವರ್ಷಕ್ಕೆ -ಆರ್ಯಾವರ್ತಕ್ಕೆ ಮತ್ತು ಎಲ್ಲಕ್ಕಿಂತ ಪ್ರಧಾನವಾದ ಮತ್ತು ಸುಸಭ್ಯವಾದ ಪ್ರಾಚೀನ ಆರ್ಯಜಾತಿಗೆ ಇದೇ ಈ ಯುಗದ ದೊಡ್ಡ ಕೊಡುಗೆಯಾಗಿದೆ.

ಭಾರತೀಯ ಆದರ್ಶ ಕರ್ತವ್ಯಪಾಲನೆಯಾಗಿದೆ ಮತ್ತು ಯೂರೋಪಿನ ಆದರ್ಶ ಅಧಿಕಾರ ಪ್ರಾಪ್ತಿಯಾಗಿದೆ. ಕರ್ತವ್ಯಪಾಲನೆಯಲ್ಲಿ ಎಲ್ಲರ ಅಧಿಕಾರಗಳು ತಮಗೆ-ತಾವೇ ಸುರಕ್ಷಿತವಾಗಿರುತ್ತವೆ ಮತ್ತು ಅಧಿಕಾರದ ಹೋರಾಟದಲ್ಲಿ ಯಾರ ಅಧಿಕಾರವೂ ಸುರಕ್ಷಿತವಾಗಿಲ್ಲ, ಏಕೆಂದರೆ ಅಧಿಕಾರ ಕುರುಡಾಗಿರುತ್ತದೆ. ಅವನು ಕೇವಲ ತನ್ನ ಸ್ವಾರ್ಥವನ್ನೇ ನೋಡುತ್ತಾನೆ. ಅವನಿಗೆ ಬೇರೆಯವರ ಹಿತದ ಚಿಂತೆ ಅಲ್ಪ - ಸ್ವಲ್ಪವೂ ಇರುವುದಿಲ್ಲ. ಇದಕ್ಕೆ ವಿರುದ್ಧವಾಗಿ ಕರ್ತವ್ಯವು ಪ್ರಕಾಶರೂಪವಾಗಿರುತ್ತದೆ. ಇದರಲ್ಲಿ ಅವನು ಪರಹಿತಕ್ಕಾಗಿ ತ್ಯಾಗಮಾಡುತ್ತಾನೆ. ಆದ್ದರಿಂದ ಎಲ್ಲರಿಗೂ ಅವರವರ ಪ್ರಾಪ್ಯ ಅಧಿಕಾರಗಳು ತನ್ನಷ್ಟಕ್ಕೆ ತಾನೇ ಸಿಕ್ಕಿಬಿಡುತ್ತವೆ. ಹೀಗೆ ಇವನು ಕರ್ತವ್ಯ ಪಾಲನೆ ಮೂಲಕ ಎಲ್ಲರನ್ನೂ ರಕ್ಷಿಸುತ್ತಾನೆ ಮತ್ತು ಅವನು ಕರ್ತವ್ಯ - ಶೂನ್ಯ ಅಧಿಕಾರ ಪ್ರಹಾರಗೈದು ಎಲ್ಲರ ಸಂಹಾರಮಾಡಲು ಬಯಸುತ್ತಾನೆ. ಆದ್ದರಿಂದ ಇಂದು ಶಾಸಕ-ಶಾಸಿತ, ಬಂಡವಾಳಗಾರ-ಕೂಲಿಗಾರ, ಮಾಲೀಕ-ನೌಕರ, ಬ್ರಾಹ್ಮಣ-ಬ್ರಾಹ್ಮಣೇತರ, ನೆರೆ-ಹೊರೆಯವನು, ಪಿತಾ-ಪುತ್ರ, ಗುರು-ಶಿಷ್ಯ ಮತ್ತು ಅಣ್ಣ-ತಮ್ಮಂದಿರು ಮೊದಲಾದವರೆಲ್ಲರಲ್ಲಿ ಜಗಳವುಂಟಾಗುತ್ತಿದೆ. ಆ ಜಗಳ ಎಲ್ಲಿಯವರೆಗೆ ಮುಂದುವರಿದಿದೆಯೆಂದರೆ ಇಂದು ಎರಡು ದೇಹ ಒಂದು ಪ್ರಾಣರಾದ

---

ವಿಷಯದಲ್ಲಿ ಏನಾದರೂ ಸ್ವಲ್ಪ ಕಲಿಸಬಹುದು; ಆದರೆ ಸಾಮಾಜಿಕ ವಿಜ್ಞಾನದ ವಿಷಯದಲ್ಲಿ ನಾವು ಅವರಿಗೆ ಏನನ್ನೂ ಕಲಿಸಲಾರೆವು. ಯಾವ ಉಪಾಯಗಳಿಂದ ಸಮಾಜದಲ್ಲಿ ಸುಖ-ಸಮೃದ್ಧಿ ಹಾಗೂ ಶಾಂತಿಯ ಪ್ರತಿಷ್ಠೆ ಉಂಟಾಗಬಹುದಾಗಿದೆಯೋ ಅಂತಹ ಎಲ್ಲ ಉಪಾಯಗಳನ್ನು ಹಿಂದೂಗಳು ಬಹಳ ಹಿಂದೆಯೇ ಪ್ರಕೃತಿಯ ಶಾಶ್ವತ ತಥ್ಯದ ಆಧಾರದ ಮೇಲೆ ಸ್ಥಾಪಿಸಿ ಸುವ್ಯವಸ್ಥಿತ ರೂಪವನ್ನು ಕೊಟ್ಟಿದ್ದಾರೆ. ಆ ಎಲ್ಲ ವಿಧಾನಗಳಲ್ಲಿ ನಾವು ನಮ್ಮ ಅಪರಿಪಕ್ವವಾದ ವಿಚಾರಗಳನ್ನು ತುರುಕುವ ಪ್ರಯತ್ನ ಮಾಡಿದಲ್ಲಿ ಹಾನಿಯುಂಟಾಗುವ ಸಂಭವವಿದೆ. ಅದರ ಪರಿಣಾಮವಾಗಿ-ಹಿಂದೂಗಳಲ್ಲಿಯ ಪರಸ್ಪರ ವಿರೋಧಿ ಸ್ವಾರ್ಥಗಳ ಅರ್ಥವಿಲ್ಲದ ಸಂಘರ್ಷವು ಪ್ರಾರಂಭವಾಗುವುದು. ಇದು ನಮ್ಮಲ್ಲಿನ ನಿಂದನೀಯ ಸಾಮಾಜಿಕ ಅವಸ್ಥೆಯನ್ನು ತೋರಿಸಿಕೊಡುತ್ತದೆ.

ಪತಿ-ಪತ್ನಿಯರಲ್ಲಿ ಕೂಡ ಅಧಿಕಾರದ ಪ್ರಶ್ನೆ ಬಂದುಬಿಟ್ಟಿದೆ. ಇದರಿಂದಾಗಿಯೇ ಯೂರೋಪು ಮೊದಲಾದ ದೇಶಗಳಲ್ಲಿ ಕೂಲಿಗಾರರ ಸಂಘವಿರುವಂತೆ ಪತ್ನಿಯರ ಸಂಘಗಳು ಕೂಡ ಆಗಿವೆ ಮತ್ತು ಕೂಲಿಗಾರರು ತಮ್ಮ ಅಧಿಕಾರಗಳಿಗಾಗಿ ಸೆಣಸುವಂತೆ, ಬೇಡಿಕೆಗಳನ್ನು ಮುಂದು-ಮಾಡುವಂತೆ, ಹರತಾಳ ಮಾಡುವಂತೆ ಪತ್ನಿ-ಸಂಘಗಳೂ ಕೂಡ ಸಾಮೂಹಿಕ ರೂಪದಲ್ಲಿ ಪತಿಯರಿಂದ ಅಧಿಕಾರವನ್ನು ಬಯಸುತ್ತವೆ.* ಕರ್ತವ್ಯ ಪಾಲನೆಯಿಂದ ಯಾವ ನಾರಿ ಮನೆಯ ಸಮ್ರಾಜ್ಞಿ ಯಾಗುತ್ತಾಳೆಯೋ, ಮನೆಯಲ್ಲಿ ಏಕಚ್ಛತ್ರ ಶಾಸನ ಮಾಡುತ್ತಾಳೆಯೋ, ಅವಳೇ ಅಧಿಕಾರದ ಚಿಂತೆಯಲ್ಲಿ ಮುಳುಗಿ, ಕರ್ತವ್ಯಶೂನ್ಯಳಾಗಿ ಇಂದು ರಾಜಮಾರ್ಗದಲ್ಲಿ ಘೋಷಣೆಗಳನ್ನು ಕೂಗುತ್ತ ಅಲೆಯುತ್ತಾಳೆ. ಕರ್ತವ್ಯ ಪಾಲನೆಯಲ್ಲಿ ತ್ಯಾಗವಿದೆ ಮತ್ತು ತ್ಯಾಗದಿಂದಲೇ ನಾರಿಯ ಅಧಿಕಾರಗಳ ರಕ್ಷಣೆಯಾಗುತ್ತದೆ. ಘೋಷಣೆಗಳು ಮತ್ತು ಆಂದೋಳನಗಳಿಂದ ಅಧಿಕಾರವನ್ನು ಕಿತ್ತುಕೊಳ್ಳಲಾಗುತ್ತದೆ. ಇದನ್ನು ಗಮನದಲ್ಲಿ ಇಟ್ಟುಕೊಳ್ಳಬೇಕು.

ಪತಿಯು ಪತ್ನಿಯ ಅರ್ಧಾಂಗನಾಗಿದ್ದಾನೆ ಹಾಗೆಯೇ ಪತ್ನಿಯು ಪತಿಯ ಅರ್ಧಾಂಗಿಯಾಗಿದ್ದಾಳೆ. ಇಬ್ಬರೂ ಕೂಡಿ ಪೂರ್ಣವಾಗುತ್ತಾರೆ. ಒಂದು ವೇಳೆ ಪ್ರತ್ಯೇಕ ಅರ್ಧವು ತನ್ನ ತನ್ನ ಕಡೆಗೆ ಎಳೆದಾಡತೊಡಗಿದರೆ, ಒಂದು ವೇಳೆ ಜೋರಾಗಿ ಎಳೆದಾಡಿದಾಗ ಎರಡೂ ಅರ್ಧಗಳು ಬೇರೆಬೇರೆಯಾದರೆ ಅವುಗಳ ಸ್ಥಿತಿಯೇನಾಗುತ್ತದೆ ಎಂದು ಸ್ವಲ್ಪ ವಿಚಾರ ಮಾಡಿ ನೋಡಿ. ಇಬ್ಬರೂ ಸಾಯುತ್ತಾರೆ; ಆದರೆ ಇದಕ್ಕೆ ವಿಪರೀತವಾಗಿ ಇಬ್ಬರೂ ದೃಢತೆಯಿಂದ ಹೊಂದಾಣಿಕೆಯಿಂದ ಕೂಡಿಕೊಂಡಿದ್ದರೆ ಒಬ್ಬರು ಇನ್ನೊಬ್ಬರಿಗೆ ಸಹಾಯಕರಾಗಿ ಪರಸ್ಪರ ಪುಷ್ಟಿಯನ್ನೂ, ತುಷ್ಟಿಯನ್ನೂ ಉಂಟುಮಾಡುತ್ತಿದ್ದಲ್ಲಿ ಇಬ್ಬರೂ ಅತ್ಯಂತ ಸುಖಿಗಳಾಗಿರುವರು ಮತ್ತು ಇಬ್ಬರ ಐಕ್ಯತೆಯಲ್ಲಿ ಬಹಳವಾದ ವಿಲಕ್ಷಣ ಸೌಂದರ್ಯ ಮತ್ತು ಮಾಧುರ್ಯ ಪ್ರಕಾಶಮಾನವಾಗುವುದು. ಪ್ರಪಂಚದ ಕಾರ್ಯವೂ ಆಗಲೇ ಸುಗಮವಾಗಿ ನಡೆಯುವುದು.

---

* ಇನ್ನೂ ಕೆಲವು ವರ್ಷಗಳ ಹಿಂದಿನ ಮಾತು. ಬ್ರಿಟನ್ನಿನ ವಿವಾಹಿತ ನಾರೀಸಂಘವು ಒಂದು ಹೊಸ ಆಂದೋಳನವನ್ನು ಪ್ರಾರಂಭಿಸಿದೆ. ಅಲ್ಲಿ ವಿವಾಹ-ವಿಚ್ಛೇದನಕ್ಕೆ ಸಂಬಂಧಿಸಿದ ಕೋರ್ಟು ವ್ಯವಹಾರದಲ್ಲಿ ವ್ಯಭಿಚಾರಿಣಿಯಾದ ಸ್ತ್ರೀಯ ಪತಿಗೆ, ಆ ಸ್ತ್ರೀಯ ಪ್ರೇಮೀಪುರುಷನ ಮುಖಾಂತರ ಜೀವನಾಂಶವನ್ನು ಕೊಡಿಸಲಾಗುತ್ತದೆ. ಈಗ ಮಹಿಳಾ ಸಂಘ ಹೇಳುತ್ತದೆ - ಯಾವ ಸ್ತ್ರೀ ಬೇರೆಯವರ ಜೊತೆಗೆ ಹೊರಟು ಹೋಗುತ್ತಾಳೋ, ಅವಳದ್ದಾದರೋ ಮೌಲ್ಯವನ್ನು ಕೋರ್ಟು ನಿರ್ಧರಿಸುತ್ತದೆ. ಆದರೆ ಯಾರು ಮನೆಯ ಕೆಲಸ-ಕಾರ್ಯವೆಂದು ದುಡಿಯುತ್ತಾಳೋ ಅವಳಿಗೆ ಯಾವ ಬೆಲೆಯೂ ಇಲ್ಲ, ಆದ್ದರಿಂದ ಜೀವನಾಂಶದ ಪದ್ಧತಿಯನ್ನು ಸರ್ವಥಾ ನಿಲ್ಲಿಸಬೇಕು. ಅಭಿಪ್ರಾಯವೇನೆಂದರೆ - ಓಡಿಸುವ ದುಷ್ಟರಿಗೆ ಯಾವ ಜೀವನಾಂಶದ ಹೆದರಿಕೆ ಇದೆಯೋ ಅದೂ ಇಲ್ಲದಿರಲಿ.

ಪತಿ ಮತ್ತು ಪತ್ನೀ ಇಬ್ಬರೂ ಗಾಡಿಯ ಎರಡು ಚಕ್ರಗಳಿದ್ದಂತೆ. ಇಬ್ಬರೂ ಪರಸ್ಪರ ಸಹಯೋಗ ಮತ್ತು ಬಲಕೊಡುತ್ತಾ ಗೃಹಸ್ಥರೂಪಿ ಗಾಡಿಯನ್ನು ನಡೆಸುತ್ತಾರೆ. ಎರಡು ಚಕ್ರಗಳೂ ಎರಡು ಕಡೆಗಳಲ್ಲಿದ್ದರೇನೇ ಗಾಡಿಯು ಹಾಗೂ ಗತಿಶೀಲವಾಗಿ ಚಲಿಸುತ್ತದೆ. ಆದರೆ ಎರಡು ಚಕ್ರಗಳನ್ನು ಒಂದೇ ಕಡೆಗೆ ಹಾಕಿದರೆ ಗಾಡಿ ಓಡಲಾರದು, ಹಾಗೆಯೇ ಒಂದು ಚಕ್ರ ಶಕ್ತಿಹೀನವಾದರೆ ಅಥವಾ ಅದರ ಗತಿ ಕುಂಠಿತವಾದರೆ ಗಾಡಿ ಮುಂದೆ ಹೋಗಲಾರದು. ಇಂದು ಜನರು ಇಬ್ಬರಿಗೂ ಸಮಾನ ಅಧಿಕಾರಗಳಿವೆ, ಆದ್ದರಿಂದ ಇಬ್ಬರೂ ಸಮಾನವಾಗಿ ಕಾರ್ಯಮಾಡಬೇಕು ಎಂದು ಹೇಳುತ್ತಾರೆ. ಆದರೆ - ಇಬ್ಬರೂ ಸಮಾನ ಕಾರ್ಯಮಾಡತೊಡಗಿದರೆ ಎರಡೂ ಚಕ್ರಗಳನ್ನು ಒಂದೇ ಕಡೆ ಅಳವಡಿಸುವುದರಿಂದ ಹೇಗೆ ಗಾಡಿಯು ಬಿದ್ದುಹೋಗುತ್ತದೆಯೋ, ಅದೇ ಸ್ಥಿತಿ ಗಾರ್ಹಸ್ಥ್ಯಕ್ಕೂ ಉಂಟಾಗುತ್ತದೆ. ಮತ್ತು ಇಬ್ಬರನ್ನೂ ಒಂದೇ ಕಡೆ ಅಳವಡಿಸುವುದರಿಂದ ಒಬ್ಬರಿಂದೊಬ್ಬರಿಗೆ ಸಮಾನಬಲ ದೊರಕುವುದು ಅಸಂಭವವಾಗುವುದರಿಂದ ಇಬ್ಬರ ಚಲನ-ವಲನವು ನಿಂತುಹೋಗಿ ಇಬ್ಬರೂ ನಿಷ್ಕ್ರಿಯರಾಗುವರು, ನಿರುಪಯೋಗಿಗಳಾಗುವರು.

ಆದ್ದರಿಂದಲೇ ವಿವಾಹ-ಸಂಸ್ಕಾರದ ಮೂಲಕ ಗೃಹಸ್ಥಾಶ್ರಮದ ಸಂಚಾಲನೆಗಾಗಿ ಸ್ತ್ರೀ-ಪುರುಷ ರೂಪರಾದ ಎರಡೂ ಚಕ್ರಗಳು, ಒಂದು ಮನೆಯಕಡೆಗೆ ಹಾಗೂ ಇನ್ನೊಂದು ಹೊರಗಿನ ಕಡೆಗೆ ಜೋಡಿಸಲಾಗುತ್ತದೆ. ಈ ಚಕ್ರಗಳು ಸೇರಿದುವೆಂದರೆ ಗಾರ್ಹಸ್ಥ್ಯದ ಬಂಡಿಯು ಚಲಿಸಿತೆಂದೂ ಮತ್ತು ಧರ್ಮ - ಸಂಪಾದನೆ ಆರಂಭವಾಯಿತೆಂದುಸಿದ್ಧ. ಇದೇ ಧರ್ಮ-ಇಬ್ಬರ ಮೂಲಕ ತಮ್ಮ ತಮ್ಮ ಕ್ಷೇತ್ರಕ್ಕೆ ಅನುಕೂಲವಾದ ಕಾರ್ಯವೇನಿದೆಯೋ - ಅದು ಸ್ವಧರ್ಮವಾಗಿದೆ ಮತ್ತು ಇದೇ ಮೋಕ್ಷೋಪಯೋಗಿಯಾಗಿದೆ.

ಪುರುಷನು ಸ್ವತಂತ್ರನೆಂದೂ ಮತ್ತು ಸ್ತ್ರೀ ಪರತಂತ್ರಳೆಂದೂ ಹೇಳಲಾಗುತ್ತದೆ; ಆದರೆ ಧ್ಯಾನಿಸಿ ನೋಡಿದಾಗ ಇಬ್ಬರೂ ಶಾಸ್ತ್ರ-ಪರತಂತ್ರರೆಂದು ತಿಳಿಯುತ್ತದೆ. ಪರತಂತ್ರದ ಸ್ವರೂಪ ಬೇರೆ-ಬೇರೆಯಾಗಿವೆ. ನಾರಿಯನ್ನುಳಿದು ಪುರುಷನು ಅಪೂರ್ಣ ಮತ್ತು ಮತ್ತು ಪುರುಷನಿಲ್ಲದ ನಾರಿ ಅಪೂರ್ಣ. ಇಬ್ಬರದೂ ಅವಿನಾಭಾವ ಸಂಬಂಧವಾಗಿದೆ: ಇಬ್ಬರಿಗೂ ಒಬ್ಬರಿಗೊಬ್ಬರ ಅವಶ್ಯಕತೆಯಿದೆ - ಅದು ಅನಿವಾರ್ಯ. ಇಬ್ಬರಲ್ಲಿ ಪರಸ್ಪರ ಸಹಕಾರಿತ್ವ ಸಹಯೋಗ ಮತ್ತು ಸೌಹಾರ್ದ ಹಾಗೂ ಏಕಾತ್ಮತೆ ಇರಬೇಕು. ಇಬ್ಬರಲ್ಲಿ ಜಾತಿಗತವಾದ ನಿಂದನೀಯ ದೋಷಗಳೂ ಇವೆ, ಜಾತಿಗಳ ಶ್ಲಾಘ್ಯದ

ಗುಣಗಳೂ ಸಹ ಇವೆ. ಇದಲ್ಲದೆ ಪೂರ್ವಸಂಸ್ಕಾರ ಹಾಗೂ ವರ್ತಮಾನ ವಾತಾವರಣಕ್ಕನುಗುಣವಾಗಿ ವ್ಯಕ್ತಿ ವಿಶೇಷದಲ್ಲಿ ವ್ಯಕ್ತಿಗತವಾದ ಗುಣ-ದೋಷಗಳಿರುತ್ತವೆ. ಆದ್ದರಿಂದ ಪುರುಷನಾಗಲೀ, ನಾರಿಯಾಗಲೀ, ಸರ್ವಥಾ ನಿಂದನೆ ಅಥವಾ ಪ್ರಶಂಸೆಗೆ ಪಾತ್ರರಲ್ಲ.

ಯಾರು ಒಬ್ಬರನ್ನು ನಿಂದಿಸಿ ಇನ್ನೊಬ್ಬರನ್ನು ಪ್ರಶಂಸಿಸುತ್ತಾರೋ ಅವರು ಪಕ್ಷಪಾತ ಅಥವಾ ಭ್ರಮೆಯಿಂದ ಹಾಗೆಮಾಡುತ್ತಾರೆ. ಜಗತ್ತಿನ ರಚನೆಯೇ ಪ್ರಕೃತಿಯ ಸಹಾಯದಿಂದ ಆಗಿದೆ. ಪ್ರಕೃತಿಯು ತ್ರಿಗುಣಾತ್ಮಕವಾಗಿರುವುದರಿಂದ ಜಗತ್ತಿನ ಯಾವುದೇ ಪ್ರಾಣಿಯಾಗಲಿ ಅದು ಈ ಮೂರು ಗುಣಗಳಿಂದ ರಹಿತವಾಗಿಲ್ಲ. ಕೆಲವು ವಿಶೇಷ ಕಾರಣಗಳಿಂದ ಯಾರಲ್ಲಿಯೋ ಸತ್ತ್ವಗುಣ ಅಧಿಕವಾಗಿದ್ದು ಮತ್ತಾರಲ್ಲಿಯೋ ರಜೋಗುಣ ಅಥವಾ ಇನ್ನಾರಲ್ಲಿಯೋ ತಮೋಗುಣದ ಆಧಿಕ್ಯ ಕಂಡುಬರುತ್ತದೆ. ಯಾವ ಪ್ರಾಣಿಯೂ ಇವುಗಳಿಂದ ಮುಕ್ತರಾಗಿಲ್ಲ. ಹೀಗಿರುವಾಗ ಇನ್ನು ನರ ಅಥವಾ ನಾರಿಯು ಇವುಗಳಿಂದ ಹೇಗೆ ಮುಕ್ತವಾಗಬಲ್ಲರು? ವ್ಯವಹಾರದಲ್ಲಿ ಹಾರ್ದಿಕ ಪ್ರೇಮವಿದ್ದಲ್ಲಿ ತನ್ನಿಂದ ತಾನೇ ದೋಷ ಕಂಡುಬರುವುದಿಲ್ಲ. ಮತ್ತದರ ಫಲವಾಗಿ ಒಬ್ಬರು ಇನ್ನೊಬ್ಬರ ಗುಣಗಳನ್ನೇ ನೋಡುವುದರಿಂದ ಸಹಜವಾಗಿಯೇ ಪರಸ್ಪರ ಪ್ರೇಮದ ವೃದ್ಧಿಯಾಗುವುದು. ಇದೇ ಪತಿ-ಪತ್ನಿಯರ ಪರಮ ಮನೋಹರವಾದ ಪ್ರೇಮ ಸಂಬಂಧವಾಗಿದೆ. ಈ ಎಲ್ಲ ವಿಷಯಗಳನ್ನರಿತೇ ಹಿಂದೂ ಗೃಹಸ್ಥರು ತಮ್ಮ ತಮ್ಮ ಸ್ವಧರ್ಮದಲ್ಲಿ ನಿರತರಾಗಿದ್ದು ಸುಖ-ಶಾಂತಿಪೂರ್ವಕ ಜೀವನವನ್ನು ನಡೆಸಿ ಕೊನೆಯಲ್ಲಿ ಪರಮಾತ್ಮನನ್ನು ಸೇರಬಲ್ಲರು. ಎಲ್ಲಿ ಪ್ರೇಮವಿದೆಯೋ ಅಲ್ಲಿ ಆನಂದವಿದೆ ಮತ್ತೆಲ್ಲಿ ದ್ವೇಷವಿದೆಯೋ ಅಲ್ಲಿ ದುಃಖ ಇದ್ದೇ ಇದೆ. ಸುಖಶಾಂತಿಯಲ್ಲಿ ಅಚಂಚಲವಾದ ಮನಸ್ಸಿರುತ್ತದೆ. ಚಂಚಲರಹಿತವಾದ ಸ್ಥಿರಮನಸ್ಸಿನಿಂದಲೇ ಭಗವಂತನ ಚಿಂತನೆಯಾಗುವುದು ಮತ್ತು ಅದರ ಪರಿಣಾಮವೇ ಪರಮ ಶಾಂತಿ ಮುಕ್ತಿ ಅಥವಾ ಭಗವಂತನ ಪ್ರಾಪ್ತಿಯಾಗಬಲ್ಲದು. ಭಾರತೀಯ ನರ-ನಾರಿಯರು ಈ ಮುಕ್ತಿಪಥದಲ್ಲಿ ನಡೆದು ತಮ್ಮ ಜೀವನವನ್ನು ಧನ್ಯವಾಗಿಸಿಕೊಳ್ಳಲಿ ಮತ್ತು ಇಡೀ ಪ್ರಪಂಚದ ಮುಂದೆ ತಮ್ಮ ಆದರ್ಶವನ್ನು ತೋರಿಸಲಿ. ಆಗಲೇ ಅವರ ಮತ್ತು ಜಗತ್ತಿನ ಕಲ್ಯಾಣವಾಗುವುದು. ಕಲ್ಯಾಣಮಯನಾದ ಭಗವಂತನು ಎಲ್ಲರಿಗೂ ಮಂಗಳವನ್ನುಂಟುಮಾಡಲಿ.

□□

## ೨೭. ಹಿಂದೂ-ಶಾಸ್ತ್ರಗಳಲ್ಲಿ ನಾರಿಯ ಮಹಾನ್ ಆದರ

ಹಿಂದೂಶಾಸ್ತ್ರಗಳಲ್ಲಿ ನಾರಿಯನ್ನು ತಿರಸ್ಕರಿಸಲಾಗಿದೆಯೆಂದು ಇಂದು ಕೆಲವು ಜನರು ಹೇಳುತ್ತಾರಲ್ಲದೆ ನಮ್ಮ ಕೆಲವು ಹಿಂದೂ-ದೇವಿಯರೂ ಕೂಡಾ ಅಜ್ಞಾನವಶರಾಗಿ ಇದನ್ನೇ ತಿಳಿಯಲು ಮತ್ತು ಹೇಳಲು ತೊಡಗಿದ್ದಾರೆ. ಆದರೆ ವಾಸ್ತವವಾಗಿ ಹೀಗಿಲ್ಲ, ಹಿಂದೂ-ವಿವಾಹವು ಪವಿತ್ರ ಧಾರ್ಮಿಕ ಸಂಸ್ಕಾರ. ಹಿಂದೂ ನಾರಿ ಪತಿಯ ಅರ್ಧಾಂಗಿನಿ. ಪತಿಯ ಮೇಲೆ ಅವಳಿಗೆ ಪೂರ್ಣಾಧಿಕಾರವಿದೆ. ಅವಳು ಭೋಗದ-ಪದಾರ್ಥವಲ್ಲ; ಅವಳಾದರೋ ಪವಿತ್ರ ಸಂಸ್ಕಾರವತಿಯಾಗಿದ್ದು ಸಂಸಾರ-ಸಾಗರವನ್ನು ದಾಟಿ ಮೋಕ್ಷವನ್ನು ಪಡೆಯುವವಳೂ, ಪತಿಯನ್ನು ಸಹ ತನ್ನ ಪವಿತ್ರ ಭಾವಗಳಿಂದ ಪರಮಧಾಮಕ್ಕೆ ಕರೆದೊಯ್ಯುವ ದೇವಿಯಾಗಿದ್ದಾಳೆ. ಸತ್ಯವೇನೆಂದರೆ ನಾರಿಯನ್ನು ಭೋಗದ ವಸ್ತುವಾಗಿ ಭಾರತೇತರ ದೇಶಗಳು ತಿಳಿದಿವೆ. ಆದ್ದರಿಂದಲೇ ಅಲ್ಲಿ ಶಾರೀರಿಕ ಬಾಹ್ಯ ಸೌಂದರ್ಯಕ್ಕೆ ಪ್ರಾಧಾನ್ಯತೆಯಿದ್ದು ಇದೇ ಕಾರಣ ಸಣ್ಣ - ಪುಟ್ಟ ಮಾತಿನಿಂದ ಪವಿತ್ರ ವಿವಾಹ - ಬಂಧನ ಮುರಿದುಬೀಳುತ್ತದೆ. ಈ ಪಾಶವೀ ಮನೋಭಾವವನ್ನು ಅಲ್ಲಿ ಸ್ವತಂತ್ರ ಪ್ರೇಮವೆಂದು ಹೇಳಲಾಗಿದೆ. ಆ ಪ್ರೇಮವು ಕೇವಲ ಭೋಗಕ್ಕೆ ಮಾತ್ರ ಸೀಮಿತವಾಗಿದೆಯಾದ್ದರಿಂದ ಅದು ಯಾವಾಗಲೋ ಅವನೊಡನೆ ಮತ್ಯಾವಾಗಲೋ ಇವನೊಡನೆ ಆಗಬಹುದಾಗಿದೆ. ಆದ್ದರಿಂದಲೇ ಭಾರತೇತರ ದೇಶಗಳಲ್ಲಿ ನಾರಿಯು ಮನೆಯ ಸಮ್ರಾಜ್ಞಿಯಾಗಲೀ, ಪತಿಯ ಅರ್ಧಾಂಗಿಯಾಗಲಿ ಇಲ್ಲ. ನಾರಿಯ ವಿಷಯವಾಗಿ ಹಿಂದೂ-ಶಾಸ್ತ್ರಗಳ ವಿಚಾರಗಳು ಬಹು ಉನ್ನತವಾಗಿವೆ, ಆದರಣೀಯವೂ ಹಾಗೂ ನಾರೀಜಾತಿಯ ಗೌರವವನ್ನು ಹೆಚ್ಚಿಸುವಂಥವುಗಳಾಗಿವೆ. ಮನುವಿನ ಆ ಪವಿತ್ರ ಉದ್ಗಾರಗಳನ್ನು ಓದಿ ಯೂರೋಪಿನ ಪ್ರಸಿದ್ಧ ವಿದ್ವಾಂಸ 'ನೀತ್ಸೆ' ಮಹಾಶಯರು ಆಶ್ಚರ್ಯ ಚಕಿತರಾಗಿ ಹೀಗೆ ಬರೆದಿದ್ದಾರೆ-

I know of no book in which so many delicate and kindly things are said of the woman as in the law-book of Manu, these old grayheads and saints have a manner of being gallant to woman which perhaps cannot be surpassed. (Antichrist, pp214, 15)

ಅಂದರೆ ಸ್ತ್ರೀಯರ ಬಗೆಗೆ ಇಷ್ಟು ಮಮತಾಪೂರ್ಣವೂ ದಯಾಪೂರ್ಣವೂ ಆದ ಉದ್ಗಾರವಿರಬಹುದಾದ ಪುಸ್ತಕವು, ಮನುಸ್ಮೃತಿಯೊಂದರ ಹೊರತಾಗಿ ಬೇರೆಯಾವುದನ್ನೂ ನಾನು ನೋಡಿಲ್ಲ. ಸಾಧನೆ ಮಾಡುತ್ತಾ-ಮಾಡುತ್ತಾ ಯಾರ ಕೂದಲು ಬೆಳ್ಳಗಾಗಿದೆಯೋ ಅಂತಹ ಪ್ರಾಚೀನ ಋಷಿಗಳಲ್ಲಿ-ಸಂತರಲ್ಲಿ ಸ್ತ್ರೀಯರ ಪ್ರತಿ ಎಂತಹ ಅದ್ಭುತ ಸಮ್ಮಾನದ ಭಾವವಿತ್ತೋ ಅದನ್ನು ಅತಿಕ್ರಮಿಸಲಾಗದು ಅದನ್ನು ಅಲ್ಲಗಳೆಯುವಂತಿಲ್ಲ.

ಇಲ್ಲಿ ಹಿಂದೂ-ಶಾಸ್ತ್ರಗಳಲ್ಲಿ ನಾರಿಯ ಸಮ್ಮಾನಕ್ಕೆ ಸಂಬಂಧಿಸಿದ ವಿಚಾರಗಳನ್ನೊಳಗೊಂಡ ಕೆಲವು ಶ್ಲೋಕಗಳನ್ನು ಉದಾಹರಣೆಗಾಗಿ ಕೊಡಲಾಗುತ್ತದೆ:-

ಋಗ್ವೇದದ ದಶಮ ಮಂಡಲದ ಎಂಭತ್ತೈದನೇ ಸೂಕ್ತದ ಸೂರ್ಯಾ ಎಂಬ ಋಷಿಕೆಯು ಭಗವಂತನಲ್ಲಿ ಸ್ತ್ರೀಯು ಸೌಭಾಗ್ಯವತಿಯಾಗಿರುವಂತೆ ಪ್ರಾರ್ಥನೆ ಮಾಡಿದ್ದಾಳೆ ಮತ್ತು ಸ್ತ್ರೀಯ ಬಗೆಗೆ ಹೇಳಿದ್ದಾಳೆ-

**ಸಮ್ರಾಜ್ಞೀ ಶ್ವಶುರೇ ಭವ ಸಮ್ರಾಜ್ಞೀ ಶ್ವಶ್ರ್ವಾಂ ಭವ ।**
**ನನಾಂದರಿ ಸಮ್ರಾಜ್ಞೀ ಭವ ಸಮ್ರಾಜ್ಞೀ ಅಧಿ ದೇವೃಷು ॥**

ವಧುವೇ! ನೀನು ಮಾವನ ಮನೆಯಲ್ಲಿ ಹೋಗಿ ನಿನ್ನ ಸದ್-ವ್ಯವಹಾರಗಳಿಂದ ಅತ್ತೆ, ಮಾವ, ನಾದಿನಿಯರ ಮೇಲೆ ಆಧಿಪತ್ಯವನ್ನು ಸ್ಥಾಪಿಸಿ ಎಲ್ಲರ ಮಹಾರಾಣಿಯಾಗಿರು.

ಮನು ಮಹರಾಜರು ಹೇಳಿದ್ದಾರೆ:-

**ಪಿತೃಭಿರ್ಭ್ರಾತೃಭಿಶ್ಚೈತಾಃ ಪತಿಭಿರ್ದೇವರೈಸ್ತಥಾ ।**
**ಪೂಜ್ಯಾ ಭೂಷಯಿತವ್ಯಾಶ್ಚ ಬಹುಕಲ್ಯಾಣಮೀಪ್ಸುಭಿಃ ॥**

**ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೆ ತತ್ರ ದೇವತಾಃ ।**
**ಯತ್ರೈತಾಸ್ತು ನ ಪೂಜ್ಯಂತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥**

**ಶೋಚಂತಿ ಜಾಮಯೋ ಯತ್ರ ವಿನಶ್ಯತ್ಯಾಶು ತತ್ಕುಲಮ್ ।**
**ನ ಶೋಚಂತಿ ತು ಯತ್ರೈತಾ ವರ್ಧತೇ ತದ್ಧಿ ಸರ್ವದಾ ॥**

**ಜಾಮಯೋ ಯಾನಿ ಗೇಹಾನಿ ಶಪಂತ್ಯಪ್ರತಿಪೂಜಿತಾಃ ।**
**ತಾನಿ ಕೃತ್ಯಾಹತಾನೀವ ವಿನಶ್ಯಂತಿ ಸಮಂತತಃ ॥**

**ತಸ್ಮಾದೇತಾಃ ಸದಾ ಪೂಜ್ಯಾ ಭೂಷಣಾಚ್ಛಾದನಾಶನೈಃ ।**
**ಭೂತಿಕಾಮೈರ್ನರೈರ್ನಿತ್ಯಂ ಸತ್ಕಾರೇಷೂತ್ಸವೇಷು ಚ ॥**

(ಮನುಸ್ಮೃತಿ ೩/೫೫-೫೯)

ಪರಮಕಲ್ಯಾಣವನ್ನು ಬಯಸುವ ತಂದೆ, ಸಹೋದರ, ಪತಿ, ಮೈದುನ ಇವರೆಲ್ಲರೂ ಸ್ತ್ರೀಯರನ್ನು ಸತ್ಕರಿಸಬೇಕು ಮತ್ತು ಅವರನ್ನು ಭೂಷಣ-ವಸ್ತ್ರಾದಿಗಳಿಂದ ಅಲಂಕರಿಸಬೇಕು. ಯಾವ ಪರಿವಾರದಲ್ಲಿ ಸ್ತ್ರೀಯರನ್ನು ಗೌರವಿಸಲಾಗುತ್ತದೆಯೋ ಅಲ್ಲಿ ಎಲ್ಲ ದೇವತೆಗಳು ಪ್ರಸನ್ನರಾಗಿ ವಾಸಿಸುತ್ತಾರೆ. ಆ ಕುಲಕ್ಕೆ ದೇವತೆಗಳ ಆಶೀರ್ವಾದ ಲಭಿಸುತ್ತದೆ. ಇದಲ್ಲದೆ ಯಾವ ಕುಲದಲ್ಲಿ ಸ್ತ್ರೀಯರ ಆದರ-ಸತ್ಕಾರವಾಗುವುದಿಲ್ಲವೋ, ಆ ಕುಲದ ಸಂಪೂರ್ಣ ಕ್ರಿಯೆಗಳು, ಎಲ್ಲ ಧರ್ಮ-ಕರ್ಮಗಳು ನಿಷ್ಫಲವಾಗುತ್ತವೆ. ಯಾವ ಕುಲದಲ್ಲಿ ಸಹೋದರಿ, ಮಗಳು, ಸೊಸೆ ಮತ್ತು ಮಾತೆ ಇತ್ಯಾದಿ ಎಲ್ಲ ಸ್ತ್ರೀಯರು ದುಃಖಿಗಳಾಗಿರುತ್ತಾರೆಯೋ ಅದು ಶೀಘ್ರವಾಗಿಯೇ ನಾಶವಾಗಿಬಿಡುತ್ತದೆ. ಯಾವ ಕುಲದಲ್ಲಿ ಸ್ತ್ರೀಯರು ದುಃಖಿತರಾಗಿರುವುದಿಲ್ಲವೋ ಅದು ಯಾವಾಗಲೂ ವೃದ್ಧಿಯಾಗುತ್ತದೆ, ಉನ್ನತವಾಗುತ್ತದೆ. ಉಚಿತವಾದ ಸಮ್ಮಾನ ಸಿಗದಿರುವ ಕಾರಣ ಸ್ತ್ರೀಯರು ಯಾವ ಮನೆಗಳಿಗೆ ಶಾಪವನ್ನು ಕೊಟ್ಟುಬಿಡುತ್ತಾರೆಯೋ, ಆ ಮನೆಗಳು ದುಷ್ಕೃತ್ಯದಿಂದ ಬಾಧಿಸಲ್ಪಟ್ಟಂತೆ ಎಲ್ಲ ಕಡೆಯಿಂದ (ಧನ-ಧಾನ್ಯ, ಸುಖ-ಸಂಪತ್ತು, ಮಾನ-ಪ್ರತಿಷ್ಠೆ, ಧರ್ಮ-ಕರ್ಮ) ನಾಶವಾಗುತ್ತವೆ. ಆದ್ದರಿಂದ ಕಲ್ಯಾಣವನ್ನು ಬಯಸುವ ಪುರುಷರು ಸದಾ ವಸ್ತ್ರ ಆಭೂಷಣ ಮತ್ತು ಉತ್ತಮ ಭೋಜನಾದಿ ಗಳಿಂದ ಅಂದರೆ ಅವರನ್ನು ಈ ಎಲ್ಲ ಪದಾರ್ಥಗಳ ಸ್ವಾಮಿನಿಯರನ್ನಾಗಿ ಮಾಡಿ ಇವರನ್ನು ಆದರಿಸಲಿ ಮತ್ತು ಪ್ರತ್ಯೇಕ ಶುಭಸಂದರ್ಭಗಳಲ್ಲಿ, ಉತ್ಸವಾದಿ ಪರ್ವಗಳಲ್ಲಿ, ಅವರನ್ನು ಯಥಾ ಯೋಗ್ಯ ರೀತಿಯಲ್ಲಿ ಸತ್ಕರಿಸಲಿ.

**ಸ್ತ್ರೀಧನಾನಿ ತು ಯೇ ಮೋಹಾದುಪಜೀವಂತಿ ಬಾಂಧವಾಃ ।**
**ನಾರೀಯಾನಾನಿ ವಸ್ತ್ರಂ ವಾ ತೇ ಪಾಪಾ ಯಾಂತ್ಯಧೋಗತಿಮ್ ॥***

(೩/೫೨)

* ನಾರೀಯಾನಾನಿ ವಸ್ತ್ರಂ ವಾ ದ ಸ್ಥಾನದಲ್ಲಿ ಸ್ವರ್ಣಯಾನಾನಿ ವಸ್ತ್ರಾಣಿ ಈ ಪಾಠಭೇದದಿಂದ ಇದೇ ಶ್ಲೋಕ ಆಪಸ್ತಂಭಸ್ಮೃತಿಯಲ್ಲಿಯೂ ದೊರೆಯುತ್ತದೆ. (ನೋಡಿ ೯/೨೬)

ಯಾವ ಆತ್ಮೀಯರಾದ ಸಂಬಂಧಿಗಳು (ಪಿತಾ, ಸಹೋದರ, ಮಾವ ಮತ್ತು ಮೈದುನ ಮೊದಲಾದವರು) ಮೋಹಕ್ಕೆ ವಶರಾಗಿ ನಾರಿಯ ಧನ-ಸಂಪತ್ತು, ಅವಳ ಎತ್ತು-ಕುದುರೆ, ಗಾಡಿ ಮೊದಲಾದ ಸವಾರಿಗಳು ಮತ್ತು ಅವಳ ಒಡವೆ-ವಸ್ತ್ರಗಳು ಇವುಗಳನ್ನು ಅಪಹರಿಸಿ ಸ್ವಯಂ ಸುಖಪಡುತ್ತಾರೆಯೋ, ಅದರಿಂದ ತಮ್ಮ ಜೀವನವನ್ನು ನಡೆಸುತ್ತಾರೆಯೋ ಅಂತಹ ಪಾಪಬುದ್ಧಿಯ ಮನುಷ್ಯರು ಭಯಾನಕವಾದ ಅಧೋಗತಿಗೆ, ನರಕಗಳಿಗೆ ಹೋಗುತ್ತಾರೆ.

**ಜೀವಂತೀನಾಂ ತು ತಾಸಾಂ ಯೇ ತದ್ಧರೇಯುಃ ಸ್ವಬಾಂಧವಾಃ ।**
**ತಾಂಭಿಷ್ಯಾಚ್ಚೌರದಂಡೇನ ಧಾರ್ಮಿಕಃ ಪೃಥಿವೀಪತಿಃ ॥**

(ಮನು - ೮/೨೯)

ಯಾವ ನೆಂಟರಾದವರು (ಹತ್ತಿರದ ಸಂಬಂಧಿಗಳು) ನಾರಿಯ ಜೀವನ ಕಾಲದಲ್ಲಿಯೇ ಅವಳ ಧನವನ್ನು ಅಪಹರಿಸುತ್ತಾರೆಯೋ, ಅವರುಗಳಿಗೆ ಧಾರ್ಮಿಕ ರಾಜನು ಕಳ್ಳನೆಂದು ದಂಡಕೊಡಲಿ.

**ಸದ್ವೃತ್ತಚಾರಿಣೀಂ ಪತ್ನೀಂ ತ್ಯಕ್ತ್ವಾ ಪತತಿ ಧರ್ಮತಃ ।**

(ವ್ಯಾಸಸ್ಮತಿ ೨/೪೭)

ಸದಾಚಾರಿಣಿಯಾದ ಪತ್ನಿಯನ್ನು ತ್ಯಜಿಸಿದ ಪುರುಷನು ಧರ್ಮದಿಂದ ಪತಿತನಾಗುವನು.

**ಮಾನ್ಯಾ ಚೇನ್ಮ್ರಿಯತೇ ಪೂರ್ವಂ ಭಾರ್ಯಾ ಪತಿವಿಮಾನಿತಾ ।**
**ತ್ರೀಣಿ ಜನ್ಮಾನಿ ಸಾ ಪುಂಸ್ತ್ವಂ ಪುರುಷಃ ಸ್ತ್ರೀತ್ವಮರ್ಹತಿ ॥**

(ಕಾತ್ಯಾಯನಸ್ಮೃತಿ ೪/೧೪)

ಮಾನವನ್ನು ಪಡೆಯಲು ಯೋಗ್ಯಳಾದ ಸ್ತ್ರೀಯು ಒಂದು ವೇಳೆ ಪತಿಯ ಮುಖಾಂತರ ಅಪಮಾನಿತಳಾಗಿ ಮೊದಲು ಸತ್ತು ಹೋಗುತ್ತಾಳಾದರೆ ಆ ಸ್ತ್ರೀಯು ಮೂರು ಜನ್ಮಗಳವರೆಗೆ ಪುರುಷನಾಗುತ್ತಾಳೆ ಮತ್ತು ಆ ಪುರುಷನು ಮೂರು ಜನ್ಮಗಳವರೆಗೆ ಸ್ತ್ರೀಯಾಗುತ್ತಾನೆ.

**ಸ್ತ್ರಿಯೋ ವೃದ್ಧಾಶ್ಚ ಬಾಲಾಶ್ಚ ನ ದುಷ್ಯಂತಿ ಕದಾಚನ ।**

(ಪರಾಶರಸ್ಮೃತಿ ೭/೪೭)

ಸ್ತ್ರೀ, ವೃದ್ಧರು ಮತ್ತು ಬಾಲಕರು - ಎಂದಿಗೂ ದೂಷಿತರಾಗುವುದಿಲ್ಲ.

**ಪತಯೋಽರ್ಧೇನ ಚಾರ್ಧೇನ ಪತ್ನ್ಯೋಽಭೂವನ್ನಿತಿ ಶ್ರುತಿಃ ।**
**ಯಾವನ್ನ ವಿಂದತೇ ಜಾಯಾಂ ತಾವದರ್ಧೋ ಭವೇತ್ ಪುಮಾನ್ ॥**

(ವ್ಯಾಸಸ್ಮೃತಿ ೨/೧೩)

ಅರ್ಧದೇಹದಿಂದ ಪತಿಯಾಗಿದ್ದಾನೆ, ಅರ್ಧದಿಂದ ಪತ್ನಿಯಾಗಿದ್ದಾಳೆಂದು ಶ್ರುತಿಯು ಹೇಳುತ್ತದೆ. ಎಲ್ಲಿಯವರೆಗೆ ಪುರುಷನು ಸ್ತ್ರೀಯೊಡನೆ ವಿವಾಹ ವಾಗುವುದಿಲ್ಲವೋ ಅಲ್ಲಿಯವರೆಗೆ ಅವನು ಅರ್ಧವೇ ಆಗುತ್ತಾನೆ.

**ಕರ್ಮ ಕುರ್ಯಾತ್ ಪ್ರತಿದಿನಂ ವಿಧಿವತ್ ಪ್ರೀತಿಪೂರ್ವತಃ ।**
**ಸಮ್ಯಗ್ಧರ್ಮಾರ್ಥಕಾಮೇಷು ದಂಪತಿಭ್ಯಾಮಹರ್ನಿಶಮ್ ॥**
**ಏಕಚಿತ್ತತಯಾ ಭಾವ್ಯಂ ಸಮಾನವ್ರತವೃತ್ತಿತಃ ।**
**ನ ಪೃಥಗ್ವಿದ್ಯತೇ ಸ್ತ್ರೀಣಾಂ ತ್ರಿವರ್ಗವಿಧಿಸಾಧನಮ್ ॥**

(ವ್ಯಾಸಸ್ಮೃತಿ ೨/೧೭-೧೮)

ಪ್ರತಿದಿನ ವಿಧಿ ಮತ್ತು ಪ್ರೀತಿ ಪೂರ್ವಕವಾಗಿ ವೈಧ ಕರ್ಮಗಳನ್ನು ಮಾಡಬೇಕು. ಸ್ತ್ರೀಪುರುಷರು ಇಬ್ಬರೂ ಧರ್ಮ, ಅರ್ಥ, ಕಾಮಗಳಲ್ಲಿ ಹಗಲು-ರಾತ್ರಿ ಚೆನ್ನಾಗಿ ಏಕಮನಸ್ಸು, ಏಕವ್ರತ ಮತ್ತು ಏಕವೃತ್ತಿಯಿಂದ ತೊಡಗಿರಲಿ. ಸ್ತ್ರೀಯರಿಗೆ ಪತಿಗಿಂತ ಬೇರೆಯಾದ ಧರ್ಮ, ಅರ್ಥ, ಕಾಮದ ಯಾವ ವಿಧಾನವೂ ಇಲ್ಲ.

**ಪ್ರಜನಾರ್ಥಂ ಮಹಾಭಾಗಾಃ ಪೂಜಾರ್ಹಾ ಗೃಹದೀಪ್ತಯಃ ।**
**ಶ್ರಿಯಃ ಸ್ತ್ರೀಯಶ್ಚ ಲೋಕೇಷು ನ ವಿಶೇಷೋಽಸ್ತಿ ಕಶ್ಚನ ॥**

(ಮನು. ೯/೨೬)

ಸಂತಾನಕ್ಕೆ ಜನ್ಮಕೊಡುವವಳಾದ್ದರಿಂದ ಸ್ತ್ರೀಯರು ಮಹಾಭಾಗ್ಯ ಶಾಲಿಯಾಗಿದ್ದಾರೆ, ಅವರು ಮನೆಯ ಬೆಳಕು, ಅವರನ್ನು ವಸ್ತ್ರಾಭೂಷಣಗಳಿಂದ ಸನ್ಮಾನಿಸಬೇಕು. ಸ್ತ್ರೀ ಮತ್ತು ಲಕ್ಷ್ಮಿಯಲ್ಲಿ ಯಾವ ಭೇದವೂ ಇಲ್ಲ.

**ಭರ್ತೃಭ್ರಾತೃಪಿತೃಜ್ಞಾತಿಶ್ವಶ್ರೂಶ್ವಶುರದೇವರೈಃ ।**
**ಬಂಧುಭಿಶ್ಚ ಸ್ತ್ರೀಯಃ ಪೂಜ್ಯಾ ಭೂಷಣಾಚ್ಛಾದನಾಶನೈಃ ॥**

(ಯಾಜ್ಞವಲ್ಕ್ಯಸ್ಮೃತಿ ೧/೮೨)

ಪತಿ, ಭ್ರಾತಾ, ಪಿತಾ, ಕುಟುಂಬಿ, ಅತ್ತೆ, ಮಾವ, ಮೈದುನ, ಬಂಧು-ಬಾಂಧವರು ಈ ಪ್ರಕಾರವಾಗಿ ಸ್ತ್ರೀಯ ಎಲ್ಲ ಸಂಬಂಧಿಗಳು

ವಸ್ತ್ರಭೂಷಣಾದಿಗಳಿಂದ ಅವಳನ್ನು ಪೂಜ್ಯಭಾವನೆಯಿಂದ ಸತ್ಕರಿಸುವುದು ಅವರುಗಳ ಕರ್ತವ್ಯವಾಗಿದೆ.*

**ಉಪಾದ್ಯಾಯಾನ್ದಶಾಚಾರ್ಯ ಆಚಾರ್ಯಾಣಾಂ ಶತಂ ಪಿತಾ ।**

**ಸಹಸ್ರಂ ತು ಪಿತೃನ್ ಮಾತಾ ಗೌರವೇಣಾತಿರಿಚ್ಯತೇ ॥**

(ಮನುಸ್ಮೃತಿ - ೯/೧೩೫)

ಹತ್ತು ಉಪಾಧ್ಯಾಯರಿಗಿಂತ ಆಚಾರ್ಯರು, ನೂರು ಆಚಾರ್ಯರುಗಳಿಗಿಂತ ತಂದೆ ಮತ್ತು ಸಾವಿರ ತಂದೆಯರಿಗಿಂತ ತಾಯಿಯ ಗೌರವ ಹೆಚ್ಚಾಗಿರುತ್ತದೆ.

**ಸರ್ವತೀರ್ಥಮಯೀ ಮಾತಾ ಸರ್ವದೇವಮಯಃ ಪಿತಾ ।**

**ಮಾತರಂ ಪಿತರಂ ತಸ್ಮಾತ್ ಸರ್ವಯತ್ನೇನ ಪೂಜಯೇತ್ ॥**

(ಪದ್ಮ.ಸೂ. ೭೩/೧೧)

ಮಾತೆಯು ಸರ್ವತೀರ್ಥಮಯಿಯಾಗಿದ್ದಾಳೆ ಮತ್ತು ತಂದೆ ಸಮಸ್ತ ದೇವತೆಗಳ ಸ್ವರೂಪನಾಗಿದ್ದಾನೆ, ಆದ್ದರಿಂದ ಎಲ್ಲ ಪ್ರಕಾರದಿಂದ ಪ್ರಯತ್ನಪೂರ್ವಕವಾಗಿ ಮಾತಾ-ಪಿತೃಗಳ ಸೇವೆ ಮಾಡಬೇಕು.

**ಜನಕೋ ಜನ್ಮದಾತೃತ್ವಾತ್ ಪಾಲನಾಚ್ಚ ಪಿತಾ ಸ್ಮೃತಃ ।**

**ಗರೀಯಾನ್ ಜನ್ಮದಾತುಶ್ಚ ಯೋಽನ್ನದಾತಾ ಪಿತಾ ಮುನೇ ॥**

**ತಯೋಃ ಶತಗುಣಂ ಮಾತಾ ಪೂಜ್ಯಾ ಮಾನ್ಯಾ ಚ ವಂದಿತಾ ।**

**ಗರ್ಭಧಾರಣಪೋಷಾಭ್ಯಾಂ ಸಾ ಚ ತಾಭ್ಯಾಂ ಗರೀಯಸೀ ॥**

(ಬ್ರಹ್ಮವೈವರ್ತ. ಪು. ಗಣೇಶಖಂಡ. ೩೦)

ಜನ್ಮದಾತ ಮತ್ತು ಪಾಲಿಸಿ-ಪೋಷಿಸುವವನಾದ ಕಾರಣ ಪೂಜ್ಯರಾದವರೆಲ್ಲರ ಜನಕನೂ ಮತ್ತು ತಂದೆಯೂ ಪೂಜ್ಯತಮನೆನಿಸಿ ಕೊಳ್ಳುತ್ತಾನೆ. ಜನ್ಮದಾತನಿಗಿಂತಲೂ ಅನ್ನದಾತನಾದ ತಂದೆ ಶ್ರೇಷ್ಠನಾಗಿದ್ದಾನೆ. ತಾಯಿಯು ಇವರಿಗಿಂತಲೂ ನೂರು ಪಾಲು ಹೆಚ್ಚು ಶ್ರೇಷ್ಠಳೂ ಮತ್ತು ವಂದನೀಯಳೂ ಆಗಿದ್ದಾಳೆ. ಏಕೆಂದರೆ ಅವಳು ಗರ್ಭಧರಿಸಿ ಪೋಷಿಸುತ್ತಾಳೆ.

* ವಸಿಷ್ಠಸ್ಮೃತಿಯಲ್ಲಿಯೂ ಸಹ ಇಂತಹುದೇ ವಚನವಿದೆ.

**ಪುರುಷಾಣಾಂ ಸಹಸ್ರಂ ಚ ಸತೀ ಸ್ತ್ರೀ ಹಿ ಸಮುದ್ಧರೇತ್ ।**
**ಪತಿಃ ಪತಿವ್ರತಾನಾಂ ಚ ಮುಚ್ಯತೇ ಸರ್ವಪಾತಕಾತ್ ॥**
**ನಾಸ್ತಿ ತೇಷಾಂ ಕರ್ಮಭೋಗಃ ಸತೀನಾಂ ವ್ರತತೇಜಸಾ ।**
**ತಯಾ ಸಾರ್ಥಂ ಚ ನಿಷ್ಕರ್ಮೀ ಮೋದತೇ ಹರಿಮಂದಿರೇ ॥**

(ಸ್ಕಂದಪುರಾಣ)

ಸತೀನಾರಿಯು ತನ್ನ ಸತೀತ್ವ ಬಲದಿಂದ (ಪಾತಿವ್ರತ್ಯದಿಂದ) ಸಾವಿರಾರು ಮನುಷ್ಯರನ್ನು ಉದ್ಧಾರಮಾಡುತ್ತಾಳೆ. ಪತಿವ್ರತೆಯ ಪತಿಯು ಸಮಸ್ತ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ. ಪತಿವ್ರತೆಯ ತೇಜಸ್ಸಿನಿಂದಾಗಿ ಸತಿಯ ಸ್ವಾಮಿಯಾದವನಿಗೆ ಕರ್ಮಫಲವನ್ನು ಅನುಭವಿಸಬೇಕಾಗುವುದಿಲ್ಲ. ಅವನು ಎಲ್ಲ ಕರ್ಮಬಂಧನಗಳಿಂದ ಬಿಡುಗಡೆ ಹೊಂದಿ ಸತಿಯೊಡನೆ ಭಗವಂತನ ಪರಮಧಾಮದಲ್ಲಿ ಆನಂದಾನುಭವವನ್ನು ಪಡೆಯುತ್ತಾನೆ.

**ವಿದ್ಯಾಃ ಸಮಸ್ತಾಸ್ತವ ದೇವಿ ಭೇದಾಃ ಸ್ತ್ರಿಯಃ ಸಮಸ್ತಾಃ ಸಕಲಾ ಜಗತ್ಸು ।**

(ಮಾರ್ಕಂಡೇಯ ಪುರಾಣ ೧೧/೬)

ಸಮಸ್ತ ವಿದ್ಯೆ ಮತ್ತು ಸಮಸ್ತ ಸ್ತ್ರೀಯರು ದೇವಿಯದೇ ವಿಭಿನ್ನ ರೂಪವಾಗಿದ್ದಾರೆ.

**ಯಾ ಯಾಶ್ಚ ಗ್ರಾಮ್ಯದೇವ್ಯಃ ಸ್ಯುಸ್ತಾಃ ಸರ್ವಾಃ ಪ್ರಕೃತೇಃ ಕಲಾಃ ।**
**ಕಲಾಂಶಾಂಶಸಮುದ್ಭೂತಾಃ ಪ್ರತಿವಿಶ್ವೇಷು ಯೋಷಿತಃ ॥**

(ದೇವೀ ಭಾಗವತ)

ಎಲ್ಲ ಗ್ರಾಮ್ಯದೇವಿಯರು ಮತ್ತು ವಿಶ್ವದ ಎಲ್ಲ ಸ್ತ್ರೀಯರು ಪ್ರಕೃತಿ ಮಾತೆಯದೇ ಅಂಶರೂಪಿಣಿಯಾಗಿದ್ದಾರೆ.

ಕೃಕಲನೆಂಬ ಹೆಸರಿನ ಒಬ್ಬ ವೈಶ್ಯನು ತನ್ನ ಸಾಧ್ವೀಪತ್ನಿಯಾದ ಸುಕಲೆಯನ್ನು ಮನೆಯಲ್ಲಿ ಅಸಹಾಯಕಳಾಗಿ ಬಿಟ್ಟು ತೀರ್ಥಯಾತ್ರೆ ಮಾಡಲು ಹೊರಟು ಹೋಗಿದ್ದನು. ಅವನು ಅನೇಕ ತೀರ್ಥಕ್ಷೇತ್ರಗಳಲ್ಲಿ ಸಂಚಾರ ಮಾಡಿದನು. ಅಲ್ಲಿ ಶ್ರಾದ್ಧಾದಿ ಸತ್ಕರ್ಮಗಳನ್ನು ಮಾಡಿ ನಾನು ದೊಡ್ಡ ಪುಣ್ಯಕಾರ್ಯ ಮಾಡಿದ್ದೇನೆ ಮತ್ತು ನನ್ನೆಲ್ಲ ಪಿತೃಗಳಿಗೆ ದಿವ್ಯಗತಿ ಪ್ರಾಪ್ತವಾಗಿ ಹೋಗಿದೆಯೆಂದು ತಿಳಿದುಕೊಂಡನು. ಈ ಕಡೆ ಕೃಕಲನು ಹೊರಟು ಹೋದಮೇಲೆ ಸತಿಯಾದ ಸುಕಲೆಯ ಮೇಲೆ ದೊಡ್ಡ ದೊಡ್ಡ ವಿಪತ್ತುಗಳು ಬಂದವು. ಆಕೆ ಬಹು ಕಠಿಣ

ಪರೀಕ್ಷೆಗೆ ಗುರಿಯಾದಳು; ಆದರೆ ಅವಳು ತನ್ನ ಸತೀತ್ವದ ಬಲದಿಂದ ಎಲ್ಲಾ ವಿಪತ್ತುಗಳಿಂದ ಪಾರಾದಳು ಹಾಗೂ ಎಲ್ಲ ಪರೀಕ್ಷೆಗಳಲ್ಲಿ ಸಫಲತೆಯನ್ನು ಪಡೆದಳು. ಯಾವ ವಿಪತ್ತೂ ಸಹ ಅವಳ ಕೂದಲನ್ನು ಕೊಂಕಿಸಲಾರದೇ ಹೋಯಿತು ಮತ್ತು ಅವಳ ಸತೀತ್ವಕ್ಕೆ ಸ್ವಲ್ಪವೂ ಕಳಂಕವುಂಟಾಗಲಿಲ್ಲ. ದೊಡ್ಡ ದೊಡ್ಡ ದೇವತೆಗಳ ಶಕ್ತಿಯು ಕುಂಠಿತವಾಗಿ ಬಿಟ್ಟಿತು. ಆಕಡೆ ಕೃಕಲನು ತನ್ನ ತೀರ್ಥಯಾತ್ರೆಯು ಸಫಲವಾಯಿತೆಂದು ಹೆಮ್ಮೆಪಡುತ್ತ ಹಿಂದಿರುಗಿದಾಗ ತನ್ನ ತಂದೆ-ತಾತಂದಿರು ವಿಶಾಲಕಾಯನಾದ ಪುರುಷನಿಂದ ಕಟ್ಟಲ್ಪಟ್ಟಿರುವುದನ್ನು ನೋಡಿದನು. ಕೇಳಲಾಗಿ ಆ ಪುರುಷನು, ಸಾಕ್ಷಾತ್ ಧರ್ಮವೇ ಆಗಿದ್ದ. ಆತನು-ಪತ್ನಿಯನ್ನು ತ್ಯಾಗಮಾಡಿ ನೀನು ಇದೆಲ್ಲವನ್ನೂ ಮಾಡಿದೆ, ಆದ್ದರಿಂದಲೇ ಈ ನಿನ್ನ ಪೂರ್ವಜರು ಕಟ್ಟಿ ಹಾಕಲ್ಪಟ್ಟರು ಮತ್ತು ಅದರಿಂದಲೇ ನಿನ್ನ ತೀರ್ಥಯಾತ್ರೆ ಸಫಲವಾಗಲಿಲ್ಲ- ಎಂದು ತಿಳಿಸಿದನು. ಧರ್ಮನು ಹೇಳಿದುದರ ಸಾರಾಂಶ ಹೀಗಿದೆ-

ಪೂತಾಂ ಪುಣ್ಯಸಮಾಂ ಸ್ವೀಯಾಂ ಭಾರ್ಯಾಂ ತ್ಯಕ್ತ್ವಾ ಪ್ರಯಾತಿ ಯಃ ।
ತಸ್ಯ ಪುಣ್ಯಫಲಂ ಸರ್ವಂ ವೃಥಾ ಭವತಿ ನಾನ್ಯಥಾ ॥

ಧರ್ಮಾಚಾರಪರಾಂ ಪುಣ್ಯಾಂ ಸಾಧುವ್ರತಪರಾಯಣಾಮ್ ।
ಪತಿವ್ರತರತಾಂ ಭಾರ್ಯಾಂ ಸುಗುಣಾಂ ಪುಣ್ಯವತ್ಸಲಾಮ್ ॥

ತಾಮೇವಾಪಿ ಪರಿತ್ಯಜ್ಯ ಧರ್ಮಕಾರ್ಯಂ ಪ್ರಯಾತಿ ಯಃ ।
ವೃಥಾ ತಸ್ಯ ಕೃತಂ ಸರ್ವೋ ಧರ್ಮೋ ಭವತಿ ನಾನ್ಯಥಾ ॥

ಸರ್ವಾಚಾರಪರಾ ಭವ್ಯಾ ಧರ್ಮಸಾಧನತತ್ಪರಾ ।
ಪತಿವ್ರತರತಾ ನಿತ್ಯಂ ಸರ್ವದಾ ಜ್ಞಾನವತ್ಸಲಾ ॥

ಏವಂಗುಣಾ ಭವೇದ್ ಭಾರ್ಯಾ ಯಸ್ಯ ಪುಣ್ಯಾ ಮಹಾಸತೀ ।
ತಸ್ಯ ಗೇಹೇ ಸದಾ ದೇವಾಸ್ತಿಷ್ಠಂತಿ ಚ ಮಹೌಜಸಃ ॥

ಪಿತರೋ ಗೇಹಮಧ್ಯಸ್ಥಾಃ ಶ್ರೇಯೋ ವಾಂಛಂತಿ ತಸ್ಯ ಚ ।
ಗಂಗಾದ್ಯಾಃ ಸರಿತಃ ಪುಣ್ಯಾಃ ಸಾಗರಾಸ್ತತ್ರ ನಾನ್ಯಥಾ ॥

ಪುಣ್ಯಾ ಸತೀ ಯಸ್ಯ ಗೇಹೇ ವರ್ತತೇ ಸತ್ಯತತ್ಪರಾ ।
ತತ್ರ ಯಜ್ಞಾಶ್ಚ ಗಾವಶ್ಚ ಋಷಯಸ್ತತ್ರ ನಾನ್ಯಥಾ ॥

ತತ್ರ ಸರ್ವಾಣಿ ತೀರ್ಥಾನಿ ಪುಣ್ಯಾನಿ ವಿವಿಧಾನಿ ಚ ।
ಭಾರ್ಯಾಯೋಗೇನ ತಿಷ್ಠಂತಿ ಸರ್ವಾಣ್ಯೇತಾನಿ ನಾನ್ಯಥಾ ॥

ಪುಣ್ಯಭಾರ್ಯಾಪ್ರಯೋಗೇಣ ಗಾರ್ಹಸ್ಥ್ಯಂ ಸಂಪ್ರಜಾಯತೇ ।
ಗಾರ್ಹಸ್ಥ್ಯಾತ್ ಪರಮೋ ಧರ್ಮೋ ದ್ವಿತೀಯೋ ನಾಸ್ತಿ ಭೂತಲೇ ॥

ಮಂತ್ರಾಗ್ನಿಹೋತ್ರಂ ವೇದಾಶ್ಚ ಸರ್ವೇ ಧರ್ಮಾಃ ಸನಾತನಾಃ ।
ದಾನಾಚಾರಾಃ ಪ್ರವರ್ತಂತೇ ಯಸ್ಯ ಪುಸಂಶ್ಚ ವೈ ಗೃಹೇ ॥

ಏವಂ ಯೋ ಭಾರ್ಯಯಾ ಹೀನಸ್ತಸ್ಯ ಗೇಹಂ ವನಾಯತೇ ।
ಯಜ್ಞಾಶ್ಚೈವ ನ ಸಿದ್ಧ್ಯಂತಿ ದಾನಾನಿ ವಿವಿಧಾನಿ ಚ ॥

ನಾಸ್ತಿ ಭಾರ್ಯಾಸಮಂ ತೀರ್ಥಂ ನಾಸ್ತಿ ಭಾರ್ಯಾಸಮಂ ಸುಖಮ್ ।
ನಾಸ್ತಿ ಭಾರ್ಯಾಸಮಂ ಪುಣ್ಯಂ ತಾರಣಾಯ ಹಿತಾಯ ಚ ॥

ಧರ್ಮಯುಕ್ತಾಂ ಸತೀಂ ಭಾರ್ಯಾಂ ತ್ಯಕ್ತ್ವಾ ಯಾಸಿ ನರಾಧಮ ।
ಗೃಹಧರ್ಮಂ ಪತಿತ್ಯಜ್ಯ ಕ್ವಾಸ್ತೇ ಧರ್ಮಸ್ಯ ತೇ ಫಲಮ್ ॥

ತಯಾ ವಿನಾ ಯದಾ ತೀರ್ಥೇ ಶ್ರಾದ್ಧದಾನಂ ಕೃತಂ ತ್ವಯಾ ।
ತೇನ ದೋಷೇಣ ವೈ ಬದ್ಧಾಸ್ತವ ಪೂರ್ವಪಿತಾಮಹಾಃ ॥

ಭವಾಂಶ್ಚೌರಸ್ತ್ವಮೀ ಚೌರಾ ಯೈಶ್ಚ ಭುಕ್ತಂ ಸುಲೋಲುಪೈಃ ।
ತ್ವಯಾ ದತ್ತಸ್ಯ ಶ್ರಾದ್ಧಸ್ಯ ಅನ್ನಮೇವಂ ತಯಾ ವಿನಾ ॥

ಸುಪುತ್ರಃ ಶ್ರದ್ಧಯೋಪೇತಃ ಶ್ರಾದ್ಧದಾನಂ ದದಾತಿ ಯಃ ।
ಭಾರ್ಯಾದತ್ತೇನ ಪಿಂಡೇನ ತಸ್ಯ ಪುಣ್ಯಂ ವದಾಮ್ಯಹಮ್ ॥

ಯಥಾಮೃತಸ್ಯ ಪಾನೇನ ನೃಣಾಂ ತೃಪ್ತಿರ್ಹಿ ಜಾಯತೇ ।
ತಥಾ ಪಿತ್ರಾಣಾಂ ಶ್ರಾದ್ಧೇನ ಸತ್ಯಂ ಸತ್ಯಂ ವದಾಮ್ಯಹಮ್ ॥

ಗಾರ್ಹಸ್ಥ್ಯಸ್ಯ ಚ ಧರ್ಮಸ್ಯ ಭಾರ್ಯಾ ಭವತಿ ಸ್ವಾಮಿನೀ ।
ತ್ವಯೈಷಾ ವಂಚಿತಾ ಮೂಢ ಚೌರಕರ್ಮ ಕೃತಂ ವೃಥಾ ॥

ಅಮೀ ಪಿತಾಮಹಾಶ್ಚೌರಾ ಯೈಶ್ಚ ಭುಕ್ತಂ ತಯಾ ವಿನಾ ।
ಭಾರ್ಯಾ ಪಚತಿ ಚೇದನ್ನಂ ಸ್ವಹಸ್ತೇನಾಮೃತೋಪಮಮ್ ॥

**ಯದನ್ನಮೇವ ಭುಂಜಂತಿ ಪಿತರೋ ಹೃಷ್ಟಮಾನಸಾಃ ।**
**ತೇನೈವ ತೃಪ್ತಿಮಾಯಾಂತಿ ಸಂತುಷ್ಟಾಶ್ಚ ಭವಂತಿ ತೇ ।**
**ಭಾರ್ಯಾಂ ವಿನಾ ಹಿ ಯೋ ಧರ್ಮಃ ಸ ಏವ ವಿಫಲೋ ಭವೇತ್ ॥**

(ಪದ್ಮಪುರಾಣ - ಭೂಮಿಖಂಡ ಅ. ೫೯)

ಧಾರ್ಮಿಕ ಆಚಾರ ಮತ್ತು ಶ್ರೇಷ್ಠ ವ್ರತಾಚರಣೆ ಮಾಡಲು ಯೋಗ್ಯವಾದ ಸದ್ಗುಣಗಳಿಂದ ವಿಭೂಷಿತಳಾದ, ಪುಣ್ಯದಲ್ಲಿ ಅನುರಾಗವುಳ್ಳವಳಾಗಿ ಹಾಗೂ ಪವಿತ್ರ ಹೃದಯವುಳ್ಳವಳಾದ ಪತಿವ್ರತಾ ಪತ್ನಿಯನ್ನು ಯಾವ ಪುರುಷನು ಒಬ್ಬಂಟಿಗಳಾಗಿ ಮನೆಯಲ್ಲಿ ಬಿಟ್ಟು ಧಾರ್ಮಿಕ ಕಾರ್ಯ ಮಾಡಲು ಹೊರಗೆ ಹೋಗುತ್ತಾನೋ; ಅವನಿಂದ ಮಾಡಲ್ಪಟ್ಟ ಎಲ್ಲ ಧಾರ್ಮಿಕ ಕರ್ಮಗಳು ವ್ಯರ್ಥವಾಗಿ ಹೋಗುತ್ತವೆಂಬುದರಲ್ಲಿ ಕಿಂಚಿತ್ತೂ ಸಹ ಸಂದೇಹವಿಲ್ಲ. ಯಾವ ಎಲ್ಲ ಪ್ರಕಾರದ ಸದಾಚಾರಗಳಲ್ಲಿ ಸಂಲಗ್ನಳಾಗಿರುವ, ಪ್ರಶಂಸೆಗೆ ಯೋಗ್ಯವಾದ ಆಚರಣೆಯುಳ್ಳವಳು, ಧರ್ಮಸಾಧನೆಯಲ್ಲಿ ತತ್ಪರಳೂ, ಸದಾ ಪಾತಿವ್ರತ್ಯವನ್ನು ಪಾಲಿಸುವವಳೂ, ಎಲ್ಲ ವಿಷಯಗಳನ್ನು ತಿಳಿದಿರುವವಳೂ ಹಾಗೂ ಜ್ಞಾನದ ಅನುರಾಗಿಣಿಯಾಗಿದ್ದಾಳೋ ಅಂತಹ ಗುಣವತಿ, ಪುಣ್ಯವತಿ ಮತ್ತು ಮಹಾಸತಿ ನಾರಿಯು ಯಾರ ಪತ್ನಿಯಾಗಿರುವಳೋ ಅವಳ ಮನೆಯಲ್ಲಿ ಎಲ್ಲಾ ದೇವತೆಗಳು ಸದಾ ವಾಸಿಸುತ್ತಾರೆ. ಪಿತೃಗಳು ಕೂಡ ಅವಳ ಮನೆಯಲ್ಲಿದ್ದು ನಿರಂತರ ಅವಳ ಕಲ್ಯಾಣವನ್ನು ಬಯಸುತ್ತಿರುತ್ತಾರೆ. ಗಂಗೆ ಮೊದಲಾದ ಪವಿತ್ರ ನದಿಗಳು, ಸಾಗರ, ಯಜ್ಞ, ಗೋವು, ಋಷಿ ಹಾಗೂ ವಿವಿಧ ತೀರ್ಥಗಳು ಸಹ ಆ ಮನೆಯಲ್ಲಿ ಇರುತ್ತವೆ. ಪುಣ್ಯವತಿಯಾದ ಪತ್ನಿಯ ಸಹಯೋಗದಿಂದ ಗೃಹಸ್ಥಧರ್ಮದ ಪಾಲನೆ ಒಳ್ಳೆಯ ರೀತಿಯಲ್ಲಿ ಆಗುತ್ತದೆ. ಈ ಭೂಮಂಡಲದಲ್ಲಿ ಗೃಹಸ್ಥಧರ್ಮಕ್ಕೆ ಮಿಗಿಲಾದ ಧರ್ಮವಾವುದೂ ಇಲ್ಲ.

ಯಾವ ಮನೆಯಲ್ಲಿ ಸಾಧ್ವಿಯಾದ ಸ್ತ್ರೀ ಇರುತ್ತಾಳೋ, ಅವಳ ಮನೆಯಲ್ಲಿ ಮಂತ್ರ, ಅಗ್ನಿಹೋತ್ರ, ಸಂಪೂರ್ಣವೇದ, ಸನಾತನ ಧರ್ಮ ಹಾಗೂ ದಾನ ಮತ್ತು ಸದಾಚಾರವೆಲ್ಲ ಇರುತ್ತವೆ. ಇದೇ ಪ್ರಕಾರ ಯಾರು ಪತ್ನಿರಹಿತನಾಗಿದ್ದಾನೋ, ಅವನ ಮನೆ ಕಾಡಿಗೆ ಸಮಾನ. ಅವನು ಮಾಡಿದ ಯಜ್ಞ ಹಾಗೂ ವಿಧ-ವಿಧವಾದ ದಾನಗಳು ಸಿದ್ಧಿದಾಯಕವಾಗುವುದಿಲ್ಲ. ಸಾಧ್ವೀ ಸ್ತ್ರೀಗೆ ಸಮಾನವಾದ ಯಾವ ತೀರ್ಥಕ್ಷೇತ್ರವೂ ಇಲ್ಲ, ಯಾವ ಸುಖವೂ ಇಲ್ಲ, ಹಾಗೂ ಸಂಸಾರವನ್ನು ದಾಟಿಹೋಗಲು ಮತ್ತು ಕಲ್ಯಾಣ ಸಾಧನೆ ಮಾಡಲು ಪತ್ನಿಗೆ ಸಮನಾದ

ಪುಣ್ಯವಾವುದೂ ಇಲ್ಲ. ಧರ್ಮಪರಾಯಣಳಾದ ತನ್ನ ಸತೀನಾರಿಯನ್ನು ಯಾವಾತನು ಬಿಟ್ಟು ಹೊರಟು ಹೋಗುತ್ತಾನೋ, ಅವನು ಮನುಷ್ಯರಲ್ಲಿ ಅಧಮನು. ಗೃಹಧರ್ಮವನ್ನು ಪರಿತ್ಯಾಗ ಮಾಡಿದ ನಿನಗೆ ಧರ್ಮದ ಫಲವೆಲ್ಲಿ ದೊರಕುತ್ತದೆ? ನಿನ್ನ ಪತ್ನಿಯನ್ನು ಜೊತೆಯಲ್ಲಿ ಕರೆದುಕೊಂಡು ಹೋಗದೆ ನೀನು ತೀರ್ಥಕ್ಷೇತ್ರಗಳಲ್ಲಿ ಮಾಡಿದ ನಿನಗೆ ಧರ್ಮದ ಫಲ ಎಲ್ಲಿ ದೊರಕುತ್ತದೆ? ನಿನ್ನ ಪತ್ನಿಯನ್ನು ಜೊತೆಯಲ್ಲಿ ಕರೆದುಕೊಂಡು ಹೋಗದೆ ನೀನು ತೀರ್ಥಕ್ಷೇತ್ರಗಳಲ್ಲಿ ಮಾಡಿದ ಶ್ರಾದ್ಧ ಮತ್ತು ದಾನಗಳ ದೋಷದಿಂದ ನಿನ್ನ ಪೂರ್ವಜರು ಬಂಧಿತರಾಗಿದ್ದಾರೆ. ನೀನು ಕಳ್ಳನಾಗಿದ್ದೀಯೆ ಮತ್ತು ನಿನ್ನ ಈ ಪಿತೃಗಳೂ ಸಹ ಕಳ್ಳರಾಗಿದ್ದಾರೆ; ಏಕೆಂದರೆ ಲೋಲುಪರಾಗಿ ಇವರುಗಳು ನಿನ್ನಿಂದ ಕೊಡಲಾದ ಶ್ರಾದ್ಧಾನ್ನವನ್ನು ತಿಂದಿದ್ದಾರೆ. ನೀನು ಶ್ರಾದ್ಧಮಾಡುವಾಗ ನಿನ್ನ ಪತ್ನಿಯನ್ನು ಜೊತೆಯಲ್ಲಿ ಇಟ್ಟುಕೊಂಡಿದ್ದಿಲ್ಲ (ನೀನು ಪತ್ನಿ ಸಮೇತನಾಗಿರಲಿಲ್ಲ). ಇದರಿಂದಾಗಿಯೇ ನಿನ್ನ ಕಾರ್ಯವೆಲ್ಲಾ ವ್ಯರ್ಥವಾಗಿದೆ. ಯಾವ ಸುಯೋಗ್ಯ ಪುತ್ರನು ಶ್ರದ್ಧಾಯುಕ್ತನಾಗಿ ತನ್ನ ಪತ್ನಿಯಿತ್ತ ಪಿಂಡದಿಂದ ಶ್ರಾದ್ಧ ಮಾಡುತ್ತಾನೋ, ಅದರಿಂದ ಪಿತರುಗಳಿಗೆ-ಅಮೃತವನ್ನು ಪಾನಮಾಡುವುದರಿಂದ ಯಾವ ತೃಪ್ತಿಯುಂಟಾಗುತ್ತದೆಯೋ, ಅಂತಹುದೇ ತೃಪ್ತಿಯುಂಟಾಗುತ್ತದೆ. ಈಗ ನಾನು ಹೇಳುತ್ತಿರುವ ಈ ಮಾತು ಸತ್ಯವಾಗಿದೆ.

ಪತ್ನಿಯೇ ಗೃಹಸ್ಥಧರ್ಮದ ಒಡತಿಯಾಗಿದ್ದಾಳೆ; ಅವಳಿಲ್ಲದೆಯೇ ನೀನು ಯಾವ ಶುಭಕರ್ಮಮಾಡಿದ್ದೀಯೋ ಅದು ಸ್ಪಷ್ಟವಾಗಿ ನೀನು ಮಾಡಿರುವ ಕಳ್ಳತನವಾಗಿದೆ. ಪತ್ನಿಯು ತನ್ನ ಕೈಯಾರೆ ಅನ್ನವನ್ನು ಯಾವಾಗ ಮಾಡಿ ಕೊಡುತ್ತಾಳೋ, ಆಗ ಅದು ಅಮೃತಕ್ಕೆ ಸಮಾನ ಮಧುರವಾಗಿರುತ್ತದೆ. ಅದೇ ಅನ್ನವನ್ನು ಪಿತೃಗಳು ಪ್ರಸನ್ನರಾಗಿ ಭುಂಜಿಸುತ್ತಾರೆ. ಹಾಗೂ ಅದರಿಂದಲೇ ಅವರಿಗೆ ವಿಶೇಷ ಸಂತೋಷ ಮತ್ತು ತೃಪ್ತಿಯುಂಟಾಗುತ್ತದೆ. ಆದ್ದರಿಂದ ಪತ್ನಿಯು ಜೊತೆಗಿಲ್ಲದೆ ಮಾಡಲ್ಪಡುವ ಧರ್ಮ ನಿಷ್ಫಲವಾಗುತ್ತದೆ.

ಈ ಕೆಲವು ಉದಾಹರಣೆಗಳಿಂದ, ಹಿಂದೂ-ಶಾಸ್ತ್ರಗಳು ನಾರಿಯನ್ನು ಯಾವ ರೀತಿಯಲ್ಲಿ ಆದರಿಸಿವೆಯೋ ಹಾಗೆ ಜಗತ್ತಿನ ಯಾವ ಧರ್ಮವೂ ಆದರಿಸಿಲ್ಲವೆಂಬುದು ಸಿದ್ಧವಾಗಿದೆ. ದೇವಿ ಹಾಗೂ ಜನನಿಯ ರೂಪದಲ್ಲಿ ಕುಮಾರಿ ಅವಸ್ಥೆಯಿಂದಲೇ ನಾರಿಗೆ ಪೂಜ್ಯತೆ ಹಿಂದೂ - ಶಾಸ್ತ್ರಗಳಲ್ಲಿಯೇ ಇದೆ.

ಹಿಂದೂ-ಶಾಸ್ತ್ರಗಳ ಮರ್ಮವನ್ನು ತಿಳಿಯದೆ ಅಥವಾ ಶಾಸ್ತ್ರವನ್ನು ತಿಳಿಯದೆ ಮನಬಂದಂತೆ ನಡೆಯುವ ಕೆಲವು ಹಿಂದೂ-ಪುರುಷರ ನಾರಿಯರ ಬಗ್ಗೆ ಅಸದ್ವ್ಯವಹಾರವನ್ನು ನೋಡಿ ಹಿಂದೂಧರ್ಮ ಹಾಗೂ ಶಾಸ್ತ್ರಗಳ ಮೇಲೆ ದೋಷಾರೋಪಣೆ ಮಾಡುವುದಂತೂ ಸರ್ವಥಾ ಅಜ್ಞಾನದಿಂದಲೇ ಅಲ್ಲವೇ?

❑❑

## ೨೮. ಹದಿನಾರು ಮಂದಿ ಮಾತೆಯರು

ಸ್ತನದಾತ್ರೀ ಗರ್ಭಧಾತ್ರೀ ಭಕ್ಷ್ಯದಾತ್ರೀ ಗುರುಪ್ರಿಯಾ ।
ಅಭೀಷ್ಟದೇವಪತ್ನೀ ಚ ಪಿತುಃ ಪತ್ನೀ ಚ ಕನ್ಯಕಾ ॥

ಸಗರ್ಭಜಾ ಯಾ ಭಗಿನೀ ಪುತ್ರಪತ್ನೀ ಪ್ರಿಯಾಪ್ರಸೂಃ ।
ಮಾತುರ್ಮಾತಾ ಪಿತುರ್ಮಾತಾ ಸೋದರಸ್ಯ ಪ್ರಿಯಾ ತಥಾ ॥

ಮಾತುಃ ಪಿತುಶ್ಚ ಭಗಿನೀ ಮಾತುಲಾನೀ ತಥೈವ ಚ ।
ಜನಾನಾಂ ವೇದವಿಹಿತಾ ಮಾತರಃ ಷೋಡಶ ಸ್ಮೃತಾಃ ॥

(ಬ್ರಹ್ಮವೈವರ್ತಪುರಾಣ. ಗ. ೧೫. ಅ.)

ಸ್ತನಪಾನಮಾಡಿಸುವವಳು, ಗರ್ಭಧಾರಣೆ ಮಾಡುವವಳು, ಭೋಜನ ಏಕ್ಕುವವಳು, ಗುರುಪತ್ನೀ, ಇಷ್ಟದೇವತೆಯ ಪತ್ನೀ, ಮಲತಾಯಿ, ಪಿತೃಕನ್ಯೆ ಎಂದರೆ ಮಲತಾಯಿಯ ಮಗಳು, ಒಡಹುಟ್ಟಿದ ಸೋದರಿ, ಸೊಸೆ, ಅತ್ತೆ, ಅಜ್ಜಿ ಅತ್ತಿಗೆ, ಚಿಕ್ಕಮ್ಮ, ಸೋದರತ್ತೆ, ತಂದೆಯ ತಾಯಿ, ಸೋದರಿ – ಈ ಹದಿನಾರು ಮಂದಿ ಮಾತೆಯರನ್ನು ವೇದಗಳಲ್ಲಿ ಮನುಷ್ಯರಿಗಾಗಿ ತಿಳಿಸಲಾಗಿವೆ.

❑❑

## ೨೯. ಸುಭಾಷಿತಗಳು

ನಾಸ್ತಿ ಸ್ತ್ರೀಣಾಂ ಪೃಥಗ್ಯಜ್ಞೋ ನ ವ್ರತಂ ನಾಪ್ಯುಪೋಷಣಮ್ ।
ಪತಿಂ ಶುಶ್ರೂಷತೇ ಯೇನ ತೇನ ಸ್ವರ್ಗೇ ಮಹೀಯತೇ ॥

(ಮನುಸ್ಮೃತಿ ೫/೧೫೫)

ಸ್ತ್ರೀಯರು (ಪತಿಸೇವೆಯ ಹೊರತು) ಬೇರೆ ಯಜ್ಞ, ವ್ರತ ಮತ್ತು ಉಪವಾಸ ಮಾಡುವ ಆವಶ್ಯಕತೆಯಿಲ್ಲ; ಏಕೆಂದರೆ ಸ್ತ್ರೀಯು ಮಾಡುವ ಪತಿಸೇವೆಯಿಂದಲೇ ಅವಳು ಸ್ವರ್ಗದಲ್ಲಿ ಆದರಕ್ಕೆ ಪಾತ್ರಳಾಗುತ್ತಾಳೆ.

**ಮಾತಾ ಯಸ್ಯ ಗೃಹೇ ನಾಸ್ತಿ ಭಾರ್ಯಾ ಚಾಪ್ರಿಯವಾದಿನೀ।**
**ಅರಣ್ಯಂ ತೇನ ಗಂತವ್ಯಂ ಯಥಾರಣ್ಯಂ ತಥಾ ಗೃಹಮ್॥**

(ಚಾಣಕ್ಯನೀತಿ)

ಯಾರಿಗೆ ಮನೆಯಲ್ಲಿ ತಾಯಿಯಿಲ್ಲವೋ (ಅರ್ಥಾತ್ ತಾಯಿ ಮೃತಳಾಗಿ ಹೋಗಿದ್ದರೆ) ಮತ್ತು ಯಾರ ಪತ್ನಿಯು ಕಟುವಚನದಿಂದ ಮಾತನಾಡುವಳೋ, ಅವನಿಗೆ ಮನೆಯೂ ಕಾಡಿನಂತಾಗಿರುತ್ತದೆ, ಆದುದರಿಂದ ಅವನು ಕಾಡಿಗೆ ಹೋಗುವುದೇ ಉಚಿತ.

**ಸಮುದ್ರಾವರಣಾ ಭೂಮಿಃ ಪ್ರಾಕಾರಾವರಣಂ ಗೃಹಮ್।**
**ನರೇಂದ್ರಾವರಣೋ ದೇಶಶ್ಚರಿತ್ರಾವರಣಾಃ ಸ್ತ್ರಿಯಃ॥**

(ಚಾಣಕ್ಯನೀತಿ)

ಭೂಮಿಯ ರಕ್ಷಣೆ ಸಮುದ್ರದಿಂದ, ಮನೆಯ ರಕ್ಷಣೆ ಆವಾರದ ಗೋಡೆಗಳಿಂದ, ದೇಶದ ರಕ್ಷಣೆ ರಾಜನಿಂದ ಮತ್ತು ಸ್ತ್ರೀಯ ರಕ್ಷಣೆ (ಅವಳ) ಉತ್ತಮ ನಡತೆಯಿಂದ.

**ಮೂರ್ಖಾ ಯತ್ರ ನ ಪೂಜ್ಯಂತೇ ಧಾನ್ಯಂ ಯತ್ರ ಸುಸಂಚಿತಮ್ ।**
**ದಂಪತ್ಯೋಃ ಕಲಹೋ ನಾಸ್ತಿ ತತ್ರ ಶ್ರೀಃ ಸ್ವಯಮಾಗತಾ॥**

(ಚಾಣಕ್ಯನೀತಿ)

ಎಲ್ಲಿ ಮೂರ್ಖನಿಗೆ ಪೂಜ್ಯತೆ ಇಲ್ಲವೋ, ಎಲ್ಲಿ ದವಸ-ಧಾನ್ಯ ಸಂಗ್ರಹವಾಗಿರುತ್ತದೋ, ಎಲ್ಲಿ ಪತಿ-ಪತ್ನಿಯರಲ್ಲಿ ಕಲಹವಿರುವುದಿಲ್ಲವೋ, ಅಲ್ಲಿಗೆ ಲಕ್ಷ್ಮಿಯು ಸ್ವಯಂ ಆಗಮಿಸುತ್ತಾಳೆ.

**ಹರಿಃ ಓಂ ತತ್ಸತ್**

❑❑

## ಗೀತಾ ಪ್ರೆಸ್ ಗೋರಖಪುರ, (ಉ.ಪ) 273 005
## (ನಮ್ಮ ಕನ್ನಡ ಪ್ರಕಟಣೆಗಳು)

### ಪಾರಾಯಣ ಗ್ರಂಥಗಳು

೧ ಶ್ರೀಮದ್ಭಗವದ್ಗೀತೆ (ತತ್ತ್ವವಿವೇಚನೀ ಟೀಕೆ)
೨ ಶ್ರೀಮದ್ಭಗವದ್ಗೀತೆ (ಸಾಧಕ ಸಂಜೀವಿನೀ ಟೀಕೆ) (ಎರಡು ಭಾಗಗಳಲ್ಲಿ)
೩ ಶ್ರೀಮದ್ಭಗವದ್ಗೀತೆ (ಶ್ಲೋಕ, ಅನ್ವಯ, ಪದಚ್ಛೇದ, ತಾತ್ಪರ್ಯ ಸಹಿತ)
೪ ಶ್ರೀಮದ್ಭಗವದ್ಗೀತೆ (ಶ್ಲೋಕ, ತಾತ್ಪರ್ಯ ಸಹಿತ)
೫ ಶ್ರೀಮದ್ಭಗವದ್ಗೀತೆ (ಶ್ಲೋಕ, ತಾತ್ಪರ್ಯ ಸಹಿತ - ಪಾಕೆಟ್ ಸೈಜ್)
೬ ಶ್ರೀಮದ್ಭಗವದ್ಗೀತೆ - ವಿಷ್ಣುಸಹಸ್ರನಾಮ (ಮೂಲ)
೭ ಶ್ರೀ ವಿಷ್ಣುಸಹಸ್ರನಾಮ (ತಾತ್ಪರ್ಯ, ನಾಮಾವಳಿ ಸಹಿತ)
೮ ಶ್ರೀ ವಿಷ್ಣುಸಹಸ್ರನಾಮ ನಾಮಾವಳಿ ಸಹಿತ (ಮೂಲ)
೯ ಹನುಮತ್ ಸ್ತೋತ್ರಾವಳಿ - ಹನುಮಾನ್ ಚಾಲಿಸಾ
೧೦ ನಿತ್ಯ ಸ್ತುತಿ - ಆದಿತ್ಯ ಹೃದಯ
೧೧ ಶ್ರೀ ದುರ್ಗಾ ಸಪ್ತಶತಿ (ಮೂಲ)
೧೨ ಶ್ರೀ ಲಲಿತಾ ಸಹಸ್ರನಾಮ ಸ್ತೋತ್ರ - ನಾಮಾವಳಿ ಸಹಿತ
೧೩ ಶ್ರೀರಾಮಚರಿತ ಮಾನಸ ಸುಂದರ ಕಾಂಡ (ಅರ್ಥಸಹಿತ)
೧೪ ಗಜೇಂದ್ರ ಮೋಕ್ಷ
೧೫ ಗೀತಾಮಾಹಾತ್ಮ್ಯದ ಕಥೆಗಳು
೧೬ ಶ್ರೀರಾಮಚರಿತ ಮಾನಸ ಸಟೀಕ
೧೭ ಸಾರ್ಥಜ್ಞಾನೇಶ್ವರಿ
೧೮ ಶ್ರೀಮದ್ಭಾಗವತ ಅನುವಾದ ಸಹಿತ (೨ ಖಂಡಗಳಲ್ಲಿ)
೧೯ ಈಶಾವಾಸ್ಯೋಪನಿಷತ್
೨೦ ವಾಲ್ಮೀಕೀಯ ಸಂಕ್ಷಿಪ್ತರಾಮಾಯಣ
೨೧ ವಾಲ್ಮೀಕಿ ರಾಮಾಯಣ ಸುಂದರಕಾಂಡ

## ಉಪದೇಶಪರ ಗ್ರಂಥಗಳು

೧ ಭಗವಂತನ ದಯೆ ಮತ್ತು ಭಗವಂತನ ಹೇತುರಹಿತ ಸೌಹಾರ್ದ
೨ ನಾಮ ಜಪದ ಮಹಿಮೆ ಮತ್ತು ಆಹಾರ ಶುದ್ಧಿ
೩ ಸತ್ಯದ ಶರಣಾಗತಿಯಿಂದ ಮುಕ್ತಿ-ಗೀತಾಪಠಣದ ಲಾಭ
೪ ಬಾಲ ಶಿಕ್ಷಾ
೫ ದೇಶದ ವರ್ತಮಾನ ಸ್ಥಿತಿ ಹಾಗೂ ಅವುಗಳ ಪರಿಣಾಮಗಳು
೬ ಸ್ತ್ರೀಯರಿಗೆ ಕರ್ತವ್ಯ ಶಿಕ್ಷಣ
೭ ಗರ್ಭಪಾತವು ಉಚಿತವೇ ಅಥವಾ ಅನುಚಿತವೇ ನಿಮ್ಮ ನಿರ್ಣಯ
೮ ಗೃಹಸ್ಥಾಶ್ರಮದಲ್ಲಿ ಹೇಗಿರಬೇಕು
೯ ಸಾಧನ ನವನೀತ
೧೦ ಮಹಾಪಾಪದಿಂದ ಪಾರಾಗಿರಿ
೧೧ ಪ್ರತ್ಯಕ್ಷ ಭಗವದ್ದರ್ಶನದ ಉಪಾಯ (ಭಕ್ತಿಯೋಗದ ತತ್ತ್ವ)
೧೨ ಮಹಿಳೆಯರಿಗೆ ಮಾರ್ಗದರ್ಶನ
೧೩ ನವಧಾ ಭಕ್ತಿ
೧೪ ಸಂಧ್ಯಾವಂದನೆ ಮತ್ತು ಗಾಯತ್ರೀ ಮಹಿಮೆ
೧೫ ಕರ್ಮ ರಹಸ್ಯ
೧೬ ಶರಣಾಗತಿ
೧೭ ಭಗವತ್ ಪ್ರಾಪ್ತಿಯ ಸುಗಮತೆ
೧೮ ಅಮೂಲ್ಯ ಸಮಯದ ಸದುಪಯೋಗ
೧೯ ವಾಸ್ತವಿಕ ಸುಖ
೨೦ ಗೀತಾಮಾಧುರ್ಯ
೨೧ ಭಗವತ್ ಕೃಪೆ
೨೨ ಉದ್ಧಾರ ಹೇಗಾಗಬಹುದು?

## ಕಥಾ ಗ್ರಂಥಗಳು

೧ ಮಹಾಭಾರತದ ಕೆಲವು ಆದರ್ಶ ಪಾತ್ರಗಳು

೨ ರಾಮಾಯಣದ ಕೆಲವು ಆದರ್ಶ ಪಾತ್ರಗಳು

೩ ಶಿಕ್ಷಾಪ್ರದ ಹನ್ನೊಂದು ಕಥೆಗಳು

೪ ಭಕ್ತಬಾಲಕ

೫ ಸಾವಿತ್ರಿ ಸತ್ಯವಾನ್ ಮತ್ತು ಆದರ್ಶನಾರೀ ಸುಶೀಲಾ

೬ ಉಪಯೋಗೀ ಕಥೆಗಳು

೭ ರಾಮಭಕ್ತ ಹನುಮಾನ್

೮ ನಳದಮಯಂತಿ

೯ ಭಗವಂತನ ಐದು ಆವಾಸ ಸ್ಥಾನಗಳು

೧೧ ಆದರ್ಶ ಭಕ್ತ

೧೧ ಭಕ್ತ ಸಪ್ತರತ್ನ

೧೩ ಭಕ್ತಚಂದ್ರಿಕಾ

೧೪ ಪ್ರೇಮಿ ಭಕ್ತ

೧೫ ಭೀಷ್ಮ ಪಿತಾಮಹ

೧೬ ಮಹಾತ್ಮ ವಿದುರ

೧೭ ಭಗವತ್ಪ್ರೇಮಿ ಉದ್ಧವ

## ವರ್ಣಚಿತ್ರ ಕಥಾ

೧ ನವದುರ್ಗಾ

೨ ಓಂ ನಮಃ ಶಿವಾಯ

೩ ದಶಾವತಾರ